(ರಘಸೀತದ್ರು)'ಕಾಲೆಯಕಷ ರಿದ್ರವಃ॥೭೩॥ ದಾರ್ವೀಪಚಂ ಪಚಾದಾರು ಹರಿದ್ರಾಸರ್ಜನೀ ತ್ಯಪಿ।

ೀ ಅಂದರೆ, ಆನಡಿಯುನ್ನುವರು. ಆಷಾಢೀ ಬೇರು ಪ್ರಸಿದ್ಧ,ಮಜ್ಜಿಗೇಗಡ್ಡೆ,ಅಜ್ಜೀಗಡ್ಡೆ. ಪೀತದ್ರುಃ- ಕಾಲೇಯಕಃ-ಹರಿದ್ರುಃ-ಪ್ರು-ದಾರ್ವೀ-ಪಚಂಪಚಾ- ದಾರುಹರಿದ್ರಾ- ಪ ರ್ಜನೀ-ಸ್ತ್ರೀ-೭-ಮರದರಿಸಿನ,ಕಸ್ತೂರಿ ಅ ರಿಸಿನವೆಂದು ಕೆಲವರನ್ನುವರು. ಹೆಬ್ಬರಿಸಿನ ದೊಡ್ಡರಿಸಿನ, ಕಾಡು ಅರಸಿನ.

ವಚೋಗ್ರಗಂಧಾಷಡ್ಗ್ರಂಥಾ ಗೋಲೊಮೀಶತಪರ್ವಿಕಾ

ವಚಾ-ಉಗ್ರಗಂಧಾ-ಷಡ್ಗ್ರಂಥಾ-ಗೋಲೊಮಿಾ-ಶತಪರ್ವಿಕಾ-ಸ್ತ್ರೀ-೫-ಬಜೇ ಹೆಸರು ಗಳು, ಇದನ್ನು ಮಕ್ಕಳ ತಾಯಿಯೆಂತ ಲೂ ಕವಣದಕಡ್ಡಿಯೆಂತಲೂ ಅನ್ನುವರು.

(ಶುಕ್ಲಾ) ಹೈಮವತೀ

ಹೈಮವತೀ-ಸ್ತ್ರೀ-೧-ಶುಕ್ಲಾ- ಬಿಳೀ ಬ ಜೇ ಹೆಸರು.

ವೈದ್ಯಮಾತೃಸಿಂಹ್ಯೌ (ತು) ವಾಶಕಾ। ವೃಷೊಟರೂಷಸ್ಸಿಂ ಹಾಸ್ಯೋವಾಶ ಕೋವಾಜಿದಂತ ಕಃ॥ ॥೧೪೯॥

ವೈದ್ಯಮಾತಾ-ಖು- ಸಿಂಹೀ- ವಾಶಕಾ-ಷಾ-ವಾಸಕಾ-ಸ್ತ್ರೀ-ವೃಷಃ- ಅಟರೂಷಃ-ಷಾ-ಅಟರುಷಃ- ಸಿಂಹಾಸ್ಯಃ-ವಾಶಕಃ-ಷಾ ವಾಸಕಃ-ವಾಜಿದಂತಕಃ-ಪು ೮-ಅಡ್ಡಸರದ ಗಿಡ, ಆಡುಸೋಗೇ ಗಿಡದ ಹೆಸರು,ಆಡು ಮುಟ್ಟದ ಗಿಡ, ಮೇಕೆವಲ್ಲದ ಗಿಡ-

ಆಸ್ಫೋಟಾ ಗಿರಿಕರ್ಣೀಸ್ಯಾ ದ್ವಿಷ್ಣುಕ್ರಾಂತಾಪರಾಜಿತಾ॥

ಆಸ್ಫೋಟಾ-ಷಾ-ಆಸ್ಫೋಕಾ-ಗಿರಿಕರ್ಣೀ-ವಿಷ್ಣುಕ್ರಾಂತ-ಅಪರಾಜಿತಾ-ಸ್ತ್ರೀ-೪-ವಿಷ್ಣು ಕ್ರಾಂತದಹೆಸರುಗಳು. ಇದು ಜ್ವರಹರವಾ ಗಿಯೂ ಪರಿಣಾಮಶೂಲ ಹರವಾಗಿಯೂ, ಇರುವಚಿಕ್ಕ ಗಿಡ,ಇದರಲ್ಲಿ ಆಸ್ಫೋಟಾಗಿ ರಿಕರ್ಣಿಕಾ- ಈ೨ಶಬ್ದಗಳು ಗಿರಿಕನ್ನಿಕೆಗಿ ಡದ ಹೆಸರುಗಳೆಂದು ಕೆಲವರನ್ನುವರು.

ಇಕ್ಷುಗಂಧಾತು ಕಾಂಡೇಕ್ಷು ಕೊಕಿಲಾಕ್ಷೇಕ್ಷುರಕ್ಷುರಾಃ॥

ಇಕ್ಷುಗಂಧಾ- ಸ್ತ್ರೀ-ಕಾಂಡೇಕ್ಷುಃ-ಕೋ ಕಿಲಾಕ್ಷಃ- ಇಕ್ಷುರಃ-ಕ್ಷುರಃ-ಪ್ರು-೫-ಕೋಳ ವಂಕೇ ಹೆಸರುಗಳು. ತೆಲುಗರಿದನ್ನು ಗೊ ಲಿಮಿಡಿ ಯನ್ನುವರು.

ಶಾಲೆಯುಸ್ಸ್ಯಾಚ್ಛತಶಿಪಾಷ್ಪ

ಶಾಲೇಯಃ-ಪ್ರು-ಶೀತಶಿವಾ-ಸ್ತ್ರೀ-ಷಾ-ಪೀ

ತಾ್ರಮಧುರಿಕಾಮಿಸಿಃ । ಮಿಶ್ರೆಯಾ(ಪ್ಯ

ತಶಿವಃ-ಪು-ಛತಾ್ರ-ಮಧುರಿಕಾ-ಮಿಸಿಃ-ಶ್ರೇಯಾ-ಸ್ತ್ರೀ-೬- ಸಬ್ಬಸಿಕೇಹೆಸರುಗಳು. ತೆಲುಗರಿದನ್ನು ಸದಾಪಯೆಂಬುವರು.

ಥ)ಸಿಂಹುಂಡಃ ವಜ್ರದ್ರುಃ ಸ್ನುಕ್ಸ್ನುಹೀಗುಡಾ॥೧೩೧॥ ಸಮಂತದುಗ್ಧಾ

ಸಿಂಹುಂಡಃ- ವಜ್ರದ್ರುಃ-ಪು-ಸ್ನುಕ್-ಸ್ನುಹೀ- ಗುಡಾ- ಸಮಂತದುಗ್ಧಾ-ಸ್ತ್ರೀ-೬-ಕಳ್ಳೀಹೆಸರುಗಳು. ಬೊಂತೇಕಳ್ಳಿ.

(ಥೊ) ವೆಲ್ಲಮಮೋಘಾಚಿತ್ರತಂಡುಲಾ।ತಂಡುಲಶ್ಚ ಕ್ರಿಮಿಘ್ನಶ್ಚ ವಿಡಂಗಂ (ಪುನ್ನಪುಂಸಕಂ॥)

ವೆಲ್ಲಂ-ನ-ಅಮೋಘಾ-ಚಿತ್ರತಂಡುಲಾ-ಸ್ತ್ರೀ-ತಂಡುಲಃ- ಕ್ರಿಮಿಘ್ನಃ-ಪು-ವಿಡಂಗ-ಪ್ನ-೬-ವಾಯುವಿಳಂಗದ ಹೆಸರುಗಳು.

ಬಲಾವಾಟ್ಯಾಲಕೋ

ಬಲಾ-ಸ್ತ್ರೀ-ವಾಟ್ಯಾಲಕಃ-ಪು-೦-ಬೆ-ಹರಳುಗಿಡ. ಹರಳುಬೀಜವು. ಹರಳೆಯೂ ಪ್ರಸಿದ್ಧ.

ಘಂಟಾರವಾತು ಶಣಪುಷ್ಪಿಕಾ।

ಘಂಟಾರವಾ- ಶಣಪುಷ್ಪಿಕಾ-ಸ್ತ್ರೀ-೨-ಗಿಲಿಗಿಂಚೆಯಗಿಡದ ಹೆಸರುಗಳು. ಗಿಲಿಮರ.

ಮೃದ್ವೀಕಾ ಗೋಸ್ತನೀದಾ್ರಕ್ಷಾಸ್ವಾದ್ವೀಮಧುರ ಸೇತಿಚ॥

ಮೃದ್ವೀಕಾ-ಗೋಸ್ತನೀ-ದಾ್ರಕ್ಷಾ-ಸ್ವಾದ್ವೀ-ಮಧುರಸಾ-ಸ್ತ್ರೀ-೫-ದಾ್ರಕ್ಷೆ ಹೆಸರುಗಳು. ದ್ವೀಪದಾ್ರಕ್ಷೆಗೂ ಚಪ್ಪರದಾ್ರಕ್ಷೆಗೂ ಹೆಸರುಗಳು.

ಸರ್ವಾನುಭೂತಿ ಸ್ಸರಳಾತ್ರಿಪುಟಾತ್ರಿವೃತಾತ್ರಿವೃತ। ತ್ರಿಭಂಡೀರೇಚನೀ

ಸರ್ವಾನುಭೂತಿಃ-ಸರಳಾ-ತ್ರಿಪುಟಾ-ತ್ರಿವೃತಾ-ತ್ರಿವೃತ-ತ್ರಿಭಂಡೀ-ರೇಚನೀ-ಪ್ರರೋಚನೀ-೭- ಕೆಂಪ್ನ ನೇತೆಗಡೆಯ ಹೆಸರುಗಳು. ಬಿಳೀತಿಗಡೆ, ಭೇದಿಯಾಗುವ ಲಾಲ್ತಿಗಡೆ.

ಶ್ಯಾಮಾಪಾಳಿಂದ್ಯಾ(ತುಸುಷೇಣಿಕಾ॥೧೩೪॥ಕಾಲಾಮಸೂರವಿದಳಾರ್ಧಚಂದ್ರಾ ಕಾಲಮೇಷಿಕಾ॥

ಶ್ಯಾಮಾ-ಪಾಳಿಂದೀ-ಪಾ-ಪಾಲಿನೀ-ಸುಷೇಣಿಕಾ-ಕಾಲಾ--ಮಸೂರವಿದಳಾ--ಮಾಷಯೂರವಿದಳಾ- ಅರ್ಧಚಂದ್ರಾ-ಕಾಲಮೇಷಿಕಾ-ಸ್ತ್ರೀ-೭-ಕರೆ ಲಾಲ್ತಿಗಡೆ.

ಮಧುಕಂಕ್ಲೀತಕಂ ಯಷ್ಟಿಮಧುಕಂಮಧುಯಷ್ಟಿಕಾ॥

ಮಧುಕಂ-ಕ್ಲೀತಕಂ-ಯಷ್ಟಿಮಧುಕಂ-ನ-ಮಧುಯಷ್ಟಿಕಾ-ಸ್ತ್ರೀ-೪- ಅತಿಮಧುರದ ಹೆಸರುಗಳು.. ಯಷ್ಟಿಮಧುಕೆ-ಮಿಠ್ಠಾ

ಲಕಡಿ.

ವಿದಾರೀಕ್ಷೀರ ಶುಕ್ಲೇಕ್ಷುಗಂ
ಧಾಕ್ರೋಷ್ಟೀ ಯಾಸಿತಾ।

ವಿದಾರೀ-ಕ್ಷೀರಶುಕ್ಲಾ--ಇಕ್ಷುಗಂಧಾ--ಕ್ರೋಷ್ಟೀ-೪-ಸ್ತ್ರೀ-ಯಾಸಿತಾ-ಬಿಳೀಕುಂಬಳದ ಹೆಸರು.ನೆಲಕುಂಬಳವೆಂದು ಕೆಲವರು, ಬೂದುಗುಂಬಳವೆಂದು ಕೆಲವರನ್ನುವರು.

(ಅನ್ಯಾ) ಕ್ಷೀರವಿದಾರೀಸ್ಯಾ
ನ್ಮಹಾಶ್ವೇತರ್ಕ್ಷ ಗಂಧಿಕಾ॥

ಕ್ಷೀರವಿದಾರೀ-ಮಹಾಶ್ವೇತಾ- ಋಕ್ಷಗಂಧಿಕಾ-ಸ್ತ್ರೀ-೩-ಅನ್ಯಾ-ಕರೀನೆಲಕುಂಬಳದ ಹೆಸರುಗಳು.

ಲಾಂಗಲೀಶಾರದೀ ತೋಯಪಿ
ಪ್ಪಲೀಶಕುಲಾದನೀ।

ಲಾಂಗಲೀ-ಶಾರದೀ-ತೋಯಪಿಪ್ಪಲೀ-ಶಕುಲಾದನೀ-ಸ್ತ್ರೀ-೪-ನೀರುಹಿಂಪ್ಪಲೀಹೆಸರುಗಳು.

ಖರಾಶ್ವಾಕಾರವೀದೀ ಪ್ಯೋ
ಮಯೂರಲೋಚಮಸ್ತಕಃ॥

ಖರಾಶ್ವಾ-ಕಾರವೀ-ಸ್ತ್ರೀ-ದೀಪ್ಯಃ--ಮಯೂರಃ- ಲೋಚಮಸ್ತಕಃ-ಪು- ೫-ಓಮದ ಹೆಸರುಗಳು. ವೋಮು, ವೊವುಕಾಳು ಪ್ರಸಿದ್ಧ.

ಗೋಪೀಶ್ಯಾಮಾ ಶಾರಿಬಾ
ಸ್ಯಾಚ್ಚಂದನೋತ್ಪಲಶಾರಿಬಾ।

ಗೋಪೀ-ಶ್ಯಾಮಾ-ಶಾರಿಬಾ-ಚಂದನಾ-ಪಾ-ಅನಂತಾ-ಉತ್ಪಲಶಾರಿಬಾ- ಸ್ತ್ರೀ-೫-ಸುಗಂಧ ಪಾಲಗಿಡದ ಹೆಸರು, ಸೊಗದೇ ಬೇರು ಪ್ರಸಿದ್ಧ. ಸೊಗದಿ.

ಯೋಗ್ಯವೃದ್ಧಿ ಸಿದ್ಧಿಲಕ್ಷ್ಮ್ಯೌ
ಋದ್ಧಿರಪ್ಯಾಹ್ವಯಾಇಮೇ ॥

ಯೋಗ್ಯಂ-ನ-ಋದ್ಧಿಃ-ಸಿದ್ಧಿಃ-ಲಕ್ಷ್ಮೀ-ಸ್ತ್ರೀ-೪-ಋದ್ಧಿಯೆಂಬುವ ಗ್ರಂಥಿಕ ದ್ರವ್ಯದಹೆಸರುಗಳು.ಇವುವೃದ್ಧೇರಪ್ಯಾಹ್ವಯಾಃ-ಈ ೪ ಶಬ್ಧಗಳೂ ವೃದ್ಧಿಯೆಂಬುವ ಗ್ರಂಥ್ಯೆ ದ್ರವ್ಯಕ್ಕೂ ಹೆಸರುಗಳು. ವೃದ್ಧಿಯೆಂತಲೂ, ಮಹಾ ವೃದ್ಧಿಯೆಂತಲೂ, ಪ್ರಸಿದ್ಧ ಮೂಲಿಕೆ.

ಕದಳೀವಾರಣಬುಸಾರಂಭಾ
ಮೋಚಾಂಶುಮತ್ಫಲಾ। ಕಾಷ್ಠೀ
ಲಾ

ಕದಳೀ-ವಾರಣಬುಸಾ-ರಂಭಾ-ಮೋಚಾ-ಅಂಶುಮತ್ಫಲಾ-ಕಾಷ್ಠೀಲಾ-ಸ್ತ್ರೀ-೭-ಬಾಳೆಗಿಡದಹೆಸರುಗಳು. ರಸಬಾಳೆ ಮೊಂತಾದ ಗಂಬಿಗೆ ಬಾಳೆಗೂ ಹೆಸರುಗಳು.

ಮುದ್ಗಪರ್ಣೀ ಕಾಕಮುದ್ಗಾ

ಮುದ್ಗಪರ್ಣೀ- ಕಾಕಮುದ್ಗಾ-ಸಹಾ-

ಸಹ(ತ್ಯಪಿ||) ೧೫೯||

ವಾರ್ತಾಕೀಹಿಂಗುಳೀಸಿಂಹೀ ಘಂಟಾಕೀದುಷ್ಪ್ರಧರ್ಷಿಣೀ ।

ನಾಕುಲೀಸುರಸಾನಾಗಸುಗಂಧಾಗಂಧನಾಕುಲೀ||೧೬೦|| ನಕುಲೇಷ್ಟಾಭುಜಂಗಾಕ್ಷೀಛತ್ರಾಕೀ ಸುವಹಾ(ಚಸಾ।)

ವಿದಾರಿಗಂಧಾಂಶುಮತೀಸಾಲಪರ್ಣೀಸ್ಥಿರಾಧ್ರುವಾ ||೧೬೧||

ತುಂಡಿಕೇರೀ ಸಮುದ್ರಾಂತಾ ಕಾರ್ಪಾಸೀಬದರೇ(ತಿಚ।)

ಭಾರದ್ವಾಜೀತು(ಸಾವನ್ಯಾ)

ಶೃಂಗೀತುವೃಷಭೋವೃಷಃ।

ಗಾಂಗೇರುಕೀನಾಗ ಬಲಾಝು ಷಾಹ್ರಸ್ವಗವೇಧುಕಾ॥

ಸ್ತ್ರೀ-೩-ಕಾಡುಪೆಸರು,ಕಾಳಿನಗಿಡ, ವೀಹೆಸರುಗಿಡಿದ ಪೆಸರು.

ವಾರ್ತಾಕೀ-ಹಿಂಗುಳೀ-ಸಿಂಹೀ-ಘಂಟಾಕೀ-ದುಷ್ಪ್ರಧರ್ಷಿಣೀ-ಸ್ತ್ರೀ-೫-ಬದನೆಗಿಡದಲ್ಲಿ ಮುಳ್ಳುಜಾತಿ,ಗುಳ್ಳವಾದಿ,ರಾಗುಳ್ಳೆ, ತನಿಗುಳ್ಳ, ರಾಮಗುಳ್ಳ, ಮುಳ್ಳ

ನಾಕುಲೀ-ಸುರಸಾ-ನಾಗಸುಗಂಧಾ-ಗಂಧನಾಕುಲೀ- ನಕುಲೇಷ್ಟಾ-ಭುಜಂಗಾಕ್ಷೀ-ಛತ್ರಾಕೀ-ಸುವಹಾ-ಸ್ತ್ರೀ-೮-ಸರ್ಪಾಕ್ಷಿಗಿಡದಹೆಸರುಗಳು,ಕೆಲವರು ನಾಗಸುಗಂಧಾ ಎಂಬುವಸ್ಥಳದಲ್ಲಿ ರಾಸ್ನಾ- ಸುಗಂಧಾ- ಎಂಪದಗಳಾಗಿ ಹೇಳುವರು. ಹಾವುಕಸ್ತೂರಿಗಿಡ, ನಂಜಾರೇಗಿಡ, ಮುಂಗೀವೇಳ್ವ

ವಿದಾರಿಗಂಧಾ-ಅಂಶುಮತೀ-ಸಾಲಪರ್ಣಾ-ಶಾಲಪರ್ಣೀ- ಸ್ಥಿರಾ-ಧ್ರುವಾ-ಸ್ತ್ರೀ-ಮೂರಲೆ ಹೊನ್ನೆಹೆಸರು. ತೆಲುಗರಿದು ಮುಯ್ಯಾಕುಪೊನ್ನೆ ಎಂಬುವರು.

ತುಂಡಿಕೇರಿ-ಸಮುದ್ರಾಂತಾ- ಕಾರ್ಪಾಸೀ-ಕರ್ಪಾಸೀ-ಬದರಾ-ಸ್ತ್ರೀ-೪-ಹತ್ತಿಯದಹೆಸರು, ಅರಳೇಗಿಡ-ಕರಿಹತ್ತಿ - ಜಡೆಹತ್ತಿ-ಹೊಲದಹತ್ತಿ-ಬಿಳೀಹತ್ತೀ.

ಭಾರದ್ವಾಜೀ-ಸ್ತ್ರೀ-ವನ್ಯಾಸಾ-ಅಡವಿಹತ್ತೀಗಿಡ, ಕಾಡುಹತ್ತೀಗಿಡ, ಕಾಡು ಅರಳೇಗಿಡ.

ಶೃಂಗೀ-ನ್-ವೃಷಭಃ-ಪಾ-ಋಷಭಃ-ವೃಷಃ-ಪು-೩- ಹರೆಗೆಹಾಲೆಯಹೆಸರು. ವೃಷಭವೆಂಬುವಮೂಲಿಕೆ.

ಗಾಂಗೇರುಕೀ--ನಾಗಬಲಾ--ಝುಷಾ-ಹ್ರಸ್ವಗವೇಧುಕಾ--ಸ್ತ್ರೀ-೪-ಹೀರೇಗಿಡದಹೆಸರು. ಇವುಹೀರೆ,ತುಪ್ಪಹೀರೆ, ಕಾಡುಹೀರೆ ಇವು ಕನ್ನಡದ ಹೆಸರುಗಳು.

| | |
|---|---|
| ಧಾಮಾರ್ಗ ವೊಘೊಷಕ (ಸ್ತ್ರೀ) | ಧಾಮಾರ್ಗವಃ--ಘೋಷಕಃ-ಪು-೨-ಕೈಹೀರೆ, ಖೈಹೀರೆ ಹೆಸರುಗಳು, ತೆಲುಗರಿದನ್ನು ಆನಪಕಚೆಟ್ಟೆಂತಲೂ, ಚೇದು ಬೀರಯೆಂತಲೂ ಅನ್ನುವರು. |
| ನ್ಮಹಾಜಾಲೀ (ಸಪೀತಕಃ॥ | ಮಹಾಜಾಲೀ-ಸ್ತ್ರೀ-೧-ಪೀತಕಃ-ಸಃ-ಹಚ್ಚ ಗಿರುವಹುವ್ವುಗಳುಳ್ಳ ಕಾಡುಹೀರೇಗಿಡ |
| ಜ್ಯೋತ್ಸ್ನೀಪಟೋಲಿಕಾಜಾಲೀ | ಜೊತ್ಸ್ನೀ-ಪಟೋಲಿಕಾ-ಜಾಲೀ-ಸ್ತ್ರೀ-೩-ಪಡಪಲ ಗಿಡದಹೆಸರು. |
| ನಾದೆಯಿಭೂಮಿಜಂಬುಕಾ। | ನಾದೇಯಿ-ಭೂಮಿಜಂಬುಕಾ-ಸ್ತ್ರೀ-೨ನೆಲನೇರಳೇ ಹೆಸರುಗಳು, ನಾಯಿನೇರಳೇ ಹೆಸರುಗಳು. |
| (ಸ್ತ್ರೀ)ಲ್ಲಾಂಗಲೀತ್ವಗ್ನಿಶಿಖಾ | ಲಾಂಗಲೀ-ಪಾ-ಲಾಂಗಲಿಕೀ-ಅಗ್ನಿಶಿಖಾ-ಸ್ತ್ರೀ-೩- ಕೊಲುಕುಟಕನಗಿಡದ ಹೆಸರುಗಳು, ತೆಲುಗರಿದನ್ನು ತರಿಗೊಟ್ಟುಚೆಟ್ಟು, ಚಿನ್ನಚೆರುಕುಯೆನ್ನುವರು. |
| ಕಾಕಾಂಗೀಕಾಕನಾಸಿಕಾ॥ | ಕಾಕಾಂಗೀ--ಕಾಕನಾಸಿಕಾ- ಸ್ತ್ರೀ-೨-ಕಾಗಿ ತೊಂಡೇಗಿಡದ ಹೆಸರು, ಹುಚ್ಚು ತೊಂಡೇ. |
| ಗೊಧಾಪದೀತು ಸುವಹಾ | ಗೋಧಾಪದೀ-ಸುವಹಾ-ಸ್ತ್ರೀ-೨- ಹಂಸಪಾದೀಗಿಡದ ಹೆಸರುಗಳು. ತೆಲುಗಿನಲ್ಲಿ-ಚೆಪ್ಪುತಟ್ಟಯೆನ್ನುವರು. |
| ಮುಸಲೀತಾಲಮೂಲಿಕಾ। | ಮುಸಲೀ- ತಾಲಮೂಲಿಕಾ-ಸ್ತ್ರೀ-೨-ನೆಲತಾಟಹೆಸರು, ನೆಲತಾಳೇಗೆಡ್ಡೆ ಯನ್ನುವರು. ಸಾಲಾ ಮಿಶ್ರಿಯೆಂತಲೂ ಕೆಲವರನ್ನುವರು. |
| ಅಜಶೃಂಗೀವಿಷಾಣೀ (ಸ್ತ್ರೀ) | ಅಜಶೃಂಗೀ--ವಿಷಾಣೀ-ಸ್ತ್ರೀ-೨-ಕುರುಟೆಗೇಗಿಡದ ಹೆಸರುಗಳು. ತೆಲುಗರಿದನ್ನು ದುಷ್ಟುಪುಚೆಟ್ಟು ಯೆನ್ನುವರು. |
| ದ್ಗೋಜಿಹ್ವಾದಾರ್ವಿಕೆ(ಸಮೆ)॥ | ಗೋಜಿಹ್ವಾ-ದಾರ್ವಿಕಾಸ್ತ್ರೀ-೨-ಎತ್ತು ನಾಲಿಗೇಗಿಡದ ಹೆಸರುಗಳು. ಚೆಂಡೇಕಾಯಿಗಿಡವೆನ್ನುವರು. |

ತಾಂಬೂಲವಲ್ಲೀತಾಂಬೂಲೀ ನಾಗವಲ್ಲ್ಯ(ಪ್ಯ

ತಾಂಬೂಲವಲ್ಲೀ--ತಾಂಬೂಲೀ-ನಾ ಲ್ಲೀ-ಸ್ತ್ರೀ-೩-ವೀಳ್ಯದಲೇ ಬಳ್ಳಿಯ ಹೆಸ ಳ್ಯದೆಲೇಬಳ್ಳಿ.

ಥ)ದ್ವಿಜಾ। ಹರೇಣೂರೇಣುಕಾ ಕೌಂತೀಕಪಿಲಾಭಸ್ಮಗಂಧಿನೀ॥

ದ್ವಿಜಾ-ಹರೇಣುಃ-ರೇಣುಕಾ-ಕೌಂತೀ- ಲಾ-ಭಸ್ಮಗಂಧಿನೀ-ಸ್ತ್ರೀ-೭-ರೇಣುಕ ವೆಗ್ರಂಧ್ಯದ್ರವ್ಯದಹೆಸರು, ತಕ್ಕೋಲ

ಏಲಾವಾಲುಕಮೈಲೇಯಂಸುಗಂಧೀಹರಿವಾಲುಕಂ। ವಾಲುಕಂ (ಚಾ

ಏಲಾವಾಲುಕಂ-ಪಾ- ಐಳವಾಲುಕಂ- ಯಂ-ನ-ಸುಗಂಧೀ-ನ್--ಪು-ಹರಿವಾಲು ವಾಲುಕಂ-ನ-೫-ಸುರಸುರಕೀಹೆಸರು ಯಾಲಕ್ಕೀಹೆಸರೆಂತಲೂ ಅನ್ನುವರು. ಗರಿಬನ್ನು ಕೊತುರುಬುಡಮು ಅನ್ನುವ

ಥ) ಪಾಲಂಕ್ಯಾಮುಕುಂದಃ ಕುಂದಕುಂದುರೂ ॥೧೬೭॥

ಪಾಲಂಕ್ಯಾ-ಪಾ - ವಾಲುಕ್ಯಾ-ಸ್ತ್ರೀ ಮುಕುಂದಃ-ಕುಂದಃ-ಪಾ-ಕಂದುಃ-ಕು ದುರುಃ-ಪು-೪-ಕುಂದರುಷ್ಕವೆಂಬುವ ಗ ಧ್ಯದ್ರವ್ಯವು, ಮೊಲದ ಕಿವಿಗಡ್ಡೆ.

ಬಾಲಂಹ್ರೀಬೇರಬರ್ಹಿಷ್ಠೋದೀಚ್ಯಂಕೇಶಾಂಬುನಾಮಚ।

ಬಾಲಂ--ಹ್ರೀಬೇರಂ-ಬರ್ಹಿಷ್ಠಂ-ಉ ಚ್ಯಂ-ಕೇಶಾಂಬುನಾಮ-ನ-೫- ಮುಡ ಳದ ಹೆಸರುಗಳು. ಲಾಮಂಚದಲ್ಲಿ ಭೇ ತೆಲುಗಿನಲ್ಲಿ ಕುರುವೇರು ಯೆಂದು ಹೆಸ

ಕಾಲಾನುಸಾರ್ಯವೃದ್ಧಾಶ್ಮಪುಷ್ಪಶೀತಶಿವಾನಿತು॥೧೬೮॥ ಶೈಲೇಯಂ

ಕಾಲಾನುಸಾರ್ಯಂ-ವೃದ್ಧಂ-ಅಶ್ಮಪುಷ್ಪ ಶೀತಶಿವಂ-ಶೈಲೇಯಂ-ನ-೫-ಕಲ್ಲುಹೂವಿ ಹೆಸರು, ಶಿಲಾಪುಷ್ಪ.

ತಾಲಪರ್ಣೀತುದೈತ್ಯಾಗಂಧಕುಟೀಮುರಾ। ಗಂಧಿನೀ

ತಾಲಪರ್ಣೀ-ದೈತ್ಯಾ-ಗಂಧಕುಟೀ-ಮು ರಾ-ಗಂಧಿನೀ- ಸ್ತ್ರೀ- ೫-ಮುರೆ ಯೆಂಬ ಗ್ರಂಧಿಕ ಜಿನಸು, ಮೊರ್ರ.

ಗಜಭಕ್ಷ್ಯಾತುಸುವಹಾಸುರಭೀರಸಾ ॥೧೬೯॥ ಮಹೇರಣಾಕುಂದುರುಕೀಸಲ್ಲಕೀ ಹ್ಲಾದಿನೀತಿಚ।

ಗಜಭಕ್ಷ್ಯಾ-ಸುವಹಾ-ಸುರಭಿಃ- ರಸಾ ಮಹೇರಣಾ-ಕುಂದುರುಕೀ-ಪಾ- ಕುಂದು ಕೀ-ಸಲ್ಲಕೀ-ಹ್ಲಾದಿನೀ-ಸ್ತ್ರೀ-೮-ತರು ಗಿಡದ ಹೆಸರು. ಆನೇಬ್ಯಾಲ.

ಅಗ್ನಿಜ್ವಾಲಾಸುಭಿಕ್ಷಾತುಧಾತಕೀಧಾತುಪುಷ್ಪಿಕಾ ॥೧೭೦॥

ಅಗ್ನಿಜ್ವಾಲಾ-ಸುಭಿಕ್ಷಾ-ಧಾತಕೀ-ಧಾ ತುಪುಷ್ಪಿ-ಸ್ತ್ರೀ-೪-ಧಾತಕೀ ಕುಸುಮ

ಪೃಥ್ವೀಕಾಚಂದ್ರಬಾಲೈಲಾನಿಷ್ಕುಟಿರ್ಬಹುಲಾ

(ಥನಾ।ಸೂಕ್ಷ್ಮೋಲಾ) ಪಳಂ। ಉಪಕುಂಚಿಕಾತುತ್ಥಾ ಕೋರಂಗೀ ತ್ರಿಪುಟಾ ತ್ರುಟಿಃ॥

ವ್ಯಾಧಿಃಕುಷ್ಠಂ ಪಾರಿಭಾವ್ಯಂ ವಾಪ್ಯಂ ಪಾಕಲಮುತ್ಪಲಂ।

ಶಂಖಿನೀಚೋರಪುಷ್ಪೀ ಸ್ಯಾತ್ಕೇಶಿ

(ನ್ಯಥ)ವಿತುನ್ನಕಃ ॥೧೭೦॥ ಝಟಾಮಲಾಜ್ಝಟಾ ತಾಲೀ ಶಿವಾ ತಾಮಲಕೀತಿಚ।

ಪ್ರಪೌಂಡರೀಕಂ ಪೌಂಡರ್ಯ

ಮಥತುನ್ನಃ ಕುಬೇರಕಃ॥ ಕುಣಿಃ ಕಚ್ಛಃ ಕಾಂತಲಕೋ ನಂದಿವೃಕ್ಷೋ

ಥರಾಕ್ಷಸೀ।ಚಂಡಾ ಧನಹರೀ ಕ್ಷೇಮದುಷ್ಪತ್ರಗಣಹಾಸಕಾಃ॥

ವ್ಯಾಡಾಯುಧಂ ವ್ಯಾಘ್ರನಖಂ ಕರಜಂ ಚಕ್ರಕಾರಕಂ।

ಆರೆಹುಳ್ಳು.

ಪೃಥ್ವೀಕಾ-ಚಂದ್ರ,ಬಾಲಾ-ಏಲಾ-ನಿಷ್ಕುಟಿಃ-ಬಹುಲಾ-ಸ್ತ್ರೀ-೫-ದೊಡ್ಡ ಯಾಲಕ್ಕೀ ಹೆಸರುಗಳು.

ಉಪಕುಂಚಿಕಾ-ತುತ್ಥಾ-ಕೋರಂಗೀ-ತ್ರಿಪುಟಾ-ತ್ರುಟಿಃ- ಸ್ತ್ರೀ-೫-ಸೂಕ್ಷ್ಮಾ ಸಾ-ಸಣ್ಣ ಯಾಲಕ್ಕೀ ಹೆಸರು.

ವ್ಯಾಧಿಃ-ಪು-ಕುಷ್ಠಂ-ಪಾರಿಭಾವ್ಯಂ-ವಾಪ್ಯಂ-ಪಾ- ವಪ್ಯಂ-ಪಾಕಲಂ-ಉತ್ಪಲಂ-ನ-೬-ಚಂಗಲಕೋಷ್ಠ.

ಶಂಖಿನೀ-ಚೋರಪುಷ್ಪೀ-ಕೇಶಿನೀ-ಸ್ತ್ರೀ-೩-ಕಡಿಯಾಲದ ಗಿಡದ ಪಸರುಗಳು. ಹಕ್ಕರಿಕೇ ಸೊಪ್ಪಿನ ಹೆಸರು.

ವಿತುನ್ನಕಃ-ಪು-ಝಟಾ-ಅಮಲಾ--ಅಜ್ಝಟಾ-ತಾಲೀ-ಶಿವಾ-ತಾಮಲಕೀ- ಸ್ತ್ರೀ-೭-ಕಿರಿನೆಲ್ಲೀಗಿಡದ ಹೆಸರು.

ಪ್ರಪೌಂಡರೀಕಂ-ಪೌಂಡರ್ಯಂ-ಪಾ-ಪುಂಡರ್ಯಂ-ನ-೩-ಪುಂಡರೀಕ ವೆಂಬುವ ಗ್ರಂಥ್ಯದ್ರವ್ಯದ ಹೆಸರುಗಳು. ಪೆಂಡಾರೆಗೆಡ್ಡೆ, ಪಾಂಡವರ ಮುದ್ದು, ಇದು ಬಿಳೀ ನೈದಿಲೇಗಡ್ಡೆ.

ತುನ್ನಃ-ಕುಬೇರಃ-ಕುಣಿಃ-ಕಚ್ಛಃ-ಕಾಂತಲಕಃ-ನಂದಿವೃಕ್ಷಃ-ಪು-೬-ನಂದಿ ಎಂಬುವ ಮರದ ಹೆಸರು. ಬಸವನಗಿಡ, ನಂದಿವರ್ಧನ ಹುವ್ವು ಪ್ರಸಿದ್ಧ.

ರಾಕ್ಷಸೀ-ಚಂಡಾ-ಧನಹರೀ-ಸ್ತ್ರೀ- ಕ್ಷೇಮಃ-ದುಷ್ಪತ್ರಃ-ಗಣಹಾಸಕಃ- ಪು-೬-ಕರೀ ಕಚೋರ, ಬಲರಾಕ್ಷಸೀಗಡ್ಡೆ.

ವ್ಯಾಳಾಯುಧಂ-ಪಾ-ವ್ಯಾಡಾಯುಧಂ-ವ್ಯಾಘ್ರನಖಂ-ಕರಜಂ-ಪಾ-ಚಕ್ರಕಾರಕಂ-ನ-೪-ವ್ಯಾಘ್ರನಖವೆಂಬ ಗಂಧ ದ್ರವ್ಯ, ಹುಲಿಯುಗುರು ಗಿಡವು.

ಸುಷಿರಾವಿದ್ರುಮಲತಾಕಪೋ
ತಾಂಘ್ರಿರ್ನಟಿರ್ನಲೀ ॥೧೨೫॥
ಧಮನ್ಯಂಜನಕೇಶೀಚ ಹನುರ್ಹ
ಟ್ಟವಿಲಾಸಿನೀ। ಶುಕ್ತಿಶ್ಶಂಖಃಖು
ರಃಕೋಲದಳಂನಖ

ಮಥಾಢಕೀ॥೧೨೬॥ ಕಾಕ್ಷೀ
ಮೃತ್ಸ್ನಾತುವರಿಕಾಮೃತಾಲಕ
ಸುರಾಷ್ಟ್ರಜೆ

ಕುಟನ್ನಟಂದಾಶಪುರಂವಾನೆ
ಯಂಪರಿಪೇಲವಂ ॥೧೨೭॥ ಪ್ಲವ
ಗೋಪುರಗೋನರ್ದ ಕೈವರ್ತೀಮು
ಸ್ತಕಾನಿಚ

ಗ್ರಂಥಿಪರ್ಣಂಶುಕಂಬರ್ಹಂ
ಪುಷ್ಪಂಸ್ಥೌಣೇಯಕುಕ್ಕುರೆ ॥

ಸುಷಿರಾ-ಪಾ-ಶುಷಿರಾ-ವಿದ್ರುಮಲತಾ-
ಪೋತಾಂಘ್ರಿಃ-ನಟಿಃ-ನಲೀ-ಧಮನೀ-ಅಂ
ಜನಕೇಶೀ-ಸ್ತ್ರೀ-೭-ನಳಿ ಎಂಬುವಗ್ರಂಥ
ದ್ರವ್ಯದ ಹೆಸರುಗಳು, ಗೂವಗುತ್ತಿಗೆ, ಹನು-
ಹಟ್ಟವಿಲಾಸಿನೀ- ಶುಕ್ತಿಃ-ಸ್ತ್ರೀ-ಶಂಖಃ
ರಃ-ಪು- ಕೋಲದಳಂ- ನಖಂ-೭- ನ
ಬುವ ಗಂಧಿಕದ್ರವ್ಯ, ನಖವೆಂದರೆಗಂಧ
ಯಲ್ಲಿ ಸೇರತಕ್ಕನಖವೆಂದು ಕೆಲವರನ್ನು
ರು. ಇಲ್ಲಿ ಸುಷಿರಾಶಬ್ದ ಮೊದಲುಗೊಂ
ಡು-ಶಬ್ದಗಳೂನಳಿಗೆಪೆಸರೆಂತಲೂ, ಧಮ
ಶಬ್ದ ಮೊದಲು೪ ಶಬ್ದಗಳು ಬೆತ್ತಕ್ಕೆ ಪೆ
ತಲೂ, ಶುಕ್ತಿಮೊದಲು ೫ ಶಬ್ದಗಳು
ಕ್ಕೆ ಹೆಸರೆಂತಲೂ ಕೆಲವರು ಹೇಳಿದ
ಆಢಕೀ-ಕಾಕ್ಷೀ-ಮೃತ್ಸ್ನಾ-ತುವರಿ
ಸ್ತ್ರೀ-ಮೃತಾಲಕಂ-ಸುರಾಷ್ಟ್ರಜಂ - ನ
ತೊವರಿಮನ್ನೆಯೆಂದು ತೆಲುಗರಿಂದ ಕ
ಲ್ಪಡುವ ತುವರಿಯೆಂಬುವದರಹೆಸರು
ದನ್ನು ಕಾಡು ತೊಗರೀಗಿಡವೆಂದು ಕೆ
ರು ಹೇಳಿದರು. ಮೃತ್ತಾಲಕವೆಂಬುವ
ಅದಲ್ಲಿ ಮೃತ್-ದ-ಸ್ತ್ರೀ-ತಾಲಕಂ-ನ-
ಸರುಗಳಾಗಿ ವಿಭಾಗಿಸಲ್ಪಟ್ಟಿದೆ.
ಕುಟನ್ನಟಂ-ದಾಶಪುರಂ-ವಾನೇಯಂ-
ಪೇಲವಂ-ಪ್ಲವಂ- ಗೋಪುರಂ-ಗೋನರ್ದ
ಕೈವರ್ತೀಮುಸ್ತಕಂ-ನ-೮-ತುಂಗಮುಸ್ತೆ
ಹೆಸರುಗಳು. ತುಂಗೇಗಡ್ಡೆಗಳು, ಗೇ
ಗಡ್ಡೆಯೆಂತಲೂ, ಗಿಕ್ಕಿನ ಗಡ್ಡೆಯೆಂತ
ಅನ್ನುವರು.
ಗ್ರಂಥಿಪರ್ಣಂ-ಶುಕಂ-ಬರ್ಹಂ-ಪುಷ್ಪ
ಪಾ-ಬರ್ಹಪುಷ್ಪಂ-ಸ್ಥೌಣೇಯಂ-ಕು
ರಂ-ನ-೬-ಸ್ಥೌಣೇಯಕವೆಂಬ ಗ್ರಂಥ
ದ್ರವ್ಯದ ಹೆಸರುಗಳು. ಮಾಚಿಪತ್ರೆ

ಮರುನ್ಮಾಲಾತುಪಿಶುನಾಸ್ಪೃ
ಕ್ಕಾದೇವೀಲತಾಲಘುಃ । ಸಮು
ದ್ರಾಂತಾವಧೂಃಕೋಟಿವರ್ಷಾ
ಲಂಕೋಯಿಕೇತ್ಯಪಿ ॥೧೭೯॥

ಮರುನ್ಮಾಲಾ-ಪಾ-ಮರುತ್-ಮಾಲಾ-ಪಿಶುನಾ- ಸ್ಪೃಕ್ಕಾ-ಪಾ-ಸ್ಪೃಕ್ಕಾ-ದೇವೀ-ಲತಾ-ಲಘುಃ-ಸಮುದ್ರಾಂತಾ-ವಧೂಃ-ಕೋಟಿವರ್ಷಾ-ಲಂಕೋಯಿಕಾ- ಪಾ-ಲಂಕಾಸಿಕಾ-ಸ್ತ್ರೀ-೧೦--ಸ್ಪೃಕ್ಕಯೆಂಬ ಗ್ರಂಥ್ಯದ್ರವ್ಯ, ಸಂಕೇಬೇರು.

ತಪಸ್ವಿನೀಜಟಾಮಾಂಸೀಜ
ಟಿಲಾಲೋಮಶಾಮಿಷೀ।

ತಪಸ್ವಿನೀ-ಜಟಾಮಾಂಸೀ - ಜಟಿಲಾ-ಲೋಮಶಾ-ಅಮಿಷೀ-ಪಾ-ಮಿಸೀ-ಸ್ತ್ರೀ-೬-ಜಟಾಮಾಂಸಿ ಹೆಸರುಗಳು.

ತ್ವಕ್ಪತ್ರಮುತ್ಕಟಂಭೃಂಗಂ
ತ್ವಚಂಚೋಚಂವರಾಂಗಕಂ ॥

ತ್ವಕ್-ಚ್-ಸ್ತ್ರೀ-ಪತ್ರಂ-ಉತ್ಕಟಂ-ಭೃಂಗಂ-ತ್ವಚಂ- ಚೋಚಂ- ಪಾ- ಚಂಚಂ-ವರಾಂಗಕಂ-ನ-೭-ಲವಂಗ.

ಕಚರ್ಚೂರಕೋ ದ್ರಾವಿಡಕಃ
ಕಾಲ್ಯಕೋವೇದಮುಖ್ಯಕಃ।

ಕಚರ್ಚೂರಕಃ-ಪಾ--ಕರ್ಚೂರಕಃ-ದ್ರಾವಿಡಕಃ-ಕಾಲ್ಯಕಃ- ವೇದಮುಖ್ಯಕಃ-ಪು-೪-ಗಂಧ ಕಚೋರದ ಹೆಸರುಗಳು.

ಓಷಧ್ಯೋ(ಜಾತಿಮಾತ್ರೇಸ್ಯು)

ಓಷಧ್ಯಃ-ಪಾ-ಓಷಧಯಃ-ಸ್ತ್ರೀ-ಬ-೧-ಜಾತಿಮಾತ್ರೇಸ್ಯುಃ- ಆಕಾರಮಾತ್ರದಿಂದಲೇ ಬೇರೆಬೇರೆಯಾಗಿ ಕಾಣಬರುತ್ತಿರುವ ಲತಾದಿ ಜಾತಿಗಳಲ್ಲಿಯೇ ವರ್ತಿಸುವದು.

(ರಜಾತೌ)ಸರ್ವಮೌಷಧಂ॥

ಔಷಧಂ-ನ-ಅಜಾತೌ-ಜಾತಿವ್ಯತಿರಿಕ್ತಗಳಾಗಿ ರೋಗಹರಗಳಾದ, ಸರ್ವಂ-ಎಲ್ಲಾ ಮದ್ದುಗಳು.

ಶಾಕಾಖ್ಯಂಪತ್ರಪುಷ್ಪಾದಿ

ಶಾಕಾಖ್ಯಂಪತ್ರಪುಷ್ಪಾದಿ-ಭೋಜನಾರ್ಹಗಳಾದ,ಎಲೆ,ಹುವ್ವು, ಕಾಯಿ,ಕಡ್ಡಿ,ದಂಟು, ಮುಂತಾದವುಗಳುಳ್ಳ, ತರಕಾರೀಹೆಸರು,ಪಲ್ಲ್ಯಗಳು(ಶಾಕಂ-ಅ-ನ-೧.

ತಂಡುಲೀಯೋಲ್ಪಮಾರಿಷಃ।

ತಂಡುಲೀಯಃ-ಅಲ್ಪಮಾರಿಷಃ-ಪು-೨-ಕೀರೇಸೊಪ್ಪು.

ವಿಶಲ್ಯಾಗ್ನಿಶಿಖಾನಂತಾ ಫಲಿ
ನೀಶಕ್ರಪುಷ್ಪ್ಯಪಿ ॥೧೮೦॥

ವಿಶಲ್ಯಾ-ಅಗ್ನಿಶಿಖಾ- ಅನಂತಾ-ಫಲಿನೀ-ಪಾ-ಹಲಿನೀ-ಶಕ್ರಪುಷ್ಪೀ-ಸ್ತ್ರೀ-೫- ಬೆಂಡೆ ಬಿದುರುಸೊಪ್ಪು, ಅಗ್ನಿಶಿಖೆ.

ಸ್ತ್ಯಾದೃಕ್ಷೇಗಂಧಾಭಗಲಾಂಡ್ಯಾ
ವೇಗೀವೃದ್ಧದಾರಕಃ । ಜಾಂಗೂ

ಬ್ರಾಹ್ಮೀತುಮತ್ಸ್ಯಾಕ್ಷೀವಯ
ಸ್ಥಾಸೋಮವಲ್ಲರೀ ॥೧೮೩॥

ಪಟುಪರ್ಣೀಹೈಮವತೀಸ್ವ
ರ್ಣಕ್ಷೀರೀಹಿಮಾವತೀ ।

ಹಯಪುಚ್ಛೀತುಕಾಂಭೋಜೀ
ಮಾಷಪರ್ಣೀ ಮಹಾಸಹಾ ॥

ತುಂಡಿಕೇರೀರಕ್ತಫಲಾಬಿಂಬಿ
ಕಾಪೀಲುಪರ್ಣ್ಯಪಿ ॥

ಬರ್ಬರಾಕಬರೀತುಂಗೀಖರ
ಪುಷ್ಪಾಜಗಂಧಿಕಾ ॥೧೮೫॥

ಎಲಾಪರ್ಣೀತುಸುವಹಾರಾ
ಸ್ನಾಯುಕ್ತರಸಾಚಸಾ ।
ಚಾಂಗೇರೀ ಚುಕ್ರಿಕಾದಂತಶ
ಠಾಂಬಷ್ಠಾಮ್ಲಲೋಣಿಕಾ೧೮೬

ಸಹಸ್ರವೇಧೀಚುಕ್ರೋಮ್ಲ
ವೇತಸಶ್ಯತವೇಧ್ಯಪಿ ।

ನಮಸ್ಕಾರೀ ಗಂಧಕಾರೀಸ
ಮಂಗಾಖದಿರೇತ್ಯಪಿ ॥೧೮೮॥

ಜೀವಂತೀಜೀವನೀಜೀವಾಜೀ

ಖಮುಕ್ಷೇಗಂಧಾ-ಭಗಲಾಂಡೀ-ವಾ-
ತ್ರೀ-ಅವೇಗೀ- ಸ್ತ್ರೀ-ವೃದ್ಧದಾರಕ-
ಗಃ-ಪು-೫-ಅನಂತಸ ಗೊಂಡೇಸೊಪ್ಪು
ಉಗರಿದನ್ನು ಬೊಡತರಮು ಯನ್ನು

ಬ್ರಾಹ್ಮೀ-ಪಾ-ಬ್ರಹ್ಮೀ-ಮತ್ಸ್ಯಾಕ್ಷೀ-
ಯಸ್ಥಾ-ಸೋಮವಲ್ಲರೀ-ಸ್ತ್ರೀ-೪-
ಗೊಸೇಸೊಪ್ಪು.

ಪಟುಪರ್ಣೀ- ಹೈಮವತೀ- ಸ್ವರ್ಣ-
ರೀ-ಹಿಮಾವತೀ-ಸ್ತ್ರೀ-೪-ಕಂಕೋ-
ಹೆಸರು. ಘಂಟಾಮೊಣೀ ಸೊಪ್ಪು.

ಹಯಪುಚ್ಛೀ--ಕಾಂಭೋಜೀ-
ಕಾಂಬೋಜೀ-ಮಾಷಪರ್ಣೀ-ಮಹಾಸ
ಸ್ತ್ರೀ-೪-ಕಾಡುಉದ್ದಿನಗಿಡ.

ತುಂಡಿಕೇರೀ-ರಕ್ತಫಲಾ-ಬಿಂಬಿಕಾ-
ಲುಪರ್ಣೀ-ಸ್ತ್ರೀ-೪-ದೊಂಡೇಗಿಡದ
ರು. ಕೆಂಪು ತೊಂಡೇಗಿಡ.

ಬರ್ಬರಾ-ಕಬರೀ-ತುಂಗೀ-ಖರಪು-
ಅಜಗಂಧಿಕಾ-ಸ್ತ್ರೀ-೫-ನಾರಂಬ್ಯಾ-
ದ ಹೆಸರುಗಳು, ವಾಯಿಂಟಚೆಟ್ಟು,

ಏಲಾಪರ್ಣೀ-ಸುವಹಾ-ರಾಸ್ನಾ, ಯು-
ರಸಾ-ಸ್ತ್ರೀ-೪-ಸ್ನಾದುಂಪರಾಸ್ನೆ, 

ಚಾಂಗೇರೀ- ಚುಕ್ರಿಕಾ-ದಂತಶಠಾ-
ಬಷ್ಠಾ-ಅಮ್ಲಲೋಣಿಕಾ-ಸ್ತ್ರೀ-೫-
ಪುರಚೀಸೊಪ್ಪಿನ ಹೆಸರು.

ಸಹಸ್ರವೇಧೀ-ನ-ಚುಕ್ರಃ-ಅಮ್ಲವೇ-
ಶತವೇಧೀ-ನ-ಪು-೪-ಹುಳಿಹಕ್ಕಿಹೆಸರು
ಹುಣಸೆ.

ನಮಸ್ಕಾರೀ- ಗಂಧಕಾರೀ- ಸಮಂ-
ಖದಿರಾ-ಸ್ತ್ರೀ-೪-ಮುಟ್ಟಿದರೆ ಮುನಿ-
ಸರುಗಳು. ಮುಟ್ಟುಮುದುಗಗಿಡ.

ಜೀವಂತೀ- ಜೀವನೀ- ಜೀವಾ-ಜೀ-

ಮನೀಯಾಮಧು (ಶ್ಲೋಕ ೧)
ಕೂರ್ಚಶೀರ್ಷೋ ಮಧುರ ಕಃಶೃಂಗಹ್ರಸ್ವಾಂಗ ಜೀವಕಾಃ

ಯಾ-ಮಧುಃ-ಸ್ತ್ರೀ-೫-ಕಿರಿಹಾಲೆಸೊಪ್ಪು.
ಕೂರ್ಚಶೀರ್ಷಃ-ಮಧುರಕಃ- ಶೃಂಗಃ-ಹ್ರಸ್ವಾಂಗಃ-ಜೀವಕಃ-ಪು-೫- ಜೀವಕವೆಂಬುವ ಔಷಧ, ಹಕ್ಕೀಶಿಳ್ಳೆಗಿಡ.

ಕಿರಾತತಿಕ್ತೋ ಭೂನಿಂಬೋ ಸಾರ್ಯತಿಕ್ತೊ

ಕಿರಾತತಿಕ್ತಃ - ಭೂನಿಂಬಃ- ಅನಾರ್ಯತಿಕ್ತಃ-ಪು-೩-ನೆಲಬೇವು, ಇದರಲ್ಲಿ ದೇಶಾವರವನ್ನೇ ಚಿರಾಯಿತವೆನ್ನುವರು.

ಥಸಪ್ತಲಾ । ವಿಮಲಾಸಾತಲಾಭೂರಿಫೇನಾ ಚರ್ಮಕಷೇತ್ಯಪಿ।

ಸಪ್ತಲಾ- ವಿಮಲಾ-ಸಾತಲಾ-ಭೂರಿಫೇನಾ--ಚರ್ಮಕಷಾ-ಸ್ತ್ರೀ-೫- ಸಂಮಗಾರೆಯೆಂಬುವದು. ಸಂಬರೇಣಿ.

ವಾಯಸೋಲೀ ಸ್ವಾದುರಸಾ ವಯಸ್ಥಾ

ವಾಯಸೋಲೀ-ಸ್ವಾದುರಸಾ-ವಯಸ್ಥಾ-ಪಾ-ಕಾಯಸ್ಥಾ-ಸ್ತ್ರೀ-೩- ಕಾಕೋಳಿಸೊಪ್ಪು, ಗೊರಿಮಿಡಿ.

ಥಮುಕೂಲಕಃ । ನಿಕುಂಭೊ ದಂತಿಕಾಪ್ರತ್ಯಕ್ಶ್ರೇಣ್ಯುದುಂಬರಪರ್ಣ್ಯಪಿ ॥೯೧॥

ಮುಕೂಲಕಃ- ಪಾ- ಮಕೂಲಕಃ- ನಿಕುಂಭಃ-ಪು-ದಂತಿಕಾ- ಪ್ರತ್ಯಕ್ಶ್ರೇಣೀ-ಉದುಂಬರಪರ್ಣೀ-ಸ್ತ್ರೀ-೫-ದಂತಿಗಿಡದಹೆಸರುಗಳು. ಆಂಧ್ರದಲ್ಲಿ ದಂತಿಚೆಟ್ಟು, ಕೆಲವರು ವೃದ್ಧವೈದ್ಯರು ದಂತಿಯುಂದರೆ,ಜಾಪಾಳದಶತ್ತೆಯೆಂತಲೂ, ಕೆಲವರು ಕರೇಉಂಮತ್ತವೆಂತಲೂ ಹೇಳುವರು.

ಅಜಮೋದಾ ತೂಗ್ರಗಂಧಾ ಬ್ರಹ್ಮದರ್ಭಾಯವಾನಿಕಾ।

ಅಜಮೋದಾ- ಉಗ್ರಗಂಧಾ- ಬ್ರಹ್ಮದರ್ಭಾ-ಯವಾನಿಕಾ-ಸ್ತ್ರೀ-೪-; ಅಜಮೋದದ ಹೆಸರುಗಳು, ಓಮುಕಾಳು.

ಮೂಲೆಪೌಷ್ಕರಕಾಶ್ಮೀರಪದ್ಮಪತ್ರಾಣಿಪೌಷ್ಕರೆ ।

ಪೌಷ್ಕರಂ-ಕಾಶ್ಮೀರಂ-ಪದ್ಮಪತ್ರಂ-ನ-೩-ಪೌಷ್ಕರಮೂಲೆ-ತಾವರೇಗಡ್ಡೆ,ಕಾಶ್ಮೀರದಲ್ಲಿ ನೆಲತಾವರೇಗಡ್ಡೆ.

ಅವ್ಯಥಾತಿಚರಾಪದ್ಮಾ ಚಾರಟೀಪದ್ಮಚಾರಿಣೀ ।

ಅವ್ಯಥಾ-ಅತಿಚರಾ-ಪದ್ಮಾ-ಚಾರಟೀ-ಪದ್ಮಚಾರಿಣೀ-ಸ್ತ್ರೀ-೫--ಕಾಶ್ಮೀರದೇಶದಲ್ಲಿರುವ ಬೆಟ್ಟದಾವರೇ ಹೆಸರು.

ಕಾಂಪಿಲ್ಯಃಕರ್ಕಶಶ್ಚಂದ್ರೊ ರಕ್ತಾಂಗೋ ರೋಚನೀತ್ಯಪಿ।

ಕಾಂಪಿಲ್ಯಃ-ಕರ್ಕಶಃ-ಚಂದ್ರಃ-ರಕ್ತಾಂಗಃ-ಪು-ರೋಚನೀ-ಸ್ತ್ರೀ-೫- ಕಂಪಿಲ್ಲದಪ

ಪ್ರಪುನ್ನಾಟಸ್ತ್ವೇಡಗಜೋ ದದ್ರುಘ್ನಶ್ಚಕ್ರಮರ್ದಕಃ । ಪದ್ಮಾಟಉರಣಾಖ್ಯಶ್ಚ

ಪಲಾಂಡುಸ್ತು ಸುಕಂದಕಃ ।

ಲತಾರ್ಕದುದ್ರುಮೌ (ತತ್ರ ಹರಿತೆ

ಥ) ಮಹೌಷಧಂ॥ ಲಶುನಂ ಗೃಂಜನಾರಿಷ್ಟ ಮಹಾ ಕಂದರ ಸೊನಕಾಃ ॥೧೯೪॥

ಪುನರ್ನವಾತು ಶೋಥಘ್ನೀ

ವಿತುನ್ನಂಸುನಿಷಣ್ಣಕಂ ।

ಸ್ಯಾದ್ವಾತಕಃಶೀತಲೊಪರಾಜಿತಾಶತಪರ್ಣ್ಯಪಿ॥

ಪಾರಾವತಾಂಘ್ರಿಃ ಕಟಭಿಃ ಪಣ್ಯಾಜ್ಯೋತಿಷ್ಮತೀಲತಾ॥

ವಾರ್ಷಿಕಂತ್ರಾಯಮಾಣಾಸ್ಯಾತ್ತ್ರಾಯಂತೀ ಬಲಭದ್ರಿಕಾ ॥ ವಿಷ್ವಕ್ಸೇನಪ್ರಿಯಾಘೃಷ್ಟಿರ್ವಾರಾಹೀಬದರೆತ್ಯಪಿ ।

ಸರು. ರೋಚನೀಯೆಂಬುವ ಓಷಧಿ ... ನ್ನು ಘಟ್ಟದ ಕೆಳಗೆ ವಸಾರೆಯನ್ನು...

ಪ್ರಪುನ್ನಾಟಃ-ಏಡಗಜಃ - ದದ್ರುಘ್ನಃ-ಚಕ್ರಮರ್ದಕಃ-ಪದ್ಮಾಟಃ-ಉರಣಃ-ಪಾ-ಉರಣಾಖ್ಯಃ-ಪು-೬-ತಗಚೇಗಿಡ... ಸರುಗಳು, ತಗಿಚಿ, ತಗ್ಗಚ್ಚಿ.

ಪಲಾಂಡುಃ-ಸುಕಂದಕಃ-ಪು-...ಳ್ಳೀಹೆಸರುಗಳು.

ಲತಾರ್ಕಃ-ದುದ್ರುಮಃ-ಪು-...ಹರಿತ್ರ-ಹಳದೀ ನೀರುಳ್ಳಿಹೆಸರು, ತೋಟ... ರುಳ್ಳಿಯೆಂದು ಹೇಳುವರು.

ಮಹೌಷಧಂ-ಲಶುನಂ-ನ-ಗೃಂಜನಃ-ರಿಷ್ಟಃ-ಮಹಾಕಂದಃ-ರಸೋನಕಃ-ಪು-... ಬೆಳ್ಳುಳ್ಳೀಗಡ್ಡೆ.

ಪುನರ್ನವಾ-ಶೋಥಘ್ನೀ-ಸ್ತ್ರೀ-...ವ್ಮಗಿಡ.

ವಿತುನ್ನಂ-ಸುನಿಷಣ್ಣಕಂ-ನ-...ಚೆಂಚಲಿ,ಸುಲಿವಲ್ಲ.

ವಾತಕಃ-ಪು-ಪಾ--ವಾತಕೀ-ಸ್ತ್ರೀ-...ಲಃ-ಪು-ಪಾ--ಶೀತಲಾ-ಅಪರಾಜಿತಾ-ಶ...ರ್ಣೀ-ಪಾ-ಅಸನಪರ್ಣೀ-ಸ್ತ್ರೀ-೪-ಸಿಡಿ... ಲ್ಲದಗಿಡ.

ಪಾರಾವತಾಂಘ್ರಿಃ--ಕಟಭಿಃ--ಪಣ್ಯಾ-ಜ್ಯೋತಿಷ್ಮತೀ-ಲತಾ-ಸ್ತ್ರೀ-೫- ಕಂಗ...ಗೇಗಿಡ, ಕಂಗೋದೀಗಿಡ, ಮಿಂಚುಬಳ್ಳಿ... ಡ,ಸರ್ವಜ್ಞತೆಓಷಧಿ-ಜ್ಯೋತಿಷ್ಮತೀ.

ವಾರ್ಷಿಕಂ-ನ-ತ್ರಾಯಮಾಣಾ-ತ್ರಾಯಂತೀ-ಬಲಭದ್ರಿಕಾ-ಸ್ತ್ರೀ-೪-ನೀರಾವಮಬಳ್ಳಿ...

ವಿಷ್ವಕ್ಸೇನಪ್ರಿಯಾ-ಘೃಷ್ಟಿಃ-ವಾರಾಹೀ-ಬದರಾ-ಸ್ತ್ರೀ-೪-ಹಾವುಮಟ್ಟೇಬಳ್ಳಿ - ತೆಲು... ದನ್ನು ವಾಚಿತೀಗೆಯನ್ನುವರು. ವಾರ್ಷಿಕಾ...

೮-ಶಬ್ದಗಳೂವಾರಾಹಿಯೆಂಬ ಮೂಲಿಕೆಗೆ ಹೆಸರಾಗಿ ಹೇಳುವರು.

ಮಾರ್ಕವೋಭೃಂಗರಾಜ(ಸ್ಯಾ)

ಮಾರ್ಕವಃ-ಭೃಂಗರಾಜಃ-ಪು-೨-ಗರಗ ದಸೊಪ್ಪು.

ತ್ಕಾಕಮಾಚೀತುವಾಯಸೀ॥

ಕಾಕಮಾಚೀ-ವಾಯಸೀ-ಸ್ತ್ರೀ-೨-ಕಾಚೀಗಿಡ.

ಶತಪುಷ್ಪಾಸಿತಛತ್ರಾತಿಛತ್ರಾ ಮಧುರಾಮಿಸಿಃ। ಅವಾಕ್ಪುಷ್ಪೀ ಕಾರವೀಚ

ಶತಪುಷ್ಪಾ-ಸಿತಛತ್ರಾ-ಅತಿಛತ್ರಾ-ಮಧುರಾ-ಮಿಸಿಃ-ಪಾ-ಮಸಿಃ- ಅವಾಕ್ಪುಷ್ಪೀ-ಕಾರವೀ- ಸ್ತ್ರೀ- ೭-ಕಾಡುಸಬ್ಬಸಿಕೇಹೆಸರು, ಅಂಧ್ರದಲ್ಲಿ ಪೆದ್ದಸದಾಪ.

ಸಾರಿಣೀತುಪ್ರಸಾರಿಣೀ ॥ (ತಸ್ಯಾಂ)ಕಟಂಭರಾ ರಾಜಬಲಾಭದ್ರಬಲೇತಿಚ।

ಸಾರಿಣೀ-ಪಾ-ಸಾರಣಾ-ಪ್ರಸಾರಿಣೀ-ಕಟಂಭರಾ-ರಾಜಬಲಾ-ಭದ್ರಬಲಾ-ಸ್ತ್ರೀ- ೫ ಕಿರಿಯಪಸಾರಣೀಗಿಡ, ಸಾರಣೀಗಿಡ, ಆಂಧ್ರದಲ್ಲಿ ಗೊಂತೆಮ ಗೋರುಚೆಟ್ಟು.

ಜನೀಜತೂಕಾಜನನೀಜತುಕೃಚ್ಚಕ್ರವರ್ತಿನೀ॥ ೧೯೯॥ ಸಂಸ್ಪರ್ಶಾ

ಜನೀ-ಜತೂಕಾ-ಪಾ-ಜಮಾಕಾ-ಜನನೀ-ಪಾ-ರಜನೀ-ಜತುಕೃತ್- ಪಾ-ಜಂತುಕೃತ್-ಚಕ್ರವರ್ತಿನೀ-ಸಂಸ್ಪರ್ಶಾ- ಸ್ತ್ರೀ-೬-ಕೋರಿಂದೇಗಿಡದಹೆಸರು, ಚಕ್ರವರ್ತೀಸೊಪ್ಪು

ಥಶಟೀಗಂಧಮೂಲೀಷಡ್ಗ್ರಂಥಿಕೇತ್ಯಪಿ। ಕಚ್ಚೂರೋಪಿಪಲಾಶೋ

ಶಟೀ-ಗಂಧಮೂಲೀ-ಷಡ್ಗ್ರಂಥಿಕಾ-ಸ್ತ್ರೀ-ಕಚ್ಚೂರಃ-ಪಾ-ಕರ್ಬುರಃ-ಪಲಾಶಃ- ಪು-೫-ಗಂಟಿಕಚೋರ.

(ಥ) ಕಾರವೆಲ್ಲಃಕಟಿಲ್ಲಕಃ॥ ಸುಷವೀಚಾ

ಕಾರವೆಲ್ಲಃ-ಕಟಿಲ್ಲಕಃ-ಪಾ-ಕಟಿಲ್ಲಕಃ-ಪು-ಸುಷವೀ-ಪಾ-ಸುಶವೀ-ಸ್ತ್ರೀ-೩- ಹಾಗಲಗಿಡ-ಈ೩-ಶಬ್ದಗಳೂ ಹಾಗಲ, ಕಾಡುಹಾಗಲ, ಗಡ್ಡೆಹಾಗಲ, ಬಂಜೆಹಾಗಲ, ಈಯೆಲ್ಲಹಾಗಲಕ್ಕೂಹೆಸರುಗಳು.

ಥ ಕುಲಕಂ ಪಟೋಲಸ್ತಿಕ್ತಕಃಪಟುಃ।

ಕುಲಕಂ-ನ--ಪಟೋಲಃ-ತಿಕ್ತಕಃ--ಪಟುಃ-ಪು-೪-ಪೈಪಡವಲಗಿಡ, ಹುಚ್ಚುಪಡವಲಗಿಡ.

ಕೂಶ್ಮಾಂಡಕಸ್ತು ಕರ್ಕಾರು

ಕೂಶ್ಮಾಂಡಕಃ-ಪಾ-ಕೂಷ್ಮಾಂಡಕಃ-ಕರ್ಕಾರುಃ-ಪು-೨- ಕುಂಬಳಗಿಡದಹೆಸರು.

ಶೀಕೆಂಬಳಬಳ್ಳೀ, ಈ೨-ಶಬ್ದಗಳ್ ಕೆಂಬಳೆ, ಹೆಗ್ಗುಂಬಳೆ, ಬೂಜುಕು ನೆಲಕುಂಬಳೆ, ಬೆಟ್ಟಕುಂಬಳೆ, ಕಿರಿಕು ಳೆ, ೬ ಜಾತಿಗಳಿಗೂ ಹೆಸರುಗಳು.

ಉರ್ವಾರುಃಕರ್ಕಟೀ (ಸ್ತ್ರಿ ಯೌ) ॥೨೦೧॥

ಉರ್ವಾರುಃ-ಕರ್ಕಟೀ-ಸ್ತ್ರೀ-೨-ಸೌ ಗಿಡದಹೆಸರುಗಳು. ಇಲ್ಲಿ ಉರ್ವಾರುಶ ವು ಬಂಣಾಸೌತೇಕಾಯಿಗೂ, ಕರ್ಕ ಬ್ದ ಕಾಡುಸೌತೇಕಾಯಿಗು ಹೆಸರು

ಇಕ್ಷ್ವಾಕುಃ ಕಟುತುಂಬೀ (ಸ್ತ್ರಿಯಾಂ)

ಇಕ್ಷ್ವಾಕುಃ-- ಕಟುತುಂಬೀ-ಸ್ತ್ರೀ ಪ್ಪೆಸೂರೇಗಿಡ.

ತ್ತುಂಬ್ಯಲಾಬೂ ( ರುಭೆ ಸಮೆ ।)

ತುಂಬೀ-ಅಲಾಬೂಃ-ಪು- ಅಲಾ ಪು-ಅಲಾಬೂ-ಸ್ತ್ರೀ-೨-ಶೀಸೋರೆ ಹೆಸರುಗಳು, ಕಾಯಿಸೋರೆ.

ಚಿತ್ರಾಗವಾಕ್ಷೀಗೊತುಂಬಾ

ಚಿತ್ರಾ-ಗವಾಕ್ಷೀ-ಗೋತುಂಬಾ-ಸ್ತ್ರೀ ಹೆಮುಕ್ಕರಹೆಸರು. ಆಂಧ್ರನೀಶಬ್ದಗಳ ಲ್ಲಪಾಪರಚೆಟ್ಟು ಯೆಂತಲೂ ಬುಡು ಯಿಯೆಂತಲೂ ಹೇಳುವರು.

ವಿಶಾಲಾತ್ವಿಂದ್ರವಾರುಣೀ।

ವಿಶಾಲಾ-ಇಂದ್ರವಾರುಣೀ-ಸ್ತ್ರೀ- ನುಮುಕ್ಕೀಗಿಡದಹೆಸರು. ಪಾಪಬೀಗಿ ದು ಕೆಲವರರ್ಥಹೇಳುವರು.

ಅರ್ಶೋಘ್ನಃಸೂರಣಃ ಕಂದೊ

ಅರ್ಶೋಘ್ನಃ-ಸೂರಣಃ-ಕಂದಃ-ಪು ಚೂರ್ಣದಗೆಡ್ಡೆ, ಸೂರಣದಗಡ್ಡೆ, ಅ ಲ್ಲಿ, ಕಂದಗಡ್ಡೆ.

ಗಂಡೀರಸ್ತು ಸಮಷ್ಟಿಲಾ।

ಗಂಡೀರಃ-ಪು-ಸಮಷ್ಟಿಲಾ-ಸ್ತ್ರೀ- ಥ್ರದಲ್ಲಿ ಯೇರುವಂಗ, ಮಾನವಂದ ದೇಶದಲ್ಲಿ ಇರದಕಾಯಿಗಳು ವೋ ಯೆಂಬದಾಗಿ ಪಶುಗಳಹುಣ್ಣಿಗೆಕಟ್ಟು

ಕಲಂಬ್ಯುಪೊದಕಾ(ಸ್ತ್ರೀತು) ಮೂಲಕಂಹಿಲಮೊಚಿಕಾ॥ವಾಸ್ತುಕಂ (ಶಾಕಭೇದಾಃಸ್ಯುಃ)

ಕಲಂಬೀ-ಸ್ತ್ರೀ-೧- ಉಪೋದಕಾ ಉಪೋದಕೀ-ಸ್ತ್ರೀ-೧- ಮೂಲಕಂ ಹಿಲಮೋಚಿಕಾ-ಸ್ತ್ರೀ-೧-ವಾಸ್ತುಕಂ ವಾಸ್ತೂಕಂ- ನ-೧- ಈ ೬ನ್ನು ಶಾಕ

ದಾಸ್ಸ್ಯಾಃ-ಕ್ರಮವಾಗಿ ಬಿಳಿ ಬಿಟ್ಟ ಲಿನೊಪ್ಪು ಕಾವು ಬಚ್ಚಲೆ, ಮೂಲಂಗಿ, ಚಿಲಿಕೆಸೊಪ್ಪು, ಚಕ್ರವರ್ತಿಸೊಪ್ಪು, ಈ ತರಕಾರಿಗಳಿಗೆ ಹೆಸರುಗಳು.

ದೂರ್ವಾತು ಶತಪರ್ವಿಕಾ। ಸಹಸ್ರವೀರ್ಯಾ ಭಾರ್ಗವ್ಯೌ ರುಹಾನಂತಾ (ಥಸಾಸಿತಾ) ॥೧೦೪॥ ಗೋಲೋಮೀ ಶತವೀರ್ಯಾ ಚ ಗಂಡಾಲೀ ಶಕುಲಾಕ್ಷಕಃ।

ದೂರ್ವಾ-ಶತಪರ್ವಿಕಾ-ಸಹಸ್ರವೀರ್ಯಾ-ಭಾರ್ಗವೀ-ರುಹಾ- ಅನಂತಾ-ಸ್ತ್ರೀ-೬-ಗರಿಕೆ ಹುಲ್ಲಿನ ಹೆಸರುಗಳು.

ಗೋಲೋಮೀ-ಶತವೀರ್ಯಾ-ಸ್ತ್ರೀ-೨-ಸಿತಾಸಾ-ಬಿಳೀಗರಿಕೆಹುಲ್ಲು, ಗಂಡಾಲೀ-ಸ್ತ್ರೀ-ಶಕುಲಾಕ್ಷಕಃ-ಪು-೨- ಬಿಳಿಗರಿಕೇಹುಲ್ಲು, ಈ ೪-ಬಿಳೀ ಗರಿಕೇ ಹೆಸರೆಂದು ಕೆಲವರ ಸ್ನವರು.

ಕುರುವಿಂದೋ ಮೇಘನಾಮಾ ಮುಸ್ತಾ ಮುಸ್ತಕ (ಮಸ್ತ್ರಿಯಾಂ)

ಕುರುವಿಂದಃ-ಮೇಘನಾಮಾ-ನ-ಪು-ಮುಸ್ತಾ- ಸ್ತ್ರೀ-ಮುಸ್ತಕಂ-ಪ್ನ- ೪-ನೀಳವಾದ ತುಂಗೇಗಡ್ಡೆ, ಉದ್ವಾನೇ ತುಂಗೇಮುಸ್ತೇ, ಭದ್ರಮುಸ್ತೇಹೆಸರು.

ಸ್ಯಾದ್ಭದ್ರ ಮುಸ್ತಕೋಗುಂದ್ರಾ

ಭದ್ರಮುಸ್ತಕಃ-ಪು-ಗುಂದ್ರಾ-ಸ್ತ್ರೀ-೨-ಕೆಂಪುಛಾಯೆಭದ್ರಮುಸ್ತಗಳು, ದೊಡ್ಡವೇ ಭದ್ರಮುಸ್ತಗಳು.

ಚೂಡಾಲಾ ಚಕ್ರಲೋಚ್ಚಟಾಃ।

ಚೂಡಾಲಾ-ಚಕ್ರಲಾ-ಉಚ್ಚಟಾ-ಸ್ತ್ರೀ-೩- ಮಂದುಗಡ್ಡೆವಳಿಗೆ ಅನೇಕವಾಲೆತೆಗಳುಳ್ಳ ಗಂಟುಮುಸ್ತೆಗಳು.

ವಂಶೇ ತ್ವಕ್ಸಾರ ಕರ್ಮಾರ ತ್ವಚಿಸಾರ ತೃಣ ಧ್ವಜಾಃ॥೧೦೫॥ ಶತಪರ್ವಾ ಯವಫಲೋ ವೇಣುಮಸ್ಕರ ತೇಜನಾಃ (ವೇಣವಃ) ಕೀಚಕಾ (ಸ್ತೇ ಸ್ಯುರ್ಯೇ ಸ್ವನಂತ್ಯನಿಲೋದ್ಧತಾಃ)॥

ವಂಶಃ- ತ್ವಕ್ಸಾರಃ- ಕರ್ಮಾರಃ-ತ್ವಚಿಸಾರಃ-ತೃಣಧ್ವಜಃ-ಶತಪರ್ವಾ-ನ-ಯವಫಲಃ-ವೇಣುಃ- ಮಸ್ಕರಃ-ತೇಜನಃ-ಪು-೧೦- ಬಿದುರು ಹೆಸರುಗಳು.

ಕೀಚಕಾಃ-ಪು-ಬ-ಯೇಅನಿಲೋದ್ಧತಾಃ-ಸ್ವನಂತಿತೇವೇಣವಃಕೀಚಕಾಃ- ಯಾವ ಬಿದುರುಗಳು ಗಾಳಿಯಿಂದ ಹೊಡೆಯಲ್ಪಟ್ಟು ಕೂಗುತ್ತಿರುವವೋ ಅಂಥಾ ಬಿದುರುಗಳ ಹೆಸರು.

ಗ್ರಂಥೀ (ನಾ) ಪರ್ವಪರು ಷೀ.

ಗುಂದ್ರಸ್ತೇಜನಕಶ್ಶರಃ॥

ನಡಸ್ತು ಧಮನಃ ಪೋಟಗ ಳೋ

ಥೆ ಕಾಶ (ಮಸ್ತ್ರಿಯಾಂ)ಇ ಕ್ಷುಗಂಧಾಪೋಟಗಳ(ಪುಂಭೂ ಮನಿತು) ಬಲ್ಬಜಾಃ।

ರಸಾಲಇಕ್ಷು

(ಸ್ತ್ರಬ್ಬ ನಾಃ) ಪುಂಡ್ರಕಾಂ ತಾರಕಾದಯಃ ॥೨೯॥

(ನ್ಯಾ)ದ್ವೀರ ಣಂವೀರತರಂ

(ಮೂಲೆನ್ಯೋ) ಶೀರ(ಮಸ್ತ್ರಿ ಯಾಂ।) ಅಭಯಂನಲದಂಸೇವ್ಯ ಮಮೃಣಾಳಂ ಜಲಾಶಯಂ॥ ಲಾಮಜ್ಜಕಂಲಘುಲಯು ಮವ ದಾಹೇಷ್ಟಕಾಪಥೆ।

ಗ್ರಂಥಿಃ-ಪು-ಪರ್ವ-ನ್-ಪರುಃ-ಷ್ಟ ಬಿದುರುಗೆಣ್ಣು ಗಳಪೆಸರುಗಳು,ಉಕ್ತ ತಪುಲ್ಲಿಂಗವೂ ಉಂಟು.

ಗುಂದ್ರಃ-ತೇಜನಕಃ-ಶರಃ-ಪು-ಷ್ಟ ಬಿದುರು.

ನಡಃ- ಧಮನಃ-ಪೋಟಗಳಃ-ಪು ದೇವನಾಳದ ಹೆಸರುಗಳು, ದೇವ ಕಡ್ಡಿಗಳಿಗೂ ಹೆಸರುಗಳು.

ಕಾಶಂ-ಪ್ನ-ಇಕ್ಷುಗಂಧಾ-ಸ್ತ್ರೀ-ಪೋ ಳಃ-ಪು-ಷಿ- ಜಂಬುಹುಲ್ಲು, ಗೋರ ಲ್ಲು,ಬಲ್ಬಜಾಃ-ಪು-ಬ-ಗ-ಮೆದೆಯ ಹ ಹುಲ್ಲು ಮೆದೆ ಮತ್ತು ಹಕ್ಕಿಗಳಗೂ ಕ್ಕ ನಾನಾಬಗೇ ಸಣ್ಣ ಹುಲ್ಲು. ಈ-೪-ಪ ಹುಲ್ಲು ಹೆಸರೆಂದು ಕೆಲವರನ್ನುವರು ಥದಲ್ಲಿ ರೆಳ್ಳಗಸುವು.

ರಸಾಲಃ - ಇಕ್ಷುಃ-ಪು-೨- ಕಬ್ಬಿ ಸರುಗಳು.

ಪುಂಡ್ರಃ-ಕಾಂತಾರಕಃ- ಆದಿಪದದ ಕೋಶಕಾರಃ- ಪು-ಷಿ-ತದೆ ದಾಃ- ಕಬ್ಬ ಭೇದಗಳು, ರಸಾಳೇಮುಂತಾದ್ದು.

ವೀರಣಂ-ವೀರತರಂ-ನ-೨-ಮುರಕ ಹೆಸರುಗಳು, ಕೆಲವರು ಲಾಳೀ ಕಡ್ಡಿ ನ್ನುವರು, ಕೆಲವರು ಹುಲ್ಲಾಳೀ ಕಡ್ಡಿ ನ್ನುವರು.

ಉಶೀರಂ- ಪ್ನ-ಅಭಯಂ- ನಲದಂ ವ್ಯಂ-ಅಮೃಣಾಳಂ-ಜಲಾಶಯಂ- ಲಾಮ ಕಂ-ಲಘುಲಯಂ-ಪೂ- ಲಘು-ಲಯಂ-ಅ ದಾಹಂ-ಇಷ್ಟಕಾಪಥಂ-ನ-೧೦- ಅಸ್ಯಮ ಲೆ-ಈಹುಲ್ಲಾಳೇ ಬೇರುಗಳಾದ ಲಾಮ ದಹೆಸರುಗಳು, ಈ೧೦-ಶಬ್ದಗಳೂ ಕಡ್ಡ ನ ಸೋಗೆಗಳಿಗೂ,ಸೂನಂಗಿಗೂ, ಕಬ್ಬ

ಬೇರುಗಳಿಗೂ,ಲಾಮಂಚಕ್ಕೆ ಗಂಧದಹುಲ್ಲಿ ಗೂ ಹೆಸರುಗಳೆಂದು ಕೆಲವರನ್ನುವರು, ಇ ವುಗಳಲ್ಲಿ ನಲದಶಬ್ದವು ಪೊಲ್ಲಿಂಗವಿಶಿಷ್ಟ ಲಾ ಮಂಚದ ಹೆಸರುಗಳೆಂದು ಕೆಲವರು.

ನಡಾದ ಯಸ್ತ್ರೀಲ ಣಂಗರ್ಮ್ರ ಚ್ಛ್ಯಾಮಾಕಪ್ರಮುಖಾಅಪಿ ।

ನಡಾದಯಃ-ಗರ್ಮ್ರಚ್ಛ್ಯಾಮಾಕ ಪ್ರಮುಖಾಅಪಿತೃಣಂ-ನಡಶಬ್ದ ಮೊದಲ್ಗೊಂಡು ಇದುವರೆಗೂ ಹೇಳಲ್ಪಟ್ಟಶಬ್ದಗಳ ಅರ್ಥ ಗಳೂ, ಮತ್ತು ಗರ್ಮುತ್-ಕ-ಕೊರ್ಲೆ ಕಾ ಳು ಅಂದರೆ ನವಣೇಕಾಳು. ಶ್ಯಾಮಾಕಃ- ಸಾಮೆಕಾಳು ಮುಂತಾದ ತೃಣಧಾನ್ಯವಾ ಚಕಗಳಾದ ಶಬ್ದಗಳಿಂದ ಹೇಳಲ್ಪಡುವವೆ ಲ್ಲವೂ, ತೃಣಂ-ನ-ತೃಣಶಬ್ದವಾಚ್ಯವು. ಅಂ ದರೆ ಇವೆಲ್ಲವೂ ತೃಣವಿಶೇಷಗಳು.

(ಅಸ್ತ್ರೀ) ಕುಶಂಕು ಥೋದ ರ್ಭಃಪವಿತ್ರ

ಕುಶಂ-ಪ್ನ-ಕುಥಃ-ದರ್ಭಃ- ಪವಿತ್ರಂ- ನ-೪-ದರ್ಭೆ ಹುಲ್ಲಿನ ಹೆಸರುಗಳು. ವಿಶ್ವಾ ಮಿತ್ರದರ್ಭೆ,ಬ್ರಹ್ಮದರ್ಭೇ,ವಸಿಷ್ಠದರ್ಭೆ, ತೃಣದರ್ಭೆ.

(ಮಥ) ಕತ್ತೃಣಂ । ಪೌರ ಸೌಗಂಧಿ ಕಧ್ಯಾಮ ದೇವಜಗ್ಧ ಕರೌಹಿಷಂ ॥೧೧॥

ಕತ್ತೃಣಂ-ಪೌರಂ-ಸೌಗಂಧಿಕಂ - ಧ್ಯಾ ಮಂ-ಪೌ-ಧ್ಯಾಯಂ-ದೇವಜಗ್ಧಕಂ- ರೌಹಿ ಷಂ-ನ-೬-ಕಾಚೀಹುಲ್ಲು,ಕಾಚೀಕಡ್ಡಿ,ಹಂ ಚೀಕಡ್ಡಿ, ಬರಗುಕಡ್ಡಿ, ಇವುಗಳೆಲ್ಲಕ್ಕೂ ಹೆಸರುಗಳು.

ಛತ್ರಾತಿಛತ್ರಪಾಲಘ್ನೌ

ಛತ್ರಾ-ಸ್ತ್ರೀ-ಅತಿಛತ್ರಃ-ಪಾಲಘ್ನಃ- ಪು ೩-ಕೊಡೇಹುಲ್ಲಿನ ಹೆಸರುಗಳು. ಛತ್ರಾ ಕಾರವಾದ ಹುಲ್ಲು, ಛತ್ರಾತಿಛತ್ರವೆಂದು ಏಕಪದವಾಗಿ ಕೆಲವರು ಹೇಳಿದರು.

ಮಾಲಾತೃಣಕಭೂಸ್ತೃಣೆ।

ಮಾಲಾತೃಣಕಂ-ಭೂಸ್ತೃಣಂ- ನ-೨- ಮಾರವಳೀ ಹುಲ್ಲಿನಹೆಸರು, ತೆಲುಗರಿದಂ ನು ಚಿಪ್ಪಕಸುವು ಎನ್ನುತ್ತಾರೆ, ಚಿಟ್ಟಹು ಲ್ಲು, ಇದರಿಂದ ಬಹಳ ನಾಪೆಗಳನ್ನು ಮಾ ಡುತ್ತಾರೆ.

ಶಷ್ಪಂಬಾಲತೃಣಂ

ಶಷ್ಪಂ-ಬಾಲತೃಣಂ-ನ-೨-ಎಳೇ ಹುಲ್ಲಿನ ಹೆಸರು, ಎಳೇಗರಿಕೆ ಮುಂತಾದದ್ದು.

ಘಾಸೊಯವಸ

ಘಾಸಃ-ಯವಸಃ-ಪು-ಯಾವಸಃ-೨-ಪಶುಗಳು ತಿನ್ನತಕ್ಕ ಹುಲ್ಲಿನ ಹೆಸರುಗಳು.

ಸ್ತೃಣಮರ್ಜುನಂ ॥೧೩೪॥

ತೃಣಂ-ಅರ್ಜುನಂ-ನ-೨- ಸಾಮಾನ್ಯವಾಗಿ ನಾನಾಬಗೇ ಹುಲ್ಲುಗಳಿಗೂ ಹುಬ್ಬೆರಿಕೇ ಹುಲ್ಲಿಗೂ ಹೆಸರು.

(ತೃಣಾನಾಂ ಸಂಹತಿ) ಸ್ತೃಣ್ಯಾ

ತೃಣ್ಯಾ-ಸ್ತ್ರೀ-೧- ತೃಣಾನಾಂಸಂಹತಿಃ ಹುಲ್ಲನಾಮೆ, ಹುಲ್ಲುರಾಶಿ, ಹುಲ್ಲು ಹೊರೆ ಹುಲ್ಲುಮೆದೆ, ಹುಲ್ಲುಮೂಟೆ, ಹುಲ್ಲು

ನಡ್ಯಾತು (ನಡಸಂಹತಿಃ)

ನಡ್ಯಾ-ಸ್ತ್ರೀ-೧-ನಡಸಂಹತಿಃ- ಹೊದ್ದೆಗಳಬದುವುಗಳಲ್ಲಿಯೂ ತೋಟದ ಅರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ.

ತೃಣರಾಜಾಹ್ವಯ ಸ್ತಾಳೊ

ತೃಣರಾಜಾಹ್ವಯಃ-ತಾಳಃ-ಪು-೨-ತಾಳೇಮರದಹೆಸರು, ತಾಳೇಹುವ್ವಿನಮರವೆಂತಲೂ,ತಾಳೇವಾಲೇಮರವೆಂತಲೂ ಕೆಲವರು ಬರಂದಾಗ್ಯೂ ಬಹುಮಂದಿ ತಾಳೇವಾಲೇಮರವೆನ್ನುವರು, ಹೆಂಡತಾಳೆ, ಶ್ರೀತಾಳೆ, ಕೆಂ... ತಾಳೆ.

ನಾಳಿಕೆರಸ್ತುಲಾಂಗಲೀ ॥

ನಾಳಿಕೇರಃ-ಪು-ನಾರಿಕೇಳಃ-ಲಾಂಗಲೀನ್-ಪು-ತೆಂಗಿನಮರದ ಹೆಸರುಗಳು.

ಘೊಂಟಾತು ಪೂಗಃ ಕ್ರಮುಕೊಗುವಾಕಃ ಖಪುರೊ

ಘೋಂಟಾ-ಸ್ತ್ರೀ-ಪೂಗಃ-ಕ್ರಮುಕಃ ಗುವಾಕಃ- ಪು-ಗೂವಾಕಃ-ಖಪುರಃ-ಪು-ಅಡಿಕೇಮರದಹೆಸರುಗಳು.

(ಸ್ಯಾತು। ಫಲ) ಮುದ್ವೆಗ

ಉದ್ವೇಗಂ-ನ-೧- ಅಸ್ಯಫಲಂ-ಅಡಿಕೇಮರದ ಫಲಕ್ಕೆಹೆಸರು, ಅಡಿಕೇ...

ಮೆತೆಚ ಹಿಂತಾಲ ಸಹಿತಾಸ್ತ್ರಯಃ ॥೧೩೫॥ ಖರ್ಜೂರಃ ಕೇತಕೀತಾಳೀ ಖರ್ಜೂರೀಚತ್ರ

ಹಿಂತಾಲಸಹಿತಾಃ-ಕಿರುತಾಳೇಗಿಡ... ದಿಗೆ ಸೇರಿದ (ಪ್ರತೆತ್ರಯುಶ) ಈ ಹೇಳಲ್ಪಟ್ಟ (ತಾಳೆ)ನಾರಿಕೇಳ ಕ್ರಮುಕಗಳು

...ದ್ರುಮಾಃ ।

ಇತಿವನೌಷಧಿವರ್ಗಃ.

---

ಸಿಂಹೋಮೃಗೇಂದ್ರಃಪಂಚಾಸ್ಯೋಹರ್ಯಕ್ಷಃ ಕೇಸರೀಹರಿಃ ॥

ಶಾರ್ದೂಲದ್ವೀಪಿನೌವ್ಯಾಘ್ರೇ

ತರಕ್ಷುಸ್ತು ಮೃಗಾದನಃ ।

ವರಾಹ ಸ್ಸೂಕರೋಘೃಷ್ಟಿಃ ಕೋಲಃ ಪೋತ್ರೀ ಕಿರಿಃ ಕಿಟಿಃ ॥ ದಂಷ್ಟ್ರೀಘೋಣೀ ಸ್ತಬ್ಧರೋಮಾಕ್ರೋಡೋ ಭೂದಾರ (ಇತ್ಯಪಿ)

ಕಪಿಪ್ಲವಂಗ ಪ್ಲವಗ ಶಾಖಾಮೃಗವಲೀ ಮುಖಾಃ ॥ ಮರ್ಕಟೋ ವಾನರಃ ಕೀಶೋವನೌಕಾ

ಅಥಭಲ್ಲುಕೇ । ಋಕ್ಷಾಚ್ಛಭಲ್ಲಭಾಲ್ಲೂಕಾ

ಗಂಡಕೇಖಡ್ಗಖಡ್ಗಿನೌ ॥

ಖರ್ಜೂರಃ- ಖರ್ಜೂರದಹಣ್ಣಿನಗಿಡ, ಕೇತಕೀ-ಕೇದಿಗೇಹುವ್ವಿನತಾಳೇಗಿಡವು.ತಾಳೀ-ಶ್ರೀತಾಳವಾಲೇ ಗಿಡವು, ಖರ್ಜೂರೀ-ಈಚಲುಮರ,ಈ೪-ತೃಣದ್ರುಮಾಃ - ತೃಣವೃಕ್ಷಗಳು-ತೃಣ ರಾಜವೃಕ್ಷಗಳು.

ವನೌಷಧಿವರ್ಗಃ॥ಅರಣ್ಯಾದಿಂದೊಡಗೂಡಿದ ಪದಗಳಸಮೂಹವೂ ಓಷಧಿಗಳೊಂದಿಗೆ ಸೇರಿದ ಪದಗಳ ಸಮೂಹವು ಇತಿ-ಈ ಮೇರೆ ಮುಗಿದುದು.

—···*···—

ಸಿಂಹಃ-ಮೃಗೇಂದ್ರಃ-ಪಂಚಾಸ್ಯಃ-ಹರ್ಯಕ್ಷಃ - ಕೇಸರೀ-ನ್-ಹರಿಃ-ಪು-೬- ಸಿಂಹದ ಹೆಸರುಗಳು, ಸಿಂಗನು.

ಶಾರ್ದೂಲಃ-ದ್ವೀಪಿ-ನ್-ವ್ಯಾಘ್ರಃ-ಪು-೩-ದೊಡ್ಡಹುಲಿ, ಹೆಬ್ಬಾರೆಹುಲಿ, ದೊಡ್ಡ ನಾಯಿ.

ತರಕ್ಷುಃ-ಮೃಗಾದನಃ - ಪು-೨-ಶಿಸಂಗಿ ಹೆಸರುಗಳು.

ವರಾಹಃ-ಸೂಕರಃ-ಪಾ-ಶೂಕರಃ-ಘೃಷ್ಟಿಃ-ಕೋಲಃ-ಪೋತ್ರೀ- ನ್- ಕಿರಿಃ-ಕಿಟಿಃ-ದಂಷ್ಟ್ರೀ-ನ್-ಘೋಣೀ-ನ್-ಸ್ತಬ್ಧರೋಮಾ-ನ್-ಕ್ರೋಡಃ-ಭೂದಾರಃ-ಪು-೧೨-ಕಾಡು ಹಂದಿ.

ಕಪಿಃ-ಪ್ಲವಂಗಃ-ಪ್ಲವಗಃ - ಶಾಖಾಮೃಗಃ-ವಲೀಮುಖಃ-ಮರ್ಕಟಃ-ವಾನರಃ-ಕೀಶಃ-ವನೌಕಾಃ-ಸ-ಪು-೯-ಕೋತೀಹೆಸರುಗಳು. ಕಪಿ, ಕೋಡಂಗಿ.

ಭಲ್ಲುಕಃ- ಪಾ-ಭಲ್ಲೂಕಃ-ಋಕ್ಷಃ-ಅಚ್ಛಭಲ್ಲಃ-ಪಾ-ಅಚ್ಛಃ-ಭಲ್ಲಃ-ಭಾಲ್ಲೂಕಃ-ಪು-೪-ಕರಡಿಯುಹೆಸರುಗಳು.

ಗಂಡಕಃ-ಖಡ್ಗಃ-ಖಡ್ಗೀ-ನ್-ಪು-೩--ಖ

ಡ್ಗಮೃಗದ ಹೆಸರುಗಳು.

ಲುಲಾಯೊಮಹಿಷೊವಾಹ
ದ್ವಿಷತ್ಕಾಸರ ಸೈರಿಭಾಃ

ಲುಲಾಯಃ-ಮಹಿಷಃ-ವಾಹದ್ವಿಷ-ಕಾಸರಃ--ಸೈರಿಭಃ-ಪು-೫-ಕಾಡುಕೋಣದಹೆಸರುಗಳು.

(ಸ್ತ್ರಿಯಾಂ)ಶಿವಾಭೂರಿಮಾಯು
ಗೋಮಾಯು ಮೃಗ ಧೂರ್ತ
ಕಾಃ ॥೨೦॥ ಸೃಗಾಲವಂ ಚ
ಕಕ್ರೋಷ್ಟುಫೇರುಫೇರವ ಜಂಬು
ಕಾಃ ।

ಶಿವಾ-ಸ್ತ್ರೀ-ಭೂರಿಮಾಯುಃ-ಪುರಿಮಾಯುಃ-ಗೋಮಾಯುಃ-ಮೃಗಧೂರ್ತಕಃ-ಸೃಗಾಲಃ--ಪಾ-ಶೃಗಾಲಃ--ವಂಕ್ರೋಷ್ಟ್ರುಃ-ಫೇರುಃ-ಫೇರವಃ-ಜಂಬುಕಃ-ಪು-೧೦-ನರಿಯ ಹೆಸರುಗಳು. ಕ್ರೋಷ್ಟುಶಬ್ದಕ್ಕೆ ಋಕಾರಾಂತದ ಹಾಗೆಯೇ ಭೇದ ವಿರುತ್ತೆ.

ಓತುರ್ಬಿಡಾಲೊ ಮಾರ್ಜಾ
ರಃಪೃಷದಂಶಕಆಖುಭುಕ್ ॥

ಓತುಃ-ಬಿಡಾಲಃ-ಮಾರ್ಜಾರಃ-ಮಾರ್ಜಾಲಃ-ಪೃಷದಂಶಕಃ--ಪಾ--ವೃಷದಂಶಕಃ-ಆಖುಭುಕ್-ಜ-ಪು-೫-ಬೆಕ್ಕಿನ ಹೆಸರುಗಳು.

(ತ್ರಯೊ) ಗೌಧೇರಗಾಧಾ
ರಗೌಧೆಯಾ(ಗೋಧಿಕಾತ್ಮಜೆ)॥
ಶ್ವಾವಿತ್ತುಶಲ್ಯ

ಗೌಧೇರಃ-ಗೌಧಾರಃ-ಗೌಧೇಯಃ-೩-ಉಡುವಿನ ಹೆಸರುಗಳು, ಉ...

ಶ್ವಾವಿತ-ಜ-ಶಲ್ಯಃ-ಪು-೨-ಮುಳ್ಳುಹಂದಿಯ ಹೆಸರುಗಳು.

(ಸ್ತ್ರಲ್ಲೊಮ್ನಿ)ಶಲಲೀಶಲಲಂ
ಶಲಂ ॥೨೧॥

ಶಲಲೀ-ಸ್ತ್ರೀ - ಶಲಲಂ-ಶಲಂ-ನಲ್ಲೊಮ್ನಿ-ಮುಳ್ಳುಹಂದಿಯ ಕೂದಲುರು, ಪರಹಾಕಟ್ಟು, ಪರಹಾಕಳ್ಳಿ ಮುಳ್ಳುಗಳೆಂದು ಕೆಲವರನ್ನುವರು.

ವಾತಪ್ರಮೀ ರ್ವಾತಮೃಗಃ

ವಾತಪ್ರಮೀಃ- ವಾತಮೃಗಃ-ಪು ವಾಯುಮೃಗದಹೆಸರು. ಗಾಳಿಗೆಯೆಗಿ ನಡಿಯುವ ಸ್ವಭಾವವುಳ್ಳ ಹುಲ್ಲೆಮೃಗ. ಇದು ಕಡಸದ ಜಾತಿಯದವು. ವಾತಪ್ರಮೀಶಬ್ದವು ಈಕಾರಾಂತ ಸ್ತ್ರೀಲಿಂಗವೂವುಂಟು.

ಕೊಕಸ್ತ್ವೀಹಾಮೃಗೊವೃ
ಕಃ।

ಕೋಕಃ-ಈಹಾಮೃಗಃ-ವೃಕಃ-ಪು ತೋಳದಹೆಸರು.

ಮೃಗೆಕುರಂಗ ವಾತಾಯುಹ

ಮೃಗಃ - ಕುರಂಗಃ-ವಾತಾಯುಃ

ರಿಣಾಜಿನಯೋನಯಃ॥

ಐಣೇಯಮೇಣ್ಯಾಃ ಶ್ಚರ್ಮಾದ್ಯ ಮೇಣಸ್ಯೈಣ(ಮುಭೆತ್ರಿಷು)

ಕದಲೀಕಂದಲೀಚೀನಶ್ಚಮೂರುಪ್ರಿಯಕಾವಪಿ ॥ ೨೦೮॥ ಸಮೂರುಶ್ಚೇತಿಹರಿಣಾ ಅಮೀಅಜಿನಯೋನಯಃ ।

ಕೃಷ್ಣಸಾರರುರುನ್ಯಂಕುರಂಕುಶಂಬರರೌಹಿಷಾಃ ॥ ಗೋಕರ್ಣಪೃಷತೈಣರ್ಶ್ಯ ರೋಹಿತಾಶ್ಚಮರೋ (ಮೃಗಾಃ)

ಣಃ-ಅಜಿನಯೋನಿಃ-ಪು-೫-ಜಿಂಕೆಯ ಹೆಸರುಗಳು. ಚರಳಿಯ ಹೆಸರುಗಳು.

ಐಣ್ಯಾಃಶ್ಚರ್ಮಾದ್ಯಂ-ಐಣೇಯಂ-ಹೆಣ್ಣು ಹುಲ್ಲೇಕರದಚರ್ಮ ಮುಂತಾದವುಗಳಿಗೆ, ಐಣೇಯವೆಂದುಹೆಸರು ಏಣಸ್ಯಚರ್ಮಾದ್ಯಂಐಣಂ-ಗಂಡುಜಿಂಕೆಯ ಕೃಷ್ಣಾಜಿನ ಕೊಂಬು ಮುಂತಾದವುಗಳಿಗೆ ಐಣವೆಂದುಹೆಸರು, ಉಭೆತ್ರಿಷು-ಈ ೨ಶಬ್ದಗಳೂ ತ್ರಿಲಿಂಗಗಳು.

ಕದಳೀ-ಸ್ತ್ರೀ-ಪಾ-ಕದಳಿ--ನ-ಪು-ಚೋರೇವರ್ಣದಯರಳೆ, ಮಚ್ಚೆಯರಳೇ,ಕಂದಳಿ-ಸ್ತ್ರೀ-ಪಾ-ಕಂದಳೀ-ನ-ಪು-ಷೊಡ್ಡ ಹೊಟ್ಟೆಯ ಕಪ್ಪಾದಮುಂಗಾಲುಗಳುಳ್ಳ ಕಡಹದಹೆಸರು,ಚೀನಃ-ಪು-ಹಕ್ಕಿ ಬಣ್ಣವಾಗಿ೩ಂ ಅಂಗುಳದುದ್ದವಿರುವ ದುಪ್ಪೀಹೆಸರು. ಚಮೂರುಃ-ಪು-ಬಾಲವಿಲ್ಲದ ಕಡಹ. ಪ್ರಿಯಕಃ-ಪು-ತುಂಬಾ ಬೆಳದಿರುವ ಕೆಂಪುಕೂದಲುಳ್ಳ ಹುಲ್ಲೆ,ಸಮೂರುಃ-ಬಿಳೀಕೂದಲುಳ್ಳ ತೋರವಾದ ಕತ್ತಿನಿಂದೊಡಗೂಡಿದದುಪ್ಪಿಯಂಥಾಮೃಗವು. ಅಮೀಹರಿಣಾಃ-ಈಮೃಗಗಳು ಅಜಿನಯೋನಯಃ-ಆಸ್ತರಣಾದಿಗಳಿಗೆ ಉಪಯುಕ್ತಗಳಾಗುವ ಚರ್ಮ ಮುಂತಾದವುಗಳನ್ನು ಕೊಡುವ ಜಾತಿಗಳು. ಇವೆಲ್ಲಾ ಹುಲ್ಲೆ ಜಾತಿ ಭೇದಗಳು ಜಿಂಕೆವಿಶೇಷಗಳು.

ಕೃಷ್ಣಸಾರಃ-ಪಾ-ಕೃಷ್ಣಶಾರಃ- ಕೃಷ್ಣಮೃಗದಹೆಸರು,ಕರೀಗಂಡ ಜಿಂಕೆ;ರುರುಃ-ಪು-ಕರೀಮಚ್ಚೆಗಳುಳ್ಳದುಪ್ಪಿ,ನ್ಯಂಕುಃ-ತಲೆಬಾಗಿನಡೆಯುವ ಗಂಡುಜಿಂಕೆ, ರಂಕುಃ-ಬಿಳೀಕೂದಲು ಬಹಳವಾಗಿರುವ ಹುಲ್ಲೆ, ಹೋರಿ, ಗಂಡೆರಳೆ, ಶಂಬರಃ-ಪಾ-ಸಂಬರಃ-ಕೆಂಪುಬಣ್ಣದ ಹುಲ್ಲೇಹೋರಿ.ಸಾರಗ-ರ[illegible] ಹುಲ್ಲೆ-ಗೋ

ಲುಲಾಯೊಮಹಿಷೊವಾಹ ದ್ವಿಷತ್ಕಾಸರ ಸ್ಸೈರಿಭಾಃ

(ಸ್ತ್ರಿಯಾಂ)ಶಿವಾಭೂರಿಮಾಯು ಗೋಮಾಯು ಮೃಗ ಧೂರ್ತ ಕಾಃ ॥೨೦॥ ಸೃಗಾಲವಂ ಚ ಕಕ್ರೋಷ್ಟುಫೇರುಫೇರವ ಜಂಬು ಕಾಃ ।

ಓತುರ್ಬಿಡಾಲೊ ಮಾರ್ಜಾ ರಃಪೃಷದಂಶಕಆಖುಭುಕ್ ॥

(ತ್ರಯೊ) ಗೌಧೇರಗೌಧಾ ರಗೌಧೆಯಾ(ಗೊಧಿಕಾತ್ಮಜೆ)॥ ಶ್ವಾವಿತ್ತುಶಲ್ಯ

(ಸ್ತಲ್ಲೊಮ್ನಿ)ಶಲಲೀಶಲಲಂ ಶಲಂ ॥೨೨॥

ವಾತಪ್ರಮೀ ವಾತಮೃಗಃ

ಕೊಕಸ್ತ್ವೀಹಾಮೃಗೊವೃ ಕಃ।

ಮೃಗೆಕುರಂಗ ವಾತಾಯುಹ

ಡ್ಗಮೃಗದ ಹೆಸರುಗಳು.

ಲುಲಾಯಃ-ಮಹಿಷಃ- ವಾಹದ್ವಿಷತ್-ಕಾಸರಃ--ಸ್ಸೈರಿಭಃ-ಪು-೫-ಕಾಡುಕೋಣದಹೆಸರುಗಳು.

ಶಿವಾ-ಸ್ತ್ರೀ- ಭೂರಿಮಾಯುಃ-ಪೂರಿಮಾಯುಃ-ಗೋಮಾಯುಃ-ಮೃಗಧೂರ್ತಕಃ-ಸೃಗಾಲಃ--ಪಾ-ಶೃಗಾಲಃ--ವಂಚಕಃ-ಕ್ರೋಷ್ಟುಃ-ಫೇರುಃ-ಫೇರವಃ-ಜಂಬುಕಃ-ಪು-೧೦-ನರಿಯ ಹೆಸರುಗಳು. ಕ್ರೋಷ್ಟು ಶಬ್ದಕ್ಕೆ ಋಕಾರಾಂತದ ಹಾಗೆಯೇ ರೂಪಭೇದವಿರುತ್ತೆ.

ಓತುಃ-ಬಿಡಾಲಃ-ಮಾರ್ಜಾರಃ-ಪಾ-ಮಾ- ಲಃ-ಪೃಷದಂಶಕಃ--ಪಾ--ವೃಷದಂಶಕಃ-ಆಖುಭುಕ್-೬-ಪು-೫-ಬೆಕ್ಕಿನ ಹೆಸರುಗಳು.

ಗೌಧೇರಃ-ಗೌಧಾರಃ-ಗೌಧೇಯಃ-ಈ-೩-ಉಡುವಿನ ಹೆಸರುಗಳು, ಉಡ

ಶ್ವಾವಿತ-ಜ-ಶಲ್ಯಃ-ಪು-೨- ಮುಳ್ಳಂದಿಯ ಹೆಸರುಗಳು.

ಶಲಲೀ-ಸ್ತ್ರೀ - ಶಲಲಂ-ಶಲಂ-ನ-೩-ಲೊಮ್ನಿ-ಮುಳ್ಳಂದಿಯ ಕೂದಲಿಗೆ ರು, ಪರಹಾಕಟ್ಟು, ಪರಹಾಕಟ್ಟೆ, ಮುಳ್ಳುಗಳೆಂದು ಕೆಲವರನ್ನುವರು.

ವಾತಪ್ರಮೀಃ- ವಾತಮೃಗಃ - ಪು- ವಾಯುಮೃಗದಹೆಸರು. ಗಾಳಿಗೆಯೆದುರಾಗಿ ನಡಿಯುವ ಸ್ವಭಾವವುಳ್ಳ ಹುಲ್ಲೆಯೆಂಬ ಮೃಗ. ಇದು ಕಡಸದ ಜಾತಿಯಲ್ಲಿ ದನ್ನು. ವಾತಪ್ರಮೀಶಬ್ದವು ಈಕಾರಾಂತ ಸ್ತ್ರೀಲಿಂಗವೂ ವುಂಟು.

ಕೋಕಃ- ಈಹಾಮೃಗಃ-ವೃಕಃ-ಪು- ತೋಳದಹೆಸರು.

ಮೃಗಃ - ಕುರಂಗಃ-ವಾತಾಯುಃ-

ರಿಣಾಜಿನಯೋನಯಃ॥

ಐಣೇಯಮೇಣ್ಯಾಶ್ಚರ್ಮಾದ್ಯ ಮೇಣಸ್ಯೈಣಮುಭೇತ್ರಿಷು ।

ಕದಳೀಕಂದಳೀಚೀನಶ್ಚಮೂರುಪ್ರಿಯಕಾವಪಿ ॥ ೧೦೮॥ ಸಮೂರುಶ್ಚೇತಿಹರಿಣಾ ಅಮೀಅಜಿನಯೋನಯಃ ।

ಕೃಷ್ಣಸಾರರುರುನ್ಯಂಕುರಂಕುಶಂಬರರೌಹಿಷಾಃ ॥ ಗೋಕರ್ಣಪೃಷತೈಣರ್ಶ್ಯರೋಹಿತಾಶ್ಚಮರೋ (ಮೃಗಾಃ)

ಣಃ-ಅಜಿನಯೋನಿಃ-ಪು-೫-ಜಿಂಕೆಯ ಹೆಸರುಗಳು. ಯರಳೆಯ ಹೆಸರುಗಳು.

ಏಣ್ಯಾಶ್ಚರ್ಮಾದ್ಯಂ-ಐಣೇಯಂ-ಹೆಣ್ಣುಹುಲ್ಲೇಕರದಚರ್ಮಮುಂತಾದವುಗಳಿಗೆ, ಐಣೇಯವೆಂದುಹೆಸರು ಏಣಸ್ಯಚರ್ಮಾದ್ಯಂಐಣಂ-ಗಂಡುಜಿಂಕೆಯ ಕೃಷ್ಣಾಜಿನ ಕೊಂಬುಮುಂತಾದವುಗಳಿಗೆ ಐಣವೆಂದುಹೆಸರು, ಉಭೇತ್ರಿಷು-ಈ ೨ಶಬ್ದಗಳೂ ತ್ರಿಲಿಂಗಗಳು.

ಕದಳೀ-ಸ್ತ್ರೀ-ಪಾ-ಕದಳಿ--ನ-ಪು-ಬೋರೇಪರ್ಣದಯರಳೆ, ಮಚ್ಚೆಯರಳೇ, ಕಂದಳಿ-ಸ್ತ್ರೀ-ಪಾ-ಕಂದಳೀ-ನ-ಪು-ಷೊಡ್ಡಹೊಟ್ಟೆಯ ಕಪ್ಪಾದಮುಂಗಾಲುಗಳುಳ್ಳಕಡಹದಹೆಸರು,ಚೀನಃ-ಪು-ಹಕ್ಕಿಬಣ್ಣವಾಗಿ೩ಂಅಂಗುಳದುದ್ದವಿರುವ ದುಪ್ಪೀಹೆಸರು. ಚಮೂರುಃ-ಪು-ಬಾಲವಿಲ್ಲದ ಕಡಹ. ಪ್ರಿಯಕಃ-ಪು-ತುಂಬಾ ಬೆಳದಿರುವ ಕೆಂಪುಕೂದಲುಳ್ಳಹುಲ್ಲೆ,ಸಮೂರುಃ-ಬಿಳೀಕೂದಲುಳ್ಳ ತೋರವಾದ ಕತ್ತಿನಿಂದೊಡಗೂಡಿದದುಪ್ಪಿ ಯಂಥಾಮೃಗವು. ಅಮೀಹರಿಣಾಃ-ಈಮೃಗಗಳು ಅಜಿನಯೋನಯಃ-ಆಸ್ತರಣಾದಿಗಳಿಗೆ ಉಪಯುಕ್ತಗಳಾಗುವ ಚರ್ಮಮುಂತಾದವುಗಳನ್ನು ಕೊಡುವ ಜಾತಿಗಳು. ಇವೆಲ್ಲಾ ಹುಲ್ಲೆಜಾತಿ ಭೇದಗಳು ಜಿಂಕೆವಿಶೇಷಗಳು.

ಕೃಷ್ಣಸಾರಃ-ಪಾ-ಕೃಷ್ಣಶಾರಃ- ಕೃಷ್ಣಮೃಗದಹೆಸರು,ಕರೀಗಂಡುಜಿಂಕೆ,ರುರುಃ-ಪು-ಕರೀಮಚ್ಚೆಗಳುಳ್ಳದುಪ್ಪಿ,ನ್ಯಂಕುಃ-ತಲೆಬಾಗಿನಡೆಯುವ ಗಂಡುಜಿಂಕೆ, ರಂಕುಃ-ಬಿಳೀಕೂದಲು ಬಹಳವಾಗಿರುವ ಹುಲ್ಲೆ, ಹೋರಿ, ಗಂಡೆರಳೆ, ಶಂಬರಃ-ಪಾ-ಸಂಬರಃ-ಕೆಂಪುಬಣ್ಣದ ಹುಲ್ಲೇಹೋರಿ.ಸಾರಗ-ಜ್ಜಾಸಹಿತಹಿತ ಕರಿ ಚಿಟ್ಟ ಹುಲ್ಲೆ-ಗೋ

ಕರ್ಣಃ-ಕಡಿತಿ, ಪೃಷತಃ-ಚುಕ್ಕೆ... ಣಃ - ವಿಶಾಲವಾದ ಕಂಣು ಗ... ರೀಹುಲ್ಲೇಗರ. ಋಷ್ಯಃ-ಪಾ-ಋ... ಗಂಡುಮರ್ರ, ರೋಹಿತಃ-ಚಮರ... ರೀಬಾಲದ ಮೃಗ, ಪು-೧೧-ಮೃಗಾ... ಟೆ ಯಾಡಲ್ಪಡುವ ಬೇರೆ ಬೇರೆ ಮೃ... ತಿಗಳು.

ಗಂಧರ್ವಶ್ಶರಭೋರಾಮಃಸ್ಸೃ
ಮರೋಗವಯಶ್ಶಶಃ॥

ಗಂಧರ್ವಃ- ಕತ್ತೆ ಕಿರಬ- ಶರಭಃ-... ಕಾಲುಗಳಿಂದಲೂ, ಎರಡು ಮುಖಗ... ಲೂ,ಉಗ್ರನಾಗಿರುವ ಸಿಂಹನಾಶಕ... ರಾಮಃ- ಹಿರಿಯದುಪ್ಪಿ, ವಿಷಹರಮೃ... ಇದನ್ನು ಹಿರಿಯಹಮರೇ ಮೃಗವ... ರು. ಸೃಮರಃ-ದೊಡ್ಡ ಚವರೀಮೃಗ,... ವೊಲ, ಈ ೬-ಪು.

(ಇತ್ಯಾದಯೋಮೃಗೇಂದ್ರಾದ್ಯಾ
ಗವಾದ್ಯಾಃಪಶು(ಜಾತಯಃ)

ಇತ್ಯಾದಯಃ-ಇವೇ ಮೊದಲಾಗಿ... ಧರ್ವಾದಿಶಬ್ದಗಳೂ, ಮೃಗೇಂದ್ರಾದ್ಯಾ... ಹೇಳಲ್ಪಟ್ಟ ಸಿಂಹಾದಿ ಶಬ್ದಗಳೂ,... ದ್ಯಾಃ-ಮುಂದೆ ವೈಶ್ಯವರ್ಗದಲ್ಲಿ ಹೇ... ಡುವ ಗವಾದಿಶಬ್ದಗಳೂ ಸಹ, ಪಶು... ಯಃ-ಭೂಮಿಯಲ್ಲಿ ಮನುಷ್ಯರಹಾಗೆ... ನಿಜಗಳಾದಾಗ್ಯೂ ಬುದ್ಧಿಶಕ್ತಿಯು ನಾ... ಮೂಗ ಜಂಗತುಗಳೆನಿಪ ನಾನಾ ಪಶು... ತಿಗಳಿಗೆ ಬೇರೆಬೇರೆ ಹೆಸರುಗಳು.

ಉಂದುರು ಮೂರ್ಷಿಕೋ
ಪ್ಯಾಖು

ಉಂದುರುಃ- ಮೂಷಿಕಃ-ಪಾ--ಮೂ... ಕಃ-ಆಖುಃ-ಪು-೩-ಇಲಿಯಹೆಸರು.

ಗಿರಿಕಾಬಾಲಮೂಷಿಕಾ॥

ಗಿರಿಕಾ-ಬಾಲಮೂಷಿಕಾ-ಸ್ತ್ರೀ-... ಟ್ಟಲಿ.

ಚುಚುಂದರೀಗಂಧಮೂಷೀ

ಚುಚುಂದರೀ-ಗಂಧಮೂಷೀ-ಸ್ತ್ರೀ-... ಚುಂಚಿಲೀ.

ದೀರ್ಘದೇಹಿತುಮೂಷಿಕಾ।

ದೀರ್ಘದೇಹಿ-ಮೂಷಿಕಾ-ಸ್ತ್ರೀ-... ಸ್ಯ...

| | |
|---|---|
| ಸರಟಃಕೃಕಲಾಸಸ್ಸ್ಯಾ | ಸರಟಃ-ಕೃಕಲಾಸಃ-ಪು-೨-ತೊಂಡೇಹೆಸರು. ಹೆಂಟೇಗೊದ್ದ, ವೋತೀಕ್ಯಾಟ, ತೊಂಣೇಕೇತ, ಹಾವುರಾಣಿಗೂ ಇದೇ ಹೆಸರೆಂದು ಕೆಲವರನ್ನುವರು. |
| ನ್ಮುಸಲೀಗೃಹಗೋಧಿಕಾ। | ಮುಸಲೀ-ಪಾ--ಮುಷಲೀ-ಗೃಹಗೋಧಿಕಾ-ಸ್ತ್ರೀ-೨- ಹಲ್ಲೀಹೆಸರುಗಳು. ಗೌಳಿಯೆಂತಲೂ ಅನ್ನುವರು. |
| ಲೂತಾಸ್ತ್ರೀ ತಂತುವಾಯೊರ್ಣನಾಭಮರ್ಕಟಕಾಸ್ಸಮಾಃ | ಲೂತಾ-ಸ್ತ್ರೀ-ತಂತುವಾಯಃ-ಊರ್ಣನಾಭಃ-ಮರ್ಕಟಕಃ-ಪು-ಜಾಡಹುಳು,ಸಾಲೇಹುಳ, ಹುಳ, ನೆಯಿಗೇ ಹುಳ. |
| ನೀಲಂಗಸ್ತು ಕ್ರಿಮಿಃ | ನೀಲಂಗುಃ-ಕ್ರಿಮಿಃ-ಪು-೨-ಬೇಡೆಮುಂತಾದ ನಾನಾಬಗೇ ಹುಳುಗಳಿಗೂ ಹೆಸರುಗಳು. |
| ಕರ್ಣಜಲೂಕಾ ಶತಪದ್ಯುಭೆ। | ಕರ್ಣಜಲೂಕಾ-ಪಾ-ಕರ್ಣಜಲೌಕಾ-ಶತಪದೀ-ಸ್ತ್ರೀ-೨-ಜರ್ರಿಹೆಸರುಗಳು, ಜರೀ-ಸರಸ್ವತೀಪುತ್ರನೆಂಬಹುಳು,ಮತ್ತು ಕೆಲವರು ವನಿಕೇಬಂಡೇ ಹುಳುವೆಂಬುವರು. |
| ವೃಶ್ಚಿಕಃಶೂಕಕೀಟಸ್ಸ್ಯಾ | ವೃಶ್ಚಿಕಃ-ಶೂಕಕೀಟಃ-ಪು-೨- ಕೊಂಡೀವಿಷದಚೇಳು, ಕುಳಿಚೇಳು, ಖಣಜದ ಹುಳುವಿಗೂಹೆಸರು. |
| ದಳಿದ್ರೊಣೌತುವೃಶ್ಚಿಕೇ। | ಅಳೀ-ನ್-ಪಾ-ಆಳೀ-ನ್-ದ್ರೊಣಃ-ಪಾ-ದ್ರೂಣಃ-ವೃಶ್ಚಿಕಃ-ಪು-೩- ಕೆಂಪುಚೇಳು, ಎಲ್ಲಬಗೇಚೇಳಿಗೂ ಹೆಸರೆಂದು ಕೆಲವರನ್ನುವರು. |
| ಪಾರಾವತಃ ಕಲರವಃಕಪೊತೊಥ | ಪಾರಾವತಃ-ಕಲರವಃ-ಕಪೋತಃ-ಪು-೩-ಹಾಲುವಾಣದಹಕ್ಕೀ ಹೆಸರುಗಳು. ಪಾರಿವಾಣದಹಕ್ಕಿ ಮತ್ತು ಗುಬ್ಬಚ್ಚಿಯ ಆಕಾರದಿಂದ ಸೊಗಸಾಗಿ ಕೂಗುವ ಹಕ್ಕಿ. |
| ಶಶಾದನಃ॥೨೦॥ ಪತ್ರೀಶ್ಯೇನ | ಶಶಾದನಃ-ಪತ್ರೀ-ನ್-ಶ್ಯೇನಃ-ಪು-೩-ಗಿಡಗನಹಕ್ಕಿ. |
| ಉಲೂಕಸ್ತು ವಾಯಸಾರಾ | ಉಲೂಕಃ-ವಾಯಸಾರಾತಿಃ-ಪೇಚಕಃ- |

ತ್ರಿಪೆಚಕಾ

ವ್ಯಾಘ್ರಾಟಸ್ತು ಭರದ್ವಾಜಃ

ಖಂಜರೀಟಸ್ತು ಖಂಜನಃ॥

ಲೊಹಪೃಷ್ಠಸ್ತು ಕಂಕಸ್ಸ್ಯಾ

(ದಥ) ಚಾಷಃ ಕಿಕೀದಿವಿಃ

ಕಳಿಂಗಭೃಂಗಧೂಮ್ಯಾಟಾ

(ಅಥಸ್ಯಾ) ಚ್ಛತಪತ್ರಕಃ ॥
ದಾರ್ವಾಘಾಟೋ

ಥಸಾರಂಗಃ ಸ್ತೋಕಕಶ್ಚಾತ
ಕೆ(ಸ್ಸಮಾಃ।)

ಕೃಕವಾಕುಸ್ತಾಮ್ರಚೂಡಃ
ಕುಕ್ಕುಟಶ್ಚರಣಾಯುಧಃ ॥

ಚಟಕಃ ಕಲವಿಂಕಸ್ಸ್ಯಾ(ತ್ತ
ಸ್ಯಸ್ತ್ರೀ)ಚಟಕಾ

(ತಯೋಃ।ಪುಮಪತ್ಯೇ)ಚಾಟ
ಕೈರ ( ಸ್ತ್ರ್ಯಪತ್ಯೇ ) ಚಟಕೈ
(ವಹಿ) ॥೧೩೪॥

ಪು-೩-ಗೂಗೆ, ಗೂಬೆ.

ವ್ಯಾಘ್ರಾಟಃ-ಭರದ್ವಾಜಃ-ಪು-... ದ್ವಾಜ ಹಕ್ಕಿ ಅಂದರೆ, ಹುಲಿಯ ಕಣ್ಣ... ನ್ನು ಚುಚ್ಚುವ ಹಕ್ಕಿ.

ಖಂಜರೀಟಃ-ಖಂಜನಃ-ಪು-೨-ಗೀ... ಹಕ್ಕಿ, ಕಾಡಿಗೇ ಸೊಗಸಿನ ಹಕ್ಕಿ ಗಿಜ... ರಹಕ್ಕಿ ಗೌಜಲಹಕ್ಕಿ.

ಲೋಹಪೃಷ್ಠಃ-ಕಂಕಃ-ಪು-... ಡೇಹಕ್ಕಿ ಅಂದರೆ, ಹದ್ದುಗಳಲ್ಲಿಭೇದ.ಕ... ರೆಹದ್ದು.

ಚಾಷಃ--ಕಿಕೀದಿವಿಃ-ಪು-೨- ಹಂ... ಕ್ಕೀಹೆಸರು,ಶಕುನದಹಕ್ಕಿ,ಆಂಧ್ರದಲ್ಲಿ... ಲಪಕ್ಷಿ.

ಕಳಿಂಗಃ-ಭೃಂಗಃ-ಧೂಮ್ಯಾಟಃ-ಪು... ಕುಕ್ಕುಟ ಯೆಂಬ ಹಕ್ಕಿಯು ಹೆಸರುಗ... ಆಂಧ್ರದಲ್ಲಿ ಕೂಕಲ ಮೂಗಪಕ್ಷಿ.

ಶತಪತ್ರಕಃ--ದಾರ್ವಾಘಾಟಃ- ಪು-... ಮರಗುಟಕನಹಕ್ಕಿ.

ಸಾರಂಗಃ--ಪಾ-ಶಾರಂಗಃ-ಸ್ತೋಕಕ... ಚಾತಕಃ-ಪು-೩-ಮಳೇಗುಟಕನಹಕ್ಕಿ... ತಕಪಕ್ಷಿ.

ಕೃಕವಾಕುಃ--ತಾಮ್ರಚೂಡಃ-ಕು... ಟಃ-ಚರಣಾಯುಧಃ-ಪು- ೪-ಕೋಳೀ... ಸರು.

ಚಟಕಃ-ಕಲವಿಂಕಃ-ಪು-೨-ಗುಬ್ಬಿಹೆ... ರು,ಗುಬ್ಬಚ್ಚಿ, ಚಟಕಾ-ಸ್ತ್ರೀ-ತಸ್ಯಸ್ತ್ರೀ... ಹೆಂಣು ಗುಬ್ಬಚ್ಚಿಹಕ್ಕಿ.

ಚಾಟಕೈರಃ-ಪು-೧ಚಟಕಾ-ಸ್ತ್ರೀ-... ಪುಮಪತ್ಯೆಸ್ತ್ರ್ಯಪತ್ಯೆಚಕ್ರಮಾತ-ಚಾಟಕೈ... ರವೆಂದರೆ ಗಂಡುಗುಬ್ಬಚ್ಚಿಪಿಳ್ಳೆ, ಚಟಕೈ... ಯೆಂದರೆ ಹೆಂಣುಗುಬ್ಬಚ್ಚಿಪಿಳ್ಳೆ.

ಕರ್ಕರೇಟುಃ ಕರೇಟುಃ ಸ್ಯಾ

ಕರ್ಕರೇಟುಃ-ಕರೇಟುಃ-ಸ್ತ್ರೀ-೨-ಕೊಕ್ಕರೆ ಹೆಸರು.

ತ್ಕೃಕಣಃಕ್ರಕರಾ (ಸಮೌ)

ಕ್ರಕರಃ-ಪು-೨-ಕಬ್ಬಕ್ಕಿ ಹೆಸರು. ಕಕ್ಕರವಕ್ಕಿ, ಕಾಡು ಕೊಕ್ಕರಿ, ಕಾಡುಬಕ.

ವನಪ್ರಿಯಃಪರಭೃತಃಕೋಕಿಲಃಪಿಕ(ಇತ್ಯಪಿ॥)

ವನಪ್ರಿಯಃ-ಪರಭೃತಃ-ಕೋಕಿಲಃ--ಪಿಕಃ-ಪು-೪-ಕೋಗಿಲೆ.

ಕಾಕೇತುಕರಟಾರಿಷ್ಟಬಲಿಪುಷ್ಟಸಕೃತ್ಪ್ರಜಾಃ। ಧ್ವಾಂಕ್ಷಾತ್ಮಘೋಷಪರಭೃದ್ಬಲಿಭುಗ್ವಾಯಸಾಅಪಿ॥೨೦॥ ಚಿರಜೀವೀಚೈಕದೃಷ್ಟಿಶ್ಚಮೌಕಳಿಃಪಿಕವರ್ಧನಃ।

ಕಾಕಃ-ಕರಟಃ-ಅರಿಷ್ಟಃ- ಬಲಿಪುಷ್ಟಃ-ಸಕೃತ್ಪ್ರಜಃ-ಧ್ವಾಂಕ್ಷಃ-ಆತ್ಮಘೋಷಃ-ಪರಭೃತ- ಬಲಿಭುಕ್-ಜ್- ವಾಯಸಃ--ಚಿರಜೀವೀ-ನ್-ಏಕದೃಷ್ಟಿಃ--ಮೌಕಳಿಃ--ಪಿಕವರ್ಧನಃ-ಪು-೧೪- ಕಾಗಿಯಹೆಸರು, ವಾಯಸಪಕ್ಷಿ, ಚಿರಜೀವಿ ಮೊದಲುಗೊಂಡು ೪ ಅಧಿಕನಾದುಗೇ.

ದ್ರೋಣಕಾಕಸ್ತು ಕಾಕೋಲೋ

ದ್ರೋಣಕಾಕಃ-ಕಾಕೋಲಃ-ಪು-೨- ಮುದಿಕಾಗಿ, ಮಾದೇಕಾಗಿಯೂ, ತೆಲುಗರಿದನ್ನು ಮಾಲಕಾಕಿಯನ್ನುವರು.

ದಾತ್ಯೂಹಃಕಾಲಕಂಟಕಃ॥

ದಾತ್ಯೂಹಃ-ಕಾಲಕಂಟಕಃ-ಸಾ--ಕಾಲ್ಯಕಂಟಕಃ-ಪು- ೨- ಭರತಪಕ್ಷಿಯ ಹೆಸರು, ಕೆಲವರು ನೀರುಕಾಗಿ ಯಂದರು.

ಆತಾಯಿಚಿಲ್ಲೌ -

ಆತಾಯಿಸಾ-ನ್-ಸಾ-ಆತಾಪೀ-ನ್- ಚಿಲ್ಲಃ-ಪು-೨-ಮುಂಡುಮೂಳಿಕನಹಕ್ಕಿ ಹೆಸರು, ಕೆಲವರಿದಕ್ಕೆ ಚೆಂಪ್ರುಕಾಗಿಯೂ ಅರ್ಥವಾಗುವದೆಂದು ಹೇಳುವರು. ಜಪ್ಪಟೇಹಕ್ಕಿಯೂ ಅರ್ಥವೆಂದುಕೆಲವರು.

ದಾಕ್ಷಾಯ್ಯಗೃಧ್ರೌ ಕೀರಶುಕೌ(ಸಮೌ।)

ದಾಕ್ಷಾಯ್ಯಃ-ಗೃಧ್ರಃ-ಪು- ಹದ್ದಿನಹೆಸರುಗಳು, ಹದ್ದು, ಕೀರಃ-ಶುಕಃ-ಪು-೨- ಗಿಳಿಯ ಹೆಸರುಗಳು. ಗಿಣಿಹಕ್ಕಿ.

ಕ್ರುಙ್ಕ್ರೌಂಚೋ

ಕ್ರುಙ್-ಙ್-ಕ್ರೌಂಚಃ-ಪು-೨-ಕೀಚಕ್ಕಿ, ನೀರುಕೋಳಿಗೂ ಹೆಸರಾಗುವದು. ನೀರು ಕೊಕ್ಕರೆ.

ಘಟಕಃಕಹ್ವಃ



[illegible] ಜೊನ್ನ ಕೊಕ್ಕರೆ

| | |
|---|---|
| | ಮೂಗುಕೊಕ್ಕರೆ. |
| ಪುಷ್ಕರಾಹ್ವಸ್ತು ಸಾರಸಃ । | ಪುಷ್ಕರಾಹ್ವಃ-ಸಾರಸಃ-ಪ್ರು-೨-ಸಾ ಹಕ್ಕಿಹೆಸರು. ನೀರುಹಕ್ಕಿ, ಜಲಪಕ್ಷಿ, ರೇಹಕ್ಕಿ, ಕೊಂದಹಕ್ಕಿ. |
| ಕೋಕಶ್ಚಕಶ್ಚಕ್ರವಾಕೋರ ಥಾಂಗಾಹ್ವಯನಾಮಕಃ । | ಕೋಕಃ-ಚಕ್ರಃ-ಚಕ್ರವಾಕಃ-ರಥಾಂಗಾಹ್ವಯನಾಮಕಃ-ಪ್ರು-೪- ಚಕ್ರವಾಕಪಕ್ಷಿಯ ಹೆಸರುಗಳು. ಕೋಕೀಹಕ್ಕಿ. |
| ಕಾದಂಬಃಕಲಹಂಸಸ್ಸ್ಯಾತ್ | ಕಾದಂಬಃ-ಕಲಹಂಸಃ-ಪ್ರು-೨-ಧೂಮ್ರವರ್ಣಗಳಾದ ಕಾಲುಗಳೂ ಮೂಗುಳ್ಳ ಹಂಸಪಕ್ಷಿ, ಅಂಚೆ. |
| ಉತ್ಕ್ರೋಶಕುರರೌ ಸಮೌ ॥ | ಉತ್ಕ್ರೋಶಃ- ಕುರರಃ-ಪ್ರು-೨-ಕುರಕ್ಕಿ ಹೆಸರು. |
| ಹಂಸಾಸ್ತು ಶ್ವೇತ ಗರುತಶ್ಚಕ್ರಾಂಗಾಮಾನಸೌಕಸಃ । | ಹಂಸಾಃ- ಶ್ವೇತಗರುತಃ- ಚಕ್ರಾಂಗಾಃ- ಮಾನಸೌಕಸಃ-ಸ-ಪ್ರು-ಬ-೪-ಸಾಮಾನ್ಯವಾಗಿ ಹಂಸಪಕ್ಷಿಗಳ ಹೆಸರುಗಳು. |
| ರಾಜಹಂಸಾಸ್ತು ತೇಚಂಚು ಚರಣೈರ್ಲೋಹಿತೈಸ್ಸಿತಾಃ ॥ | ರಾಜಹಂಸಃ- ಪ್ರು-೧-ಲೋಹಿತೈಃ-ಚಂಚುಚರಣೈಃ-ಸಿತಾಸ್ತೇ -ಕೆಂಪಾದ ಕಾಲುಗಳೂ ಮೂಗೂ ಉಳ್ಳ ಬಿಳೀ ಹಂಸೆಗಳು ಸಂಚೆ. |
| ಮಲಿನೈರ್ಮಲ್ಲಿಕಾಕ್ಷಾಸ್ತೇ | ಮಲ್ಲಿಕಃ-ಪೂ- ಮಲ್ಲಿಕಾಕ್ಷಃ-ಪ್ರು-೧-ಮಲಿನೈಃ-ಚಂಚುಚರಣೈರ್ಯುತಾಸ್ತೇ-ಮಲಿನವಾದ ಕಾಲುಗಳೂ ಮೂಗೂ ಉಳ್ಳ ಬಿಳೀಹಂಸಪಕ್ಷಿಗಳ ಹೆಸರುಗಳು. |
| ಧಾರ್ತರಾಷ್ಟ್ರಾಸ್ಸಿತೇತರೈಃ । | ಧಾರ್ತರಾಷ್ಟ್ರಃ-ಪ್ರು-೧- ಸಿತೇತರೈಃ-ಚಂಚುಚರಣೈರುಪಲಕ್ಷಿತಾಸ್ತೇ -ಕಪ್ಪಾದಮೂಗೂ ಕಾಲಡಿಗಳೂ ಉಳ್ಳ ಬಿಳೀಹಂಸಪಕ್ಷಿಗಳ ಹೆಸರುಗಳು. |
| ಶರಾರಿರಾಟಿರಾತಿಶ್ಚ | ಶರಾರುಃ-ಆಟಿಃ-ಆತಿಃ-ಸ್ತ್ರೀ-೩- ಸರಟಹಕ್ಕಿಯ ಹೆಸರುಗಳು. ತೆಲುಗಿನವರು ಆಡೇಲುಪಕ್ಷಿ ಯೆನ್ನುವರು. |
| ಬಲಾಕಾಬಿಸಕಂಠಿಕಾ ॥ | ಬಲಾಕಾ-ಬಿಸಕಂಠಿಕಾ-ಸ್ತ್ರೀ-೨-ಕೊ |

| | |
|---|---|
| | ರಳು ಉದ್ದವಾಗಿಯೂ ಬಿಳುಪಾಗಿಯೂ ಇರುವ ದೊಡ್ಡ ಬೆಳ್ಳಕ್ಕಿಯ ಹೆಸರು. |
| (ಹಂಸಸ್ಯಯೋಷಿ)ದ್ವರಟಾ | ವರಟಾ-ಸ್ತ್ರೀ-೧-ಹಂಸಸ್ಯಯೋಷಿತ್-ಹಂಸಪಕ್ಷಿಯ ಹೆಂಡತಿಯ ಹೆಸರು. ಹೆಣ್ಣಂಚೆ. |
| (ಸಾರಸಸ್ಯತು) ಲಕ್ಷ್ಮಣಾ। | ಲಕ್ಷ್ಮಣಾ-ಪು-ಲಕ್ಷಣಾ-ಸ್ತ್ರೀ-ಸಾರಸಸ್ಯಯೋಷಿತ್-ಹೆಣ್ಣು ಜಲಪಕ್ಷಿ. |
| ಜತುಕಾಜಿನಪತ್ರಾ, ಸ್ಯಾತ್ಪರೊಷ್ಣೀತೈಲಪಾಯಿಕಾ ॥ | ಜತುಕಾ-ಪು-ಜತೂಕಾ-ಅಜಿನಪತ್ರಾ-ಸ್ತ್ರೀ-೨-ಕಬ್ಬಟೇಹಕ್ಕಿ,ಕತ್ತಲಹಕ್ಕಿ, ಜಿಗಟೆಗೂ ಅರ್ಥವಾಗುವದು. ಕರೇಹಕ್ಕಿಯೆಂದು ಕೆಲವರನ್ನುವರು. ಪರೋಷ್ಣೀ-ತೈಲಪಾಯಿಕಾ-ಸ್ತ್ರೀ-೨-ಹೆಂಡೇಮೂಗಕ್ಕಿಯ ಹೆಸರುಗಳು. ಜತುಕಾದಿನಾಲ್ಕುಶಬ್ದಗಳೂ ಪರ್ಯಾಯಪದಗಳೆಂದು ಕೆಲವರನ್ನುವರು. ತೆಲುಗರಿದನ್ನು ಗಬ್ಬಿಲಾಯಿ ಎಂತಲೂ ಚೀಕುರುವಾಯಿಯೆಂತಲೂ ಅರ್ಥ ಹೇಳುವರು. |
| ಚರ್ಪ್ಪಣಾಮಕ್ಷಿಕಾನೀಲೀ | ಚರ್ಪ್ಪಣಾ-ಮಕ್ಷಿಕಾ-ಸ್ತ್ರೀ-೨-ನೀಲೀಕರೇ ನೊಣ. |
| ಸರಘಾಮಧುಮಕ್ಷಿಕಾ॥ | ಸರಘಾ-ಮಧುಮಕ್ಷಿಕಾ-ಸ್ತ್ರೀ-೨- ಜೇನು ನೊಣ. |
| ಪತಂಗಿಕಾಪುತ್ತಿಕಾಸ್ಯಾ | ಪತಂಗಿಕಾ- ಪುತ್ತಿಕಾ-ಸ್ತ್ರೀ-೨- ಹೆಂಣು ಪತಂಗದ ಹುಳುವೆಗೂ, ಈಚಲು ಹುಳಕ್ಕೂ ದೊಡ್ಡ ಜೇನುನೊಣಕ್ಕೂ ಹೆಸರು |
| ದ್ದಂಶಸ್ತುವನಮಕ್ಷಿಕಾ। | ದಂಶಃ-ಪು-ವನಮಕ್ಷಿಕಾ-ಸ್ತ್ರೀ-೨-ಕಾಡು ನೊಣ. |
| ದಂಶೀ(ತಜ್ಜಾತಿರಲ್ಪಾಸ್ಯಾ | ದಂಶೀ-ಸ್ತ್ರೀ-೧-ಅಲ್ಪಾತಜ್ಜಾತಿಃ-ಸ್ಯಾತ್ ಚಿಕ್ಕ ಕಾಡು ನೊಣ, ಕಾಡುಸೊಳ್ಳೆ. |
| ದ್ಗಂಡೊಲೀವರಟಾದ್ವಯೋಃ। | ಗಂಡೊಲೀ-ಪು-ಗಂಧೊಲೀ - ವರಟಾ-ಸ್ತ್ರೀ-೨-ಕೆಂಪುತುಂಬೀ ಹೆಸರು. ಕಣಜದ ಹುಳಕ್ಕೂ ಹೆಸರು. |
| ಭೃಂಗಾರೀ... | ಭೃಂಗಾರೀ...ಝಿಲ್ಲೀಕಾ...ಚೀರುಕಾ... |

ಝಿಲ್ಲಿಕಾಚ (ಸಮೌಇಮೌ)॥

ಪಾ-ಚೀರುಕಾ-ಚೀರೀ - ಝಿಲ್ಲಿಕಾ [illegible] ೭-ರೆಕ್ಕೆಗಳುಳ್ಳ ಯಿರುವೆಗಳ ಹೆಸರು [illegible] ಚಿಂಮುಂಡೇಹುಳ ವೆನ್ನುವರು.

(ಸಮೌ)ಪತಂಗಶಲಭೌ

ಪತಂಗಃ-ಶಲಭಃ-ಪು-೨- ಪತಂಗ [illegible] ಳುವಿನ ಹೆಸರುಗಳು. ಮಿಡಿಚೆಗೂ [illegible] ಗುವದು, ಮಿಡಿತೆಗಳು.

ಖದ್ಯೋತೋಜ್ಯೋತಿರಿಂಗಣಃ।

ಖದ್ಯೋತಃ-ಜ್ಯೋತಿರಿಂಗಣಃ-ಪು [illegible] ತ್ತಲೆಯಲ್ಲಿ ದೀಪದಹಾಗೆ ಹೊಳೆಯು [illegible] ಕ್ಕೆಗಳುಳ್ಳ ಮಿಣಕುಹುಳ.

ಮಧುವ್ರತೋಮಧುಕರೋಮಧುಲಿಣ್ಮಧುಪಾಳಿನಃ ॥೨೮೫॥ ದ್ವಿರೇಫಪುಷ್ಪಲಿಡ್ಭೃಂಗ ಷಟ್ಪದ ಭ್ರಮರಾಳಯಃ। ಇಂದಿಂದಿರಶ್ಚಂಚರೀಕೋರೋಲಂಬೋ ಬಂಭರಶ್ಚಸಃ ॥೨೮೬॥

ಮಧುವ್ರತಃ-ಮಧುಕರಃ-ಮಧು [illegible] ಮಧುಪಃ-ಅಳೀ-ನ್- ದ್ವಿರೇಫಃ-ಪುಷ್ಪ [illegible] ಹ್-ಭೃಂಗಃ-ಷಟ್ಪದಃ-ಭ್ರಮರಃ-ಅ [illegible] ದಿಂದಿರಃ- ಚಂಚರೀಕಃ- ರೋಲಂಬಃ- [illegible] ರಃ-ಪು-೧೫-ತುಂಬಿಯ ಹೆಸರುಗಳು. [illegible] ಬೆ, ಹುಳ, ದುಂಬಿ, ಕಚ್ಚುವ ಜೇರು [illegible] ಭೃಂಗ, ಇಲ್ಲಿ ಇಂದಿಂದಿರವೊದಲು [illegible] ಅಧಿಕ ನಾಮಗಳು.

ಮಯೂರೋಬರ್ಹಿಣೋ ಬರ್ಹೀನೀಲಕಂಠೋ ಭುಜಂಗಭುಕ್। ಶಿಖಾವಳಶ್ಶಿಖೀಕೇಕೀಮೇಘನಾದಾನುಲಾಸ್ಯಪಿ ॥೨೮೭॥

ಮಯೂರಃ-ಬರ್ಹಿಣಃ-ಬರ್ಹೀ-ನ್ [illegible] ಲಕಂಠಃ-ಭುಜಂಗಭುಕ್-ಜ್—ಶಿಖಾವ [illegible] ಶಿಖೀ-ನ್-ಕೇಕೀ-ನ್- ಮೇಘನಾದಾನುಲಾ [illegible] ನ್-ಪು-೯-ನವಿಲಿನ ಹೆಸರುಗಳು. ನ [illegible] ಚಿತ್ತಾರದ ರೆಕ್ಕೆಯುಳ್ಳವು.

ಕೇಕಾ(ವಾಣೀಮಯೂರಸ್ಯ)

ಕೇಕಾ-ಸ್ತ್ರೀ-೧-ಮಯೂರಸ್ಯವಾ [illegible] ನವಿಲಿನಕೂಗು, ನವಿಲುಕೂಗಿನ ಹೆ [illegible] ಮಯೂರಧ್ವನಿ.

(ಸಮೌ)ಚಂದ್ರಕಮೇಚಕೌ। ಶಿಖಾಚೂಡಾಶಿಖಂಡಸ್ತು ಪಿಂಛ ಬರ್ಹೆ (ನಪುಂಸಕೆ)

ಚಂದ್ರಕಃ-ಮೇಚಕಃ-ಪು-೨-ನ [illegible] ರೀ ಮೇಲ್ಗಡೇ ಚಿತ್ರವಾಗಿರುವ ಚಂ [illegible] ಖೆಹೆಸರು,ನವಿಲುಗರೀಕಣ್ಣು,ಶಿಖಾ [illegible] ಡಾ-ಸ್ತ್ರೀ-೨-ನವಿಲುಜುಟ್ಟಿನಹೆಸರು [illegible] ಲಿನಚಂಡಿಕೆ,ಶಿಖಂಡಃ-ಪು-ಪಿಂಛಂ, ಬ [illegible] ನ್-೩- ನವಿಲುಗರೀಹೆಸರು. ನವಿಲಿನ [illegible]

ಖಗೇವಿಹಂಗವಿಹಗವಿಹಂಗಮವಿಹಾಯಸಃ।ಶಕುಂತಪಕ್ಷಿಶಕುನಿಶಕುಂತಶಕುನದ್ವಿಜಾಃ॥ ಪತತ್ರಿಪತ್ರಿಪತಗಪತತ್ಪತ್ರರಥಾಂಡಜಾಃ।ನಗೌಕೋವಾಜಿ ವಿಕಿರವಿವಿಷ್ಕಿರಪತತ್ರಯಃ॥೩೫॥ ನೀಡೋದ್ಭವಾಗರುತ್ಮಂತಃ ಪಿತ್ಸಂತೋನಭಸಂಗಮಾಃ।

(ತೇಷಾಂವಿಶೇಷಾ) ಹಾರೀತೋಮದ್ಗುಃಕಾರಂಡವಃಪ್ಲವಃ ॥ ತಿತ್ತಿರಿಃಕುಕ್ಕುಭೋಲಾವೋಜೀವಂಜೀವಶ್ಚಕೋರಕಃ। ಕೋಯಷ್ಟಿಕಟಿಟ್ಟಿಭಕೋ ವರ್ತಕೋವರ್ತಿಕಾದಯಃ

ನೌಲಿನಬಾಲ.

ಖಗಃ-ವಿಹಂಗಃ-ವಿಹಗಃ-ವಿಹಂಗಮಃ-ವಿಹಾಯಃ-ಸ-ಶಕುಂತಿಃ-ಪಕ್ಷೀ-ನ-ಶಕುನಿಃ-ಶಕುಂತಃ-ಶಕುನಃ-ದ್ವಿಜಃ-ಪತತ್ರೀ-ನ- ಪತ್ರೀ-ನ--ಪತಗಃ-ಪತತ್--ಪತ್ರರಥಃ- ಅಂಡಜಃ - ನಗೌಕಾಃ-ಸ - ವಾಜೀ-ನ್-ವಿಕಿರಃ-ವಿಃ-ವಿಷ್ಕಿರಃ- ಪತತ್ರಿಃ-. ನೀಡೋದ್ಭವಃ-ಗರುತ್ಮಾನ್ - ತ-ಪಿತ್ಸನ್-ತ-ನಭಸಂಗಮಃ-ಪು-೨೭-ಸಾಮಾನ್ಯವಾಗಿ ನಾನಾಬಗೇ ಪಕ್ಷಿಗಳೆಲ್ಲಕ್ಕೂ ಹೆಸರುಗಳು.

ಹಾರೀತಃ-ಪು-೧-ಹಸುಬನಹಕ್ಕಿ, ಮದ್ಗುಃ-ಪು-೧-ನೀರುಕಾಗಿ, ಕಾರಂಡವಃ--ಪು-೧-ಬಣ್ಣಗಳಿಂದ ಚಿತ್ರವಾಗಿರುವ ನೀರುಹಕ್ಕಿ. ಪ್ಲವಃ-ಪು-೧--ಚಿಕ್ಕ ನೀರುಕೋಳಿ, ತಿತ್ತಿರಿಃ-ಪು-೧-ವೇದದಪಕ್ಷಿ, ಕುಕ್ಕುಭಃ--ಪು-೧--ಗುಮ್ಮಪಕ್ಕಿ, ಲಾವಃ-ಪು-೧-ಲಾವಿಗೆಹಕ್ಕಿ, ಜೀವಂಜೀವಃ-ಪು-೧-ನೌಲುರಕ್ಕೀ, ಚೆಬ್ಬಕ್ಕಿ, ಚಕೋರಕಃ-ಪು-೧ಚಕೋರಪಕ್ಷಿ, ಕೋಯಷ್ಟಿಕಃ-ಪು-ಕೀಚುಬಾಲದ ಹಕ್ಕಿ, ಟಿಟ್ಟಿಭಕಃ-ಪು-೧-ಲಕುಮುಕೀಹಕ್ಕಿ, ವರ್ತಕಃ-ಪು-೧-ಕೆಂದಲೇಹಕ್ಕಿ, ವರ್ತಿಕಾ-ಸ್ತ್ರೀ-ಸಿಡಿಮಿಡಿಹಕ್ಕಿ, ಈ ೧೩ ಶಬ್ದಗಳೂ ಪಕ್ಷಿಭೇದಗಳಿಗೆ ಬೇರೆಬೇರೆ ಹೆಸರುಗಳು. ಇಲ್ಲಿ ಕೆಲವರು ಜೀವಂಜೀವಾಚಕೋರಿ-ಎಂಬದಾಗಿ ಸ್ತ್ರೀಲಿಂಗವನ್ನು ಹೇಳುವರು. ಇವೆರಡೂ ಪರ್ಯಾಯ ಪದಗಳೆಂತಲೂ ವರ್ತಕ ಶಬ್ದವನ್ನೂ ಸ್ತ್ರೀಲಿಂಗವೆಂದು ಹೇಳಿ, ವರ್ತಕಾ-ವರ್ತಿಕಾ-ಈ ೨ ಪರ್ಯಾಯ ಪದಗಳೆಂತಲೂ ಹೇಳಿದರು. ಇಲ್ಲಿ ಚಕೋರವೆಂದರೆ ಬೆಳದಿಂಗಳು ಹಕ್ಕಿ [illegible] ಬೇವಂಶಗಳು

ದರೆ ಬಣ್ಣದಹಕ್ಕಿಯೆಂತಲೂ, ಕ್ರ... ಅಂದರೆ ಸಂಗೀತದ ಹಕ್ಕಿಯೆಂತಲ್ಲ... ರ್ಥ ಹೇಳುವರು.

ಗರುತ್ಪಕ್ಷಚ್ಛದಾಃಪತ್ರಂಪತತ್ರಂಚತನೂರುಹಂ ।

ಗರುತ್-ಪಕ್ಷಃ-ಛದಃ-ಪ್ರು-ಪತ್ರಂ-ಪತ... ತನೂರುಹಂ-ನ-೬-ರೆಕ್ಕೆಗಳ ಹೆಸರು.

(ಸ್ತ್ರೀ)ಪಕ್ಷತಿಃಪಕ್ಷಮೂಲಂ

ಪಕ್ಷತಿಃ-ಸ್ತ್ರೀ-೨-ಪಕ್ಷಮೂಲಂ-... ರೆಕ್ಕೆಗಳ ಬುಡಕ್ಕೆ ಹೆಸರುಗಳು.

ಚಂಚುಸ್ತ್ರೋಟಿ (ರುಭೇಸ್ತ್ರಿಯಾ।)

ಚಂಚುಃ-ತ್ರೋಟಿಃ-ಸ್ತ್ರೀ-೨-ಪಕ್ಷಿ... ಮೂಗಿಗೆ ಹೆಸರು. ಹಕ್ಕೀ ಮೂಗ... ಕ್ಕೀ ತುಟಿ.

ಪ್ರಡೀನೋಡ್ಡೀನ ಸಂಡೀನಾ (ನ್ಯೇತಾಃ ಖಗಗತಿಕ್ರಿಯಾಃ।)

ಪ್ರಡೀನಂ-ನ-೧-ಹಾರಾಡುವಿಕೆ, ಸ... ವಿಕೆ. ಉಡ್ಡೀನಂ-ನ-೧-ಓಡುವಿಕೆ, ... ವಿಕೆ, ಗಮಿಸುವಿಕೆ. ಸಂಡೀನಂ-ನ-... ಲುವಿಕೆ, ಇಳಿಯುವಿಕೆ. ಏತಾಃ-... ಖಗಗತಿಕ್ರಿಯಾಃ-ಪಕ್ಷಿಗಳ ಗಮನದ... ಗೆ ಬಗೇ ವಿಶೇಷ ಚೇಷ್ಟೆಗಳು.

ಪೇಶೀ ಕೋಶೋ (ದ್ವಿಹೀನೇಂಡಂ

ಪೇಶಿ-ಸ್ತ್ರೀ-ಕೋಶಃ-ಪ್ರು-ಅಂಡಂ-... ಹಕ್ಕಿಗಳ ಮೊಟ್ಟೆಗೆ ಹೆಸರುಗಳು. ... ಳೀಮೊಟ್ಟೆ ಮೊದಲಾದದ್ದು. ಪೇಶೀಕೋ... ಶಃ-ಎಂಬದಾಗಿ ಏಕಪದ ಪ್ರಯೋಗ... ಯಿದೆ.

ಕುಲಾಯೋನೀಡ (ಮಸ್ತ್ರಿಯಾಂ) ॥೨೫೪॥

ಕುಲಾಯಃ-ಪ್ರು-ನೀಡಂ-ಕ್ಲ-೨-ಪಕ್ಷಿ... ಳ ಗೂಡಿಗೆ ಹೆಸರು. ಹಕ್ಕೀಗೂಡು.

ಪೋತಃಪಾಕೋರ್ಭಕೋಡಿಂಭಃಪೃಥುಕಶ್ಶಾಬಕಶ್ಶಿಶುಃ।

ಪೋತಃ-ಪಾಕಃ- ಅರ್ಭಕಃ- ಡಿಂಭ... ಪೃಥುಕಃ- ಶಾಬಕಃ-ಶಿಶುಃ-ಪ್ರು-೭-ಸಾಮಾ... ನ್ಯವಾಗಿ ಸಕಲ ಪ್ರಾಣಿಗಳ ಪಿಳ್ಳೆಗಳಿ... ಹೆಸರುಗಳು. ಮರಿ, ಪಿಳ್ಳೆ, ಮೊಗು.

(ಸ್ತ್ರೀಪುಂಸೌ) ಮಿಥುನಂ ದ್ವಂದ್ವಂ

ಮಿಥುನಂ-ದ್ವಂದ್ವಂ-ನ-೨-ಸ್ತ್ರೀ ಪು... ಷರ ಜಂಟಿಗೆ ಹೆಸರು. ದಂಪತಿಗಳು. ... ಣ್ಣು ಗಂಡುಗಳ ಜೊತೆ.

...ಂತುಯುಗಳಂಯುಗಂ।

ಯುಗ್ಮಂ-ಯುಗಳಂ-ಯುಗಂ-ನ-೩-...

ಮಾನ್ಯವಾಗಿ ಜೊತೆಗೆ ಹೆಸರು. ಎರಡು ಕೂಡಿದ್ದಕ್ಕೆ ಹೆಸರು. ಜಂಟೀ.

ಸಮೂಹ ನಿವಹವ್ಯೂಹಸಂದೊಹವಿಸರವ್ರಜಾಃ। ಸ್ತೋಮೌಘನಿಕರವ್ರಾತವಾರಸಂಘಾತಸಂಚಯಾಃ॥೨೫೬॥ ಸಮುದಾಯಸ್ಸಮುದಯಸ್ಸಮವಾಯಶ್ಚಯೋಗಣಾಃ ( ಸ್ತ್ರೀಯಶಾಂತು ) ಸಂಹತಿರ್ಬೃಂದಂ ನಿಕುರುಂಬಂ ಕದಂಬಕಂ ॥

ಸಮೂಹಃ- ನಿವಹಃ-ವ್ಯೂಹಃ- ಸಂದೊಹಃ-ವಿಸರಃ-ವ್ರಜಃ- ಸ್ತೋಮಃ- ಓಘಃ-ನಿಕರಃ-ವ್ರಾತಃ- ವಾರಃ- ಸಂಘಾತಃ- ಸಂಚಯಃ- ಸಮುದಾಯಃ- ಸಮುದಯಃ- ಸಮವಾಯಃ-ಚಯಃ-ಗಣಃ-ಪು-ಸಂಹತಿಃ-ಸ್ತ್ರೀ ಬೃಂದಂ-ನಿಕುರುಂಬಂ- ಕದಂಬಕಂ-ನ-೨೦ ಸಾಧಾರಣವಾಗಿ ಗುಂಪು, ಸಂಘ, ರಾಶಿ, ಸಭೆ, ಏಕತ್ರಸೇರಿದ ಬಹುಪದಾರ್ಥಗಳು.

( ಬೃಂದಭೆದಾಃ )

ಬೃಂದಭೆದಾಃ-ಮುಂದೆ ಹೇಳಲ್ಪಡುವಂಥಾವುಗಳು ಗುಂಪುಗಳಲ್ಲಿ ಬಗೆಬಗೇ ತರಗೆಳು ಗುಂಪುಗಳ ವಿಶೇಷನಾಮಂಗಳ್ಯಾವಾವವೆಂದರೆ ಹೇಳುತ್ತಾನೆ.

( ಸವ್ಯೈ) ರ್ವರ್ಗಃ

ವರ್ಗಃ-ಪು-೧-ಸವ್ಯೈಃ-ಎಲ್ಲವೂ ಏಕಪ್ರಕಾರವಾಗಿರುವದ್ದರಿಂದ ಪರಸ್ಪರ ಸಮಾನಗಳಾಗಿರುವ ಪದಾರ್ಥಗಳ ಗುಂಪಿಗೆ ಹೆಸರು, ಸಮಾನವಸ್ತುಗಣ.

ಸಂಘಸಾರ್ಥೌತು(ಜಂತುಭಿಃ)

ಸಂಘಃ-ಸಾರ್ಥಃ-ಪು-೨-ಜಂತುಭಿಃ-ಪ್ರಾಣಿಗಳ ಸಮೂಹಕ್ಕೆ ವಿಶೇಷನಾಮಗಳು.

ಸಜಾತೀಯೈಃ ಕುಲಂ

ಕುಲಂ-ನ-೧-ಸಜಾತೀಯೈಃ- ಸಮಾನಜಾತೀಯಗಳಾದ ಪ್ರಾಣಿಗಳ ಗುಂಪಿಗೆ ವಿಶೇಷನಾಮವು.

ಯೂಥಂ ( ತಿರಶ್ಚಾಂಪುನ್ನಪುಂಸಕಂ ) ॥೨೫೮॥

ಯೂಥಂ-ಪ್ನ-೧-ತಿರಶ್ಚಾಂ-ತಿರ್ಯಗ್ಜಂತುಸಮೂಹದ ಹೆಸರು. ಮನುಷ್ಯನು ವಿನಾ ಮಿಕ್ಕ ಎಲ್ಲಾ ಜಂತುಗಳ ಗುಂಪಿಗೂ ಯೂಥವೆಂದು ವಿಶೇಷನಾಮವು.

(ಪಶೂನಾಂ)ಸಮಜೊ

ಸಮಜಃ-ಪು-೧- ಪಶೂನಾಂ- ಪಶುಗಳ ಹಿಂಡಿಗೆಮಾತ್ರ ಸಮಜವೆಂದು ವಿಶೇಷನಾಮವು. ಆಕಳುಮುಂದೆ ಮುಂತಾದದ್ದು.

( ನ್ಯೇಷಾಂ )ಸಮಾಜೊ



ಸಮಾಜಃ-ಪು-೧-ಅನ್ಯೇಷಾಂ- ಪಶುಗಳ

(ಥಸಧರ್ಮಿಣಾಂ। ಸ್ಯಾ)ನ್ನಿ
ಕಾಯಃ

ಪುಂಜರಾಶೀ ತೂತ್ಕರಃಕೂ
ಟಮಸ್ತ್ರಿಯಾಂ ।'-೨೪೯॥

ಕಾಪೋತ ಶೌಕಮಾಯೂರ
ತೈತ್ತಿರಾದೀನಿ (ತದ್ಗಣೇ। )

(ಗೃಹಾಸಕ್ತಾಃಪಕ್ಷಿಮೃಗಾ)
ಶ್ಛೇಕಾಃ ಸ್ಯುರ್ಗೃಹ್ಯಕಾಶ್ಚತೇ ॥

ಇತಿಸಿಂಹಾದಿವರ್ಗಃ.

ಮನುಷ್ಯಾಮಾನುಷಾಮರ್ತ್ಯಾ
ಮನುಜಾ ಮಾನವಾ ನರಾಃ ।
ಸ್ಯುಃಪುಮಾಂಸಃ ಪಂಚಜನಾಃ
ಪುರುಷಾಃಪೂರುಷಾನರಃ ॥
ಸ್ತ್ರೀಯೋಷಿದಬಲಾಯೋಷಾ
ನಾರೀಸೀಮಂತಿನೀವಧೂಃ। ಪ್ರ

ಗಿಂತಲೂ ಇತರಗಳಾದ ಪ್ರಾಣಿಗಳ
ಗೆಸಮಾಜವೆಂದು ವಿಶೇಷನಾಮವು.
ನಜಂತುಗಳ ಗುಂಪು ಸಮಾಜವೆ
ವದು.

ನಿಕಾಯಃ-ಪು-೧-ಸಧರ್ಮಿಣಾಂ
ಬಗೆಯಾದ ನಡತೆಯುಳ್ಳಂಥಾವರ
ನಿಕಾಯವೆಂದು ವಿಶೇಷ ನಾಮವು.

ಪುಂಜಃ-ರಾಶಿಃ-ಉತ್ಕರಃ-ಪು-ಕೂ
ಟ-೪-ಧಾನ್ಯಾದಿಗಳರಾಶಿ,ರಾಗೀ ಇತ್ಯಾ
ತ್ತದಗುಪ್ಪೆ,ತೊಗರೀರಾಶಿಮುಂತಾದ

ಕಾಪೋತಂ-ನ-ಪಾರಿವಾಳಗ
ಳ ಗುಂಪು, ಶೌಕಂ-ನ-ಗಿಣಿಗಳ
ಮಾಯೂರಂ-ನ-ನವಿಲುಗಳಗುಂಪು
ರಂ-ನ-ನೇದಪಕ್ಷಿಗಳಗುಂಪು, ಆದಿ
ದ ಈವರ್ಗ, ತದ್ಗಣೇ-ಆಯಾಗು
ಗೂ ತಕ್ಕಂತೆ ಹೆಸರುಗಳಿರುವವು.(ಉದಾ
ಹರಣಾ) ಬಾಕಂ-ನ-ಬಕಸಂಘ.

ಛೇಕಾಃ-ಪು-ಸೇಕಾಃ-ಗೃಹ್ಯಕಾಃ
ಗೃಹಾಸಕ್ತಾಃಕಪಕ್ಷಿಮೃಗಾಃ- ಮನೆ
ಸಲಹಲ್ಪಟ್ಟು ಬಳಿಕೆಯಾಗಿರುವ ಪಕ್ಷಿ
ಗೂ ಮೃಗಗಳಿಗೂ ಹೆಸರುಗಳು.

ಸಿಂಹಾದಿವರ್ಗಃ॥ ಸಿಂಹವು ಮೊ
ದಲುಗಳಿಂದೊಡಗೂಡಿದ ಪದಗಳ
ಹವು. ಇತಿ-ಈವರ್ಗವುಮುಗಿದುದು.



ಮನುಷ್ಯಃ-ಮಾನುಷಃ- ಮರ್ತ್ಯ
ನುಜಃ-ಮಾನವಃ-ನರಃ-ಪುಮಾನ್-
ಚಜನಃ-ಪುರುಷಃ-ಪೂರುಷಃ- ನಾ
೧೧-ಮನುಷ್ಯರ ಹೆಸರುಗಳು.

ಸ್ತ್ರೀ-ಯೋಷಿತ್-ಪು-ಯೋಷಿ
ಬಲಾ-ಯೋಷಾ-ಪು-ಜೋಷಾ ನಾ

ತೀಪದರ್ಶಿನೀವಾಮಾವನಿತಾಮ
ಹಿಳಾ (ತಥಾ)      ||೭೬೦||

ಮಂತಿನೀ-ವಧೂಃ-ಊ- ಪ್ರತೀಪದರ್ಶಿನೀ-ವಾಮಾ-ವನಿತಾ- ಮಹಿಳಾ-ಸ್ತ್ರೀ-೧೧- ಸಾಮಾನ್ಯವಾಗಿ ಸ್ತ್ರೀಯರ ಹೆಸರುಗಳು.

ವಿಶೇಷಾಸ್ತ್ವಂ ) ಗನಾಭೀ
ರುಃಕಾಮಿನೀ ವಾಮಲೋಚ
ನಾ । ಪ್ರಮದಾಮಾನಿನೀಕಾಂ
ತಾಲಲನಾಚನಿತಂಬಿನೀ ||೭೬೩
ಸುಂದರೀರಮಣೀರಾಮಾ

ಅಂಗನಾ-೧-ವಳ್ಳೀ ಅವಯುವಗಳುಳ್ಳವಳು. ಭೀರುಃ-೧-ಭಯುವುಳ್ಳವಳು,ಕಾಮಿನೀ-೧- ಪುರುಷಾಪೇಕ್ಷೆಯುಳ್ಳವಳು, ವಾಮಲೋಚನಾ-೧--ವಳ್ಳೀಕಂಣುಗಳುಳ್ಳವಳು,ಪ್ರಮದಾ-೧-ಬಹಳಮದವೇರಿದವಳು, ಮಾನಿನೀ-೧-ಪ್ರಣಯ ಕೋಪವುಳ್ಳವಳು, ಪಾ-ಭಾವಿನೀ-೧-ಶೃಂಗಾರಾದಿ ಭಾವವುಳ್ಳವಳು, ಕಾಂತಾ-೧-ಚಲುವಾದ ರೂಪುಳ್ಳವಳು. ಲಲನಾ-೧-ವಿನೋದಗಾತಿ, ನಿತಂಬಿನೀ-೧-ದೊಡ್ಡ ಪಿರ್ರಗಳುಳ್ಳವಳು, ಸುಂದರೀ-ರೂಪಲಾವಣ್ಯವುಳ್ಳವಳು, ರಮಣೀ-೧ ನಾಯುಕನನ್ನು ರಮಿಸುವಹಾಗೆ ಮಾಡುವಳು, ರಾಮಾ-೧-ಗೀತ ಕಳಾದಿಗಳಿಂ ಕಲಿತ ಪಾಂಡಿತ್ಯದಿಂ ತಾನಾಗಿ ಪುರುಷನಲ್ಲಿ ನೆರೆಯುವಳು, ಸ್ತ್ರೀ-ಈ೧೨ ಆಯಾ ಸ್ತ್ರೀಯರಿಗೆ ವಿಶೇಷ ನಾಮಂಗಳು.

ಕೋಪನಾ(ಸ್ಯೆವ)ಭಾಮಿನೀ।

ಕೋಪನಾ-ಭಾಮಿನೀ-ಸ್ತ್ರೀ-೨-ಸ್ವೈಕೋಪವುಳ್ಳ ಸ್ತ್ರೀಯರ ಹೆಸರುಗಳು. ಕೋಪಗಾತಿ, ಸಿಟ್ಟುಗಾರಳು.

ವರಾರೊಹಾಮತ್ತಕಾಶಿನ್ಯು
ತ್ತಮಾವರವರ್ಣಿನೀ ||

ವರಾರೋಹಾ--ಮತ್ತಕಾಶಿನೀ-ಪಾ-ಮತ್ತಕಾಸಿನೀ- ಉತ್ತಮಾ-ವರವರ್ಣಿನೀ-ಸ್ತ್ರೀ-೪-ಉತ್ತಮ ಸ್ತ್ರೀಯ ಹೆಸರುಗಳು. ಗುಣದಿಂದಲೂ ರೂಪದಿಂದಲೂ ಜಾತಿಯಿಂದಲೂ ಹೆಚ್ಚಾದವಳು.

( ಕೃತಾಭಿಷೇಕಾ) ಮಹಿಷೀ

ಮಹಿಷೀ-ಸ್ತ್ರೀ-೧-ಕೃತಾಭಿಷೇಕಾ-ಅರಸಿನ ಪಟ್ಟದ ರಾಣಿಗೆ ಹೆಸರು.

ಭೋಗಿನ್ಯೋ ( ನ್ಯಾನೃಪ
ಸ್ತ್ರಿಯಃ)।

ಭೊಗಿನ್ಯಃ-ಸ್ತ್ರೀ-೧-ಅನ್ಯಾಃ--ನೃಪಸ್ತ್ರಿಯಃ ... ... ಪಡುವದಕ್ಕೆ ಉಪ

ಯುಕ್ತರಾಗಿ ಪಟ್ಟದರಾಣಿಗಿಂತಲೂ
ಆಗಿರುವ ಸ್ತ್ರೀಯರ ಹೆಸರುಗಳು.
ಭಂಗಾರದ ಸ್ತ್ರೀಯರಿಗೂ ಹೆಸರಾಗ

ಪತ್ನೀ ಪಾಣಿಗೃಹೀತೀಚದ್ವಿತೀಯಾಸಹಧರ್ಮಿಣೀ ॥೨೬೪॥ ಭಾರ್ಯಾಜಾಯಾ (ಥಪುಂಭೂಮ್ನಿ) ದಾರಾಃ)

ಪತ್ನೀ-ಪಾಣಿಗೃಹೀತೀ-ದ್ವಿತೀಯಾ-ಸಹಧರ್ಮಿಣೀ-ಭಾರ್ಯಾ-ಜಾಯಾ-ಸ್ತ್ರೀ-ದಾರಾಃ-ಪು-ಬ-೭-ಅಗ್ನಿಸಾಕ್ಷಿಕವಾಗಿ ಮದುವೆ ಮಾಡಿಕೊಂಡ ಹೆಂಡತಿಯ ಹೆಸರುಗಳು. ಮೊದಲು ೪ ಶಬ್ದಗಳು ಯಜ್ಞಾಧಿಕಾರವುಳ್ಳ ಹೆಂಡತಿಗೂ, ಮಿಕ್ಕ ಮೂರುಶಬ್ದಗಳು ಸಾಮಾನ್ಯವಾಗಿ ಹೆಂಡತಿಯರಿಗೂ ಹೆಸರುಗಳೆಂದು ಕೆಲವರನ್ನುವರು.

(ಸ್ಯಾತ್ತು)ಕುಟುಂಬಿನೀ। ಪುರಂಧ್ರೀ

ಕುಟುಂಬಿನೀ-ಪುರಂಧ್ರೀ-ಸ್ತ್ರೀ-೨-ಪುತ್ರಭೃತ್ಯಾದಿ ಕುಟುಂಬವುಳ್ಳ ಸ್ತ್ರೀಯ ಹೆಸರು, ಮಕ್ಕಳೊಂದಿಗಳು.

ಸುಚರಿತ್ರಾತು ಸತೀಸಾಧ್ವೀಪತಿವ್ರತಾ ॥೨೬೫॥

ಸುಚರಿತ್ರಾ-ಸತೀ-ಸಾಧ್ವೀ-ಪತಿವ್ರತಾ-ಸ್ತ್ರೀ-೪-ಪತಿವ್ರತೆಯ ಹೆಸರುಗಳು. ಶ್ರೇಷ್ಠವಾಗಿ ಗಂಡನ ಸೇವೆಯೂ ಭಕ್ತಿಯೂ ಉಳ್ಳವಳು, ಗರತಿ.

ಕೃತಸಾಪತ್ನಿಕಾಧ್ಯೂಢಾಧಿವಿನ್ನಾ

ಕೃತಸಾಪತ್ನಿಕಾ-ಅಧ್ಯೂಢಾ-ಅಧಿವಿನ್ನಾ-ಸ್ತ್ರೀ-೩-ದೊಡ್ಡ ಹೆಂಡತಿ, ಹಿರೇಹೆಂಡತಿ ಹೆಸರುಗಳು.

ಥಸ್ವಯಂವರಾ। ಪತಿಂವರಾ ಚವರ್ಯಾ

ಸ್ವಯಂವರಾ-ಪತಿಂವರಾ-ವರ್ಯಾ-ಸ್ತ್ರೀ-೩-ತಾನಾಗಿ ಗಂಡನನ್ನು ವರಿಸಿದವಳು, ಸ್ವಯಂವರದ ಹೆಣ್ಣು,

ಥಕುಲಸ್ತ್ರೀಕುಲಪಾಲಿಕಾ॥

ಕುಲಸ್ತ್ರೀ-ಕುಲಪಾಲಿಕಾ-ಸ್ತ್ರೀ-೨-ವ್ಯಭಿಚಾರದೋಷಕ್ಕೆ ಸಿಕ್ಕದೇ ತನ್ನ ಕುಲವನ್ನು ಶುದವಾಗಿರಕ್ಷಿಸಿ ಕೊಂಡಿರುವವಳ ಹೆಸರು.

ಕನ್ಯಾಕುಮಾರೀ

ಕನ್ಯಾ-ಕುಮಾರೀ-ಸ್ತ್ರೀ-೨-ಮದುವೆ ಇಲ್ಲದ ೮ ವರುಷಗಳ ಹುಡಿಗಿ ಕನ್ನಿಕೆ.

ಗೌರೀತುನಗ್ನಿಕಾನಾಗತಾ

ಗೌರೀ-ನಗ್ನಿಕಾ-ಅನಾಗತಾರ್ತವಾ-ಸ್ತ್ರೀ

| | |
|---|---|
| ರ್ತವಾ। | ೩-ಮೈನೆರೆಯದೇ ಇರುವ ಪ್ರಾಯದ ಹು ಡುಗೀ ಹೆಸರುಗಳು. |
| ಸ್ಯಾನ್ಮಧ್ಯಮಾದೃಷ್ಟರಜಾ | ಮಧ್ಯಮಾ-ದೃಷ್ಟರಜಾಃ-ಸ-ಸ್ತ್ರೀ-೨- ಹೊಸದಾಗಿ ಮೈನೆರದ ಹುಡಿಗಿಯ ಪೆಸ ರುಗಳು. |
| ಸ್ತರುಣೀಯುವತಿ (ಸ್ಸಮೌ॥ | ತರುಣೀ-ವಾ-ತಲುನೀ-ಯುವತಿಃ-ಸ್ತ್ರೀ-೨ ವಳ್ಳೀ ಪ್ರಾಯದ ಹೆಣ್ಣಿನ ಹೆಸರುಗಳು. ೧೪ ವರುಷದ ಮೇಲೆ ೩೦ವರುಷಗಳ ವ ಳಗಾಗಿ ಪ್ರಾಯದವಳು. |
| ಸಮಾಃ) ಸ್ನುಷಾಜನೀವಧ್ವ | ಸ್ನುಷಾ-ಜನೀ-ವಧೂಃ-ಸ್ತ್ರೀ-೩- ಸೊ ಸೆಯ ಹೆಸರುಗಳು. |
| ಶ್ಚಿರಂಟೀತುಸುವಾಸಿನೀ। | ಚಿರಂಟೀ-ಸುವಾಸಿನೀ-ವಾ-ಸ್ವವಾಸಿನಿ- ಸ್ತ್ರೀ -೨- ಮುತ್ತೈದೆಯ ಹೆಸರುಗಳು. ಸ್ವವಾಸಿನೀ ಎಂಬುವ ಪಾಠದಲ್ಲಿ ತೌರುಮ ನೆಯೊಳಗಿರುವ ಮುತ್ತೈದೇ ಹೆಸರು. |
| ಇಚ್ಛಾವತೀಕಾಮುಕಾಸ್ಯಾ | ಇಚ್ಛಾವತೀ ಕಾಮುಕಾ-ಸ್ತ್ರೀ-೨-ಸ್ರ ಕ್ಚಂದನ ಪುರುಷಧನಾದಿಗಳಲ್ಲಿ ಬಹಳ ಆ ಶೆಯುಳ್ಳವಳು, ಧನವನ್ನು ಹಾರೈಸುವವ ಳು, ಭೋಗವನ್ನು ಬಯಸುವವಳು. |
| ದ್ವೃಷಸ್ಯಂ ತೀತುಕಾಮು ಕೀ ॥೨೯ | ವೃಷಸ್ಯಂತೀ-ಕಾಮುಕೀ--ಸ್ತ್ರೀ-೨-ರ ತಿಯಲ್ಲಿ ಆಶೆಯುಳ್ಳವಳು. |
| (ಕಾಂತಾರ್ಥಿನೀತುಯಾಯಾ ತಿಸಂಕೇತಂಸಾ)ಭಿಸಾರಿಕಾ। | ಅಭಿಸಾರಿಕಾ- ಸ್ತ್ರೀ-೧-ಕಾಂತಾರ್ಥಿನೀ ಯಾ ಸಂಕೇತಂ ಯಾತಿ ಸಾ ಅಭಿಸಾರಿಕಾ- ರತಿಭೋಗಕ್ಕೆ ಪುರುಷನನ್ನು ಅಪೇಕ್ಷಿಸಿ, ಯಾವ ಸ್ತ್ರೀಯು ಸಂಕೇತಸ್ಥಳಕ್ಕೆ ಹೋ ಗುವಳೋ ಅಂಥಾ ಸ್ತ್ರೀಯು ಹೆಸರು. |
| ಪುಂಶ್ಚಲೀ ಧರ್ಷಣೀ ಬಂಧ ಕ್ಯಸತೀಕುಲಟೇತ್ವರೀ ॥೨೦॥ ಸ್ವೈರಿಣೀಪಾಂಸುಲಾ | ಪುಂಶ್ಚಲೀ-ಧರ್ಷಣೀ-ವಾ-ಚರ್ಷಣೀ- ಬಂಧಕೀ - ಅಸತೀ-ಕುಲಟಾ - ಇತ್ವರೀ- ಸ್ವೈರಿಣೀ--ಪಾಂಸುಲಾ-ಸ್ತ್ರೀ -೮-ಹಾದರ ಗಿತ್ತಿಯ ಹೆಸರುಗಳು. |
| (ಥಸ್ಯಾ)ದಶಿಶ್ವೀ(ಶಿಶುನಾವಿನಾ) | ಅಶೀಶ್ವೀ-ಸ್ತ್ರೀ-೧-ಶಿಶುನಾವಿನಾ--ಮಕ್ಕ |

ಅವೀರಾ(ನಿಷ್ಪತಿಸುತಾ)

ವಿಶ್ವಸ್ತಾ ವಿಧವೆ(ಸಮೇ॥)

ಆಳಿಸ್ಸಖೀವಯಸ್ಯಾಚ

ಪತಿಪತ್ನೀಸಭರ್ತೃಕಾ।

ವೃದ್ಧಾ ಪಲಿಕ್ನೀ

ಪ್ರಾಜ್ಞೀತುಪ್ರಜ್ಞಾ

ಪ್ರಾಜ್ಞಾತುಧೀಮತೀ

ಶೂದ್ರೀ( ಶೂದ್ರಸ್ಯಭಾರ್ಯಾ ಸ್ಯಾ)

(ಶೂದ್ರಾ)ತಜ್ಜಾತಿರಂಗನಾ।

ಆಭೀರೀತುಮಹಾಶೂದ್ರೀ (ಜಾತಿಪುಂಯೋಗಯೋಸ್ಸಮಾ)॥

ಆರ್ಯಾಣೀ(ಸ್ವಯ) ಮರ್ಯಾ ಸ್ಯಾತ

ಕ್ಷತ್ರಿಯಾಕ್ಷತ್ರಿಯಾಣ್ಯಪಿ।

ಳಿಲ್ಲದವಳು.

ಅವೀರಾ-ಸ್ತ್ರೀ-೧-ನಿಷ್ಪತಿಸುತಾ-ನೂ ಮಕ್ಕಳೂ ಸಹ ಇಲ್ಲದವಳು.

ವಿಶ್ವಸ್ತಾ-ವಿಧವಾ-ಸ್ತ್ರೀ-೨-ಗಂಡ ಮುಂಡೆ.

ಆಳಿಃ-ಸಖೀ-ವಯಸ್ಯಾ-ಸ್ತ್ರೀ-೩- ಹಿತಳು,

ಪತಿಪತ್ನೀ-ಸಭರ್ತೃಕಾ-ಸ್ತ್ರೀ- ಡನುಳ್ಳವಳು.

ವೃದ್ಧಾ-ಪಲಿಕ್ನೀ-ಸ್ತ್ರೀ-೨-ಮುದಿ ಹೆಸರುಗಳು.

ಪ್ರಾಜ್ಞೀ-ಪ್ರಜ್ಞಾ-ಸ್ತ್ರೀ-೨-ಲೋ ವ್ಯವಹಾರದಲ್ಲಿ ಜಾಣೆಯಾದವಳು.

ಪ್ರಾಜ್ಞಾ-ಧೀಮತೀ-ಸ್ತ್ರೀ-೨- ಬುದ್ಧಿಯುಳ್ಳವಳು.

ಶೂದ್ರೀ-ಸ್ತ್ರೀ-೧-ಶೂದ್ರಸ್ಯಭಾರ್ಯಾ ನು ಯಾವಜಾತಿಯಾದಾಗ್ಯೂ ಶೂದ್ರ ಹೆಂಡತಿಯಾದವಳ ಹೆಸರು.

ಶೂದ್ರಾ-ಸ್ತ್ರೀ-೧-ತಜ್ಜಾತಿಃ-ಅಂಗ ಶೂದ್ರಜಾತಿಯಲ್ಲಿ ಹುಟ್ಟಿ ಯಾರಿಗಾ ಹೆಂಡತಿಯಾದವಳ ಹೆಸರು.

ಆಭೀರೀ-ಮಹಾಶೂದ್ರೀ-ಸ್ತ್ರೀ- ಜಾತಿಪುಂಯೋಗಯೋಸ್ಸಮಾ- ಗೊಲ್ಲ ತಿಯಲ್ಲಿ ಹುಟ್ಟಿದವಳಿಗಾದರೂ, ಗೊ ಹೆಂಡತಿ ಯಾದವಳಿಗಾದರೂ ಹೆಸರು

ಆರ್ಯಾಣೀ-ಆರ್ಯಾ-ಸ್ತ್ರೀ-೨-ವೈಶ್ಯ ಯಲ್ಲಿ ಹುಟ್ಟಿ ವೈಶ್ಯನಿಗಾದರೂ ಗಾದರೂ ಹೆಂಡತಿಯಾದವಳು.

ಕ್ಷತ್ರಿಯಾ-ಕ್ಷತ್ರಿಯಾಣೀ-ಸ್ತ್ರೀ-೨- ಯಜಾತಿಯಲ್ಲಿ ಹುಟ್ಟಿ ಕ್ಷತ್ರಿಯನಿಗಾ ಗಾದರೂ ಹೆಂಡತಿಯಾದವ

| | |
|---|---|
| | ರುಗಳು. |
| ಉಪಾಧ್ಯಾಯಾಪ್ಯುಪಾಧ್ಯಾಯೀ | ಉಪಾಧ್ಯಾಯಾ-ಉಪಾಧ್ಯಾಯೀ-ಸ್ತ್ರೀ-೨-ತಾನೇ ವಿದ್ಯೆ ಕಲಿಸುವವಳಿಗೆ ಹೆಸರುಗಳು. |
| ಸ್ಯಾದಾಚಾರ್ಯಾ(ಪಿಚಸ್ವತಃ॥) | ಆಚಾರ್ಯಾ-ಸ್ತ್ರೀ-೧-ಸ್ವತಃ ತಾನಾಗಿ ಮಂತ್ರಾರ್ಥಗಳನ್ನು ಹೇಳಲುಳ್ಳ ಪಂಡಿತಳ ಹೆಸರು. |
| ಆಚಾರ್ಯಾಣೀ(ತುಪುಂಯೋಗೆ) | ಆಚಾರ್ಯಾಣೀ-ಸ್ತ್ರೀ-೧-ತಾನು ಮೂಢಳಾದಾಗ್ಯೂ, ಪುಂಯೋಗೆ-ಪಂಡಿತನಾದ ವಿದ್ಯಾಗುರುವಿನ ಹೆಂಡತಿಯಾದವಳು. |
| (ಸ್ಯಾ) ದರ್ಯಾಕ್ಷತ್ರಿಯೀತಥಾ। | ಅರ್ಯಾ-ಸ್ತ್ರೀ-೧-ತಾನು ಶೂದ್ರಳಾದಾಗ್ಯೂ ವೈಶ್ಯನ ಹೆಂಡತಿಯಾದವಳ ಹೆಸರು. ಕ್ಷತ್ರಿಯೀ-ಸ್ತ್ರೀ-೧-ತಥಾ - ತಾನು ವೈಶ್ಯ ಜಾತಿಯುವಳಾದಾಗ್ಯೂ ಕ್ಷತ್ರಿಯನಿಗೆ ಹೆಂಡತಿಯಾದವಳ ಹೆಸರು. |
| ಉಪಾಧ್ಯಾಯಾನ್ಯುಪಾಧ್ಯಾಯೀ | ಉಪಾಧ್ಯಾಯಾನೀ - ಉಪಾಧ್ಯಾಯೀ-ಸ್ತ್ರೀ -೨-ಪಂಡಿತನಾದ ಉಪಾಧ್ಯನ ಹೆಂಡತಿಯು ಹೆಸರುಗಳು. |
| ಪೋಟಾಸ್ತ್ರೀಪುಂಸಲಕ್ಷಣಾ ॥) | ಪೋಟಾಸ್ತ್ರೀ-೧-ಸ್ತ್ರೀಪುಂಸಲಕ್ಷಣಾ-ಸ್ತ್ರೀಲಕ್ಷಣವೂ ಪುರುಷಲಕ್ಷಣವೂ ವುಳ್ಳ ಶಿಖಂಡಿಯುಂಥಾವಳ ಹೆಸರು. |
| ವೀರಪತ್ನೀವೀರಭಾರ್ಯಾ | ವೀರಪತ್ನೀ-ವೀರಭಾರ್ಯಾ-ಸ್ತ್ರೀ-೨-ವೀರನಾದವನ ಹೆಂಡತಿಯು ಹೆಸರುಗಳು. |
| ವೀರಮಾತಾತುವೀರಸೂಃ | ವೀರಮಾತಾ-ತು-ವೀರಸೂಃ - ಸ್ತ್ರೀ-೨--ವೀರನನ್ನು ಹೆತ್ತ ತಾಯಿಯು ಹೆಸರುಗಳು. |
| ಜಾತಾಪತ್ಯಾ ಪ್ರಜಾತಾಚ ಪ್ರಸೂತಾಚಪ್ರಸೂತಿಕಾ॥ | ಜಾತಾಪತ್ಯಾ-ಪ್ರಜಾತಾ - ಪ್ರಸೂತಾ-ಪ್ರಸೂತಿಕಾ-ಸ್ತ್ರೀ -೪- ಮಕ್ಕಳನ್ನು ಹೆರುವವಳ ಹೆಸರುಗಳು. |
| (ಸ್ತ್ರೀ)ನಗ್ನಿಕಾಕೋಟವೀಸ್ಯಾ | ನಗ್ನಿಕಾ-ಕೋಟವೀ-ಸ್ತ್ರೀ-೨- ಬಟ್ಟೆಯುಡದೇ ಬೆತ್ತಲೇ ಇರುವವಳ ಹೆಸರುಗಳು. |

ಹುಟ್ಟಿದವನ ಹೆಸರು.

ಪೈತೃಷ್ವಸೇಯಃ(ಸ್ತ್ಯಾ)ತ್ಪೈತೃಷ್ವಸ್ತ್ರೀಯಶ್ಚ(ಪಿತೃಷ್ವಸುಃ।

ಪೈತೃಷ್ವಸೇಯಃ-ಪೈತೃಷ್ವಸ್ತ್ರೀ ಪು-೨-ಪಿತೃಷ್ವಸುಸ್ಸುತಃ - ಸೋ ಮಗನ ಹೆಸರುಗಳು.

ಸುತೋಮಾತೃಷ್ವಸುಶ್ಚೈವಂ)

ಮಾತೃಷ್ವಸುಸ್ಸುತಶ್ಚ ಏವಂ-ತಾ ವಡಹುಟ್ಟಿದವಳ ಮಗನಿಗೂ ಹೀ ಹೆಸರುಗಳು ಅಂದರೆ, ಮಾತೃಷ್ವಸ ಮಾತೃಷ್ವಸ್ತ್ರೀಯಃ-ಪು-೨.

ವೈಮಾತ್ರೇಯೋವಿಮಾತೃಜಃ॥

ವೈಮಾತ್ರೇಯಃ-ವಿಮಾತೃಜಃ-ಪು- ಲತಾಯಿಯ ಮಗನ ಹೆಸರುಗಳು.

ಅಥಬಾಂಧಕಿನೇಯಸ್ಸ್ಯಾದ್ಬಂಧುಲಶ್ಚಾ ಸತೀಸುತಃ । ಕೌಲಟೇಯಃಕೌಲಟೇರೋ

ಬಾಂಧಕಿನೇಯಃ-ಬಂಧುಲಃ-ಅಸ ತಃ-ಕೌಲಟೇಯಃ- ಕೌಲಟೇರಃ-ಪು ಹಾದರಗಿತ್ತಿಯ ಮಗನ ಹೆಸರುಗಳ

(ಭಿಕ್ಷುಕೀತು ಸತೀಯದಿ॥ ತದಾಕೌಲಟನೇಯೋ ಸ್ಯಾತ್ಕೌಲಟೇಯೋ(ಪಿಚಾತ್ಮಜೆ) ।

ಕೌಲಟನೇಯಃ- ಕೌಲಟೇಯಃ-ಪು ಸತೀಭಿಕ್ಷುಕೀಚಯದಿ ಅಸ್ಯಾಃ ಆತ್ಮ ತಿವ್ರತೆಯಾಗಿಯೂ ಭಿಕ್ಷಾರ್ಥವಾಗಿ ದಾನ ಬೇಡುವಳಾಗಿಯೂ ಯಿರು ಮಗನ ಹೆಸರುಗಳು.

ಆತ್ಮಜಸ್ತನಯಸ್ಸೂನುಸ್ಸುತಃಪುತ್ರಃ

ಆತ್ಮಜಃ-ತನಯಃ-ಸೂನುಃ-ಸುತ ತ್ರಃ-ಪು-೫-ಹೆತ್ತ ಮಗನ ಹೆಸರುಗಳು

(ಸ್ತ್ರಿಯಾಂತ್ವಮೀ ॥ ಆಹುರ್ದುಹಿತರಂಸರ್ವೆ)

ಅಮೀ-ಸರ್ವೆ-ಈ ೫-ನ್ನು - ಸ್ತ್ರೀ ದುಹಿತರಮಾಹುಃ-ಆತ್ಮಜಾ-ತನಯಾ ನುಃ-ಸುತಾ-ಪುತ್ರೀ-ಸ್ತ್ರೀ-೫- ಮಗಳ ರುಗಳು.

ಪತ್ಯಂತೋಕಂ(ತಯೋಸ್ಸಮೆ।)

ಅಪತ್ಯಂ-ತೋಕಂ-ನ-೨-ತಯೋಸ್ಸ ಗಂಡುಕೂಸಿಗೂ, ಹೆಣ್ಣು ಕೂಸಿಗೂ ಮಾನವಾದ ಹೆಸರು.

(ಸ್ವಜಾತೆ)ತ್ವೌರಸೌರಸ್ಯಾ

ಔರಸಃ- ಔರಸ್ಯಃ-ಪು-೨-ಸ್ವಜಾತೆ ನ್ನ ಜಾತಿಯಲ್ಲಿ ಮದುವೆ ಮಾಡಿಕೊಂಡ ಡತಿಯಲ್ಲಿ ತನ್ನ ವೀರ್ಯಕ್ಕೆ ಹುಟ್ಟಿದವ ಹೆಸರುಗಳು.

| | |
|---|---|
| ತಾತಸ್ತು ಜನಕಃಪಿತಾ ॥ | ತಾತಃ- ಜನಕಃ-ಪಿತಾ-ಋ-ಪು-೩-ತಂದೆಯ ಹೆಸರುಗಳು. |
| ಜನಯಿತ್ರೀಪ್ರಸೂರ್ಮಾತಾ ಜನನೀ | ಜನಯಿತ್ರೀ-ಪ್ರಸೂಃ-ಮಾತಾ-ಋ-ಜನನೀ-ಸ್ತ್ರೀ-೪-ತಾಯಿಯ ಹೆಸರುಗಳು. |
| ಭಗಿನೀಸ್ವಸಾ । | ಭಗಿನೀ-ಸ್ವಸಾ-ಋ-ಸ್ತ್ರೀ-೨-ವಡಹುಟ್ಟಿದವಳ ಹೆಸರು. |
| ನನಂದಾತು (ಸ್ವಸಾಪತ್ಯು | ನನಂದಾ-ಪಾ- ನನಾಂದಾ- ಋ-ಸ್ತ್ರೀ-೧-ಪತ್ಯುಸ್ಸ್ವಸಾ-ಗಂಡನ ವಡಹುಟ್ಟಿದವಳು, ನಾದಿನಿ. |
| ರ್ನಪ್ತ್ರೀಪೌತ್ರೀ (ಸುತಾತ್ಮಜಾ ॥೨೯॥ | ನಪ್ತ್ರೀ-ಪಾ-ನಪ್ತಾ-ಋ-ಪೌತ್ರೀ-ಸ್ತ್ರೀ-೨-ಸುತಾತ್ಮಜಾ- ಮಗನ ಮಗಳಹೆಸರುಗಳು. ಮಗಳ ಮಗಳಿಗೂ ಹೆಸರು. ಮೊಮ್ಮಗಳು. ಮೊಮ್ಮಗನು. |
| (ಭಾರ್ಯಾಸ್ತು ಭ್ರಾತೃವರ್ಗಸ್ಯ)ಯಾತರಃ(ಸ್ಯುಃಪರಸ್ಪರಂ। | ಯಾತರಃ-ಋ-ಬ-ಸ್ತ್ರೀ- ಭ್ರಾತೃವರ್ಗಸ್ಯಭಾರ್ಯಾಸ್ತು ಪರಸ್ಪರಂಯಾತರಃಸ್ಯುಃ-ವಡಹುಟ್ಟಿದವಳ ಹೆಂಡತಿಯರು ಪರಸ್ಪರವಾಗಿ ವಬ್ಬರಿಗೊಬ್ಬರು, ಯಾತರಃ-ಅನ್ನಿಸಿಕೊಳ್ಳುವರು, ವಾರಗಿತ್ತೀರು. |
| ಪ್ರಜಾವತೀಭ್ರಾತೃಜಾಯಾ | ಪ್ರಜಾವತೀ-ಭ್ರಾತೃಜಾಯಾ-ಸ್ತ್ರೀ-೨-ವಡಹುಟ್ಟಿದವನ ಹೆಂಡತಿ, ಅಂಣನಹೆಂಡತಿಯಾದ, ಅತ್ತಿಗೆಯೆಂದು ಕೆಲವರು. |
| ಮಾತುಲಾನೀತುಮಾತುಲೀ॥ | ಮಾತುಲಾನೀ-ಮಾತುಲೀ-ಸ್ತ್ರೀ-೨-ಸೊದರಮಾವನ ಹೆಂಡತಿಯ ಹೆಸರುಗಳು. |
| (ಪತಿಪತ್ನ್ಯೋಃ ಪ್ರಸೂಃ) ಶ್ವಶ್ರೂಃ | ಶ್ವಶ್ರೂಃ-ಸ್ತ್ರೀ-೧-ಪತಿಪತ್ನ್ಯೋಃಪ್ರಸೂಃ-ಗಂಡನತಾಯಿಗೂ, ಹೆಂಡತೀತಾಯಿಗೂ, ಹೆಸರು, ಅತ್ತೆ. |
| ಶ್ವಶುರ(ಸ್ತುಪಿತಾತಯೋಃ।) | ಶ್ವಶುರಃ-ಪು-ತಯೋಃಪಿತಾ-ಗಂಡನ ತಂದೆಗೂ ಹೆಂಡತೀತಂದೆಗೂಹೆಸರು. ಮಾವ. |
| (ಪಿತುರ್ಭ್ರಾತಾಪಿತೃವ್ಯಸ್ಸ್ಯಾತ | ಪಿತೃವ್ಯಃ-ಪು-೧-ಪಿತುರ್ಭ್ರಾತಾ- ತಂದೆಗೆ ವಡ ಹುಟ್ಟಿದವನ ಹೆಸರು. ಚಿಕ್ಕಪ್ಪ, ದೊಡ್ಡಪ್ಪ |

(ಮಾತುರ್ಭ್ರಾತಾ) ಮಾತುಲಃ ॥೨೯॥

ಮಾತುಲಃ-ಪು-೧-ಮಾತುರ್ಭ್ರಾ ಸೋದರಮಾವನ ಹೆಸರು.

ಸ್ಯಾಲಾಸ್ಸ್ಯು .(ಭ್ರಾತರಃ ಪತ್ನ್ಯಾಃ)

ಸ್ಯಾಲಾಃ-ಪು--ಶ್ಯಾಲಾಃ-ಪು-ಪತ್ನ್ಯಾಃ-ಭ್ರಾತರಃ-ಹೆಂಡತಿಗೆ ವಡಹು ವರಹೆಸರು. ಭಾವಮೈದಂದರು.

(ಸ್ವಾಮಿನೊ)ದೇವೃದೇವರೌ।

ದೇವಾ-ಋ-ದೇವರಃ-ಪು-೨-ಸ್ವಾಮಿ ಗಂಡನಿಗೆ ವಡಹುಟ್ಟಿದ ಗಂಡುಸರ ಮೈದಂದರು, ಭಾವಂದರು.

ಸ್ವಸ್ತ್ರೀಯೊ ಭಾಗಿನೇಯಃ (ಸ್ಯಾ)

ಸ್ವಸ್ರೀಯಃ-ಭಾಗಿನೇಯಃ-ಪು-೨ ಹುಟ್ಟಿದವಳಮಗನ ಹೆಸರು. ಅಕ್ಕನ ತಂಗೀಮಗ, ಸೋದರಳಿಯನು.

ಜ್ಞಾಮಾತಾ(ದುಹಿತುಃಪತಿಃ॥)

ಜಾಮಾತಾ-ಪು-ಋ-೧-ದುಹಿತುಃ ತಿಃ-ಮಗಳ ಗಂಡನ ಹೆಸರು. ಅಳಿ

ಪಿತಾಮಹಃ (ಪಿತೃಪಿತಾತತ್ಪಿತಾ)ಪ್ರಪಿತಾಮಹಃ ।

ಪಿತಾಮಹಃ-ಪು-೧-ಪಿತೃಪಿತಾ-ತಂದೆ, ತಾತ, ಪ್ರಪಿತಾಮಹಃ-ಪು-೧ ತಾ-ತಾತನತಂದೆ, ತಂದೆಗೆ ಪಿತಾಮಹ ತ್ತಾತ.

(ಮಾತುರ್ಮಾತಾ ಮಹಾದ್ಯೇವಂ)

ಏವಂ-ಈಪ್ರಕಾರವಾಗಿ, ಮಾತುಪಿತಾ ಮಹಾದಿ-ತಾಯಿಗೆ ತಂದೆ, ಮಾ ಹನು, ತಾಯಿಗೆ ಪಿತಾಮಹ, ಪ್ರಮಾ ಹನು. ೨-ಪು.

ಸಪಿಂಡಾಸ್ತು ಸನಾಭಯಃ ।

ಸಂಪಿಂಡಃ-ಸನಾಭಿಃ-ಪು-೨-ಪಿಂಡ ಮುಖ್ಯಸಂಬಂಧಿಯಾದ ಜ್ಞಾತಿ, ಸ ಲಾಂತರಗಳಿಗೆ ವಳಗಾದ ಜ್ಞಾತಿ.

ಸಮಾನೊದರ್ಯ ಸೊದರ್ಯಸಗರ್ಭ್ಯಸಹಜಾ (ಸ್ಸಮಾಃ)

ಸಮಾನೋದರ್ಯಃ-ಸೋದರ್ಯಃ-ಗರ್ಭ್ಯಃ-ಸಹಜಃ-ಪು-೪-ವಂದು ತಾಯಿ ಕ್ಕಳ ಹೆಸರು. ವಡಹುಟ್ಟಿದವನು.

ಸಗೊತ್ರಬಾಂಧವಜ್ಞಾತಿಬಂಧುಸ್ವಸ್ವಜನಾ(ಸ್ಸಮಾಃ॥)

ಸಗೋತ್ರಃ-ಬಾಂಧವಃ-ಜ್ಞಾತಿಃ-ಬಂಧುಃ-ಸ್ವಃ-ಸ್ವಜನಃ-ಪು-೬-ಒಂದು ದಲ್ಲಿ ಹುಟ್ಟಿದವನು, ತನ್ನ ವಂಶದವನ ಗೋತ್ರದಾಯಾದಿ.

| | |
|---|---|
| ಜ್ಞಾತೇಯಂಬಂಧುತಾ (ತೇ ಷಾಂಕ್ರಮಾ ದ್ಭಾವಸಮೂಹ ಯೋಃ\|) | ಜ್ಞಾತೇಯಂ-ನ-೧-ಬಂಧುತಾ-ಸ್ತ್ರೀ-ಈ- ಕ್ರಮಾತ್ತೇಷಾಂ ಭಾವಸಮೂಹಯೋಃ- ಜ್ಞಾತೇಯವೆಂದರೆ ಜ್ಞಾತಿತನ, ಬಂಧುತಾ ಅಂದರೆ ನೆಂಟರಗುಂಪು, ನೆಂಟ ತನಕ್ಕೂ ಹೆಸರೆಂದು ಕೆಲವರನ್ನುವರು. |
| ಧವಃಪ್ರಿಯಃಪತಿರ್ಭರ್ತಾ | ಧವಃ-ಪ್ರಿಯಃ-ಪತಿಃ-ಭರ್ತಾ-ಋ- ಪು ೪-ಗಂಡನ ಪೆಸರುಗಳು. |
| ಜಾರಸ್ತೂಪಪತಿ(ಸ್ಸಮೌ\|\|) | ಜಾರಃ-ಉಪಪತಿಃ-ಪು-೨-ಮಿಂಡಗಾರ ನ ಪೆಸರು. |
| ಅಮೃತೇಜಾರಜಃ) ಕುಂಡೋ | ಕುಂಡಃ-ಪು-೧-ಅಮೃತೇಜಾರಜಃ-ಗಂಡ ನು ಸಾಯದೇ ಯಿರುವಾಗಲೆ ಮಿಂಡನದೆಸೆ ಯಿಂದ ಹುಟ್ಟಿಸಿಕೊಂಡ ಹಾದರದ ಮಗ ನ ಹೆಸರು. |
| (ಮೃತೇಭರ್ತರಿ) ಗೋಳಕಃ\| | ಗೋಳಕಃ-ಪು-೧-ಭರ್ತರಿಮೃತೆ ಜಾರ ಜಃ-ಗಂಡನು ಸತ್ತಮೇಲೆ ಮಿಂಡನ ದೆಸೆ ಯಿಂದ ಹುಟ್ಟಿಸಿಕೊಂಡ ಹಾದರದ ಮಗ ನ ಹೆಸರು. |
| (ಭ್ರಾತ್ರೀಯೋ)ಭ್ರಾತೃಜಃ | ಭ್ರಾತ್ರೀಯಃ-ಭ್ರಾತೃಜಃ-ಪು-೨- ಒಡ ಹುಟ್ಟಿದವನಮಗ, ಅಣ್ಣನಮಗ, ತಮ್ಮನ ಮಗ. |
| (ಭ್ರಾತೃಭಗಿನ್ಯೌ)ಭ್ರಾತರಾ ವ್ರಭೌ) \|\|೨೯\|\| | ಭ್ರಾತರೌ-ಪು-ಋ-೧-ಭ್ರಾತೃಭಗಿನ್ಯೌ- ಉಭೌ ಒಡಹುಟ್ಟಿದ ಹೆಂಗಸೂ ಗಂಡಸೂ, ಸೇರಿ ಹೆಸರು. ಅಂದರೆ ಅಣ್ಣ, ಅಕ್ಕ, ಇವ ರಿಬ್ಬರಿಗೂಕೂಡ ಭ್ರಾತರೌ ಎಂದು ೧ ಹೆ ಸರು. ಒಬ್ಬೊಬ್ಬರಿಗೆ ಅಲ್ಲವು. ಹೀಗೆಯೇ ಅಣ್ಣತಂಗಿ ೨ ಗೂ, ಅಕ್ಕ ತಮ್ಮ ೨ಗೂ, ಭ್ರಾತರೌ ಎಂದು ಏಕನಾಮವು. |
| ಮಾತಾಪಿತರೌಪಿತರೌಮಾತ ರಪಿತರೌಪ್ರಸೂಜನಯಿತಾರೌ | ಮಾತಾಪಿತರೌ-ಋ- ಪಿತರೌ - ಋ- ಮಾತರಪಿತರೌ-ಅಕಾರಾಂತ-ಪಾ-ಮಾತರ ಪಿತರೌ-ಪು-ಋ-ದ್ವಿ-೩-ತಾಯಿ ತಂದೆಗಳಿ ಬ್ಬರನ್ನೂ ಕೂಡಾ ಹೇಳುವಾಗ ಒಂದೊಂ |

| | |
|---|---|
| | ದೇ ಪೆಸರುಗಳ್ಳು. |
| ಶ್ವಶ್ರೂಶ್ವಶುರೌಶ್ವಶುರೌ | ಶ್ವಶ್ರೂಶ್ವಶುರೌ-ಶ್ವಶುರೌ-... -ಅತ್ತೆ ಮಾವಂದರಿಬ್ಬರಿಗೂ ಕ... ದೊಂದೇ ಪೆಸರುಗಳು. |
| ಪುತ್ರೌ (ಪುತ್ರಶ್ಚ ದುಹಿತಾ ಚ) ॥೨೯೭॥ | ಪುತ್ರೌ-ಪು-ದ್ವಿ-೧-ಪುತ್ರಶ್ಚ ದು... ಚ-ಮಗನಿಗೂ ಮಗಳಿಗೂ ಕೂಡ... ಹೆಸರು. |
| ದಂಪತೀಜಂಪತೀಜಾಯಾಪತೀಭಾರ್ಯಾಪತೀ(ಚತೌ) | ದಂಪತೀ-ಜಂಪತೀ-ಜಾಯಾಪತೀ... ರ್ಯಾಪತೀ-ಪು - ದ್ವಿ-ಗಂಡ ಹೆಂ... ಗೂ ಕೂಡಾ ಪಂದೇ ಪೆಸರುಗಳ್ಳು. |
| ಗರ್ಭಾಶಯೋಜರಾಯುಃಪುಂಸ್ಯುಲ್ಬಂಚ ಕಲಲೋಸ್ತ್ರಿಯಾಂ | ಗರ್ಭಾಶಯಃ-ಜರಾಯುಃ -ಉ... -೧- ಬಸುರೊಳಗೆ ಸುತ್ತಿಕೊ... ಮಾವಿಚೀಲದ ಹೆಸರು. ಉಲ್ಬಂ-... ಲಃ-ಪ್ನ-೧-- ಬಸುರೊಳಗೆ ಪುರುಷ... ವೀರ್ಯಗಳಾದ ಶುಕ್ಲಶೋಣಿತಗಳು... ತ ಪಿಂಡಕ್ಕೆ ಪೆಸರು. ಈ ನಾಲ್ಕು... ವಿಚೀಲಕ್ಕೆ ಹೆಸರೆಂತಲೂ, ಮೊದ... ಮಾತ್ರ ಮಾಸುಚೀಲಕ್ಕೆ ಹೆಸರುಗ... ಲೂ ಕೆಲಕೆಲವರು ಪೇಳುವರು. |
| ಸೂತಿಮಾಸೋವೈಜನನೋ | ಸೂತಿಮಾಸಃ-ವೈಜನನಃ-ಪು-೧-... ರಾದವಳ ನೋಗುವಸ್ನು ಹೆರುವತಿಂಗಳು... ರಿಗೆತಿಂಗಳ್ಳು. |
| ಗರ್ಭೋಭ್ರೂಣ (ಇಮೌಸಮೌ) | ಗರ್ಭಃ-ಭ್ರೂಣಃ-ಪು-೧- ಗರ್ಭದ... ರು-ಬಸುರು. |
| ತೃತೀಯಾ ಪ್ರಕೃತಿಃಶಂಡಃ ಕ್ಲೀಬಂಷಂಡೋನಪುಂಸಕಂ॥ | ತೃತೀಯಾಪ್ರಕೃತಿಃ-ಸ್ತ್ರೀ-ಶಂಡಃ-... ಷಂಡಃ-ಪು-ಕ್ಲೀಬಂ-ನ - ಷಂಡಃ-ಪು... ಪುಂಸಕಂ-ನ -೫- ನಪುಂಸಕನ ಪೆಸ... ಳ್ಳು,ಶಿಖಂಡಿಯೆಂಬುವರು. ಎಂದಿಗೂ ಪ... ರೆಯದೇ ಎದೆಭಾವ ವಿಲ್ಲದ ಹೆಂಗಸ... ಗಡ್ಡ ಮಾಸೆಗಳೂ ಯಿಲ್ಲದೇ ಲಿಂಗವ... ಹೆಂಡಸಿನ ಹೆಸರುಗಳ್ಳು. |

| | |
|---|---|
| ಶಿಶುತ್ವಂಶೈಶವಂಬಾಲ್ಯಂ | ಶಿಶುತ್ವಂ-ಶೈಶವಂ--ಬಾಲ್ಯಂ-ನ-೩- ಹದಿನಾರು ವರುಷಗಳಿಗೆ ಕಡಮೆಯಾದ ವಯಸ್ಸು,ಹುಡುಗತನ. |
| ತಾರುಣ್ಯಂಯೌವನಂಸಮೆ। | ತಾರುಣ್ಯಂ-ಯೌವ್ವನಂ-ನ-೨-ಪ್ರಾಯದಹೆಸರು. |
| ಸ್ಯಾತ್ಸ್ಥಾನವಿರಂತುವೃದ್ಧತ್ವಂ | ಸ್ಥಾವಿರಂ-ವೃದ್ಧತ್ವಂ -ನ-೨-೫೦ ವರುಷಗಳಿಗೆ ಮಿಂಚಿದ ವಯಸ್ಸು ಮುದಿತನ, ಮುಪ್ಪು. |
| (ವೃದ್ಧಸಂಘೇಪಿ)ವಾರ್ಧಕಂ॥ | ವಾರ್ಧಕಂ-ನ-೧-ವೃದ್ಧಸಂಘೇಪಿ- ಮುದಕರಗುಂಪಿಗೆ ಹೆಸರು, ಅಪಿಶಬ್ದದಿಂದ ವಾರ್ಧಕಂ ಅಂದರೆ ಮುದುಕತನಕ್ಕೂ ಪೆಸರಾಗುವದು. |
| ಪಲಿತಂಜರಸಾ ಶೌಕ್ಲ್ಯಂಕೆಶಾದೌ | ಪಲಿತಂ-ನ-ಕೇಶಾದೌ-ಜರಸಾಶೌಕ್ಲ್ಯಂ- ಮುದಿತನದಿಂದ ಕೂದಲುಮುಂತಾದ ರೋಮಗಳೆಲ್ಲಾಉಂಟಾಗುವ ಬಿಳುಪು. ಕೂದಲುನೆರತು ಹೋಗುವಿಕೆ. |
| ವಿಸ್ರಸಾಜರಾ । | ವಿಸ್ರಸಾ-ಜರಾ-ಸ್ತ್ರೀ-೨-ಬಹಳೆ ಮುದಿತನದ ಹೆಸರು. ಕೇವಲಮುಪ್ಪು.<br>* ಮುಂದೆಹೇಳಲ್ಪಡುವ ಉತ್ತಾನಶಯಾದಿಶಬ್ದಗಳಿಗೆ (ತ್ರಿಷುಜರಾವರಾಃ) ಎಂಬುವಸ್ಥಳದಲ್ಲಿ-ಲಿಂಗನಿರ್ಣಯ ಹೇಳಲ್ಪಡುತ್ತೆ. |
| (ಸ್ಯಾ)ದುತ್ತಾನಶಯೋಡಿಂಭಃಸ್ತನಪಾಶ್ಚಸ್ತನಂಧಯಃ॥ | ಉತ್ತಾನಶಯಃ-ಡಿಂಭಃ-ಸ್ತನಪಾಃ-ಆ-ಸ್ತನಂಧಯಃ-೪-ಪು- ಮೊಲೆಯುಣ್ಣುವ ಯಳೇಮಗು,ಉತ್ತಾನಶಯಾ-ಹೆಂಣುಕೂಸು. |
| ಬಾಲ (ಸ್ತುಸ್ಯಾ) ನ್ಮಾಣವಕೊ | ಬಾಲಃ-ಮಾಣವಕಃ-ಹದಿನಾರು ವರುಷಗಳಿಗಿಂತಲೂ ಕಡಮೆಯಾಗಿರುವ ವಯಸ್ಸುಳ್ಳ ಹುಡಗನ ಪೆಸರು. ಬಾಲಾ-ಹೆಂಣುಹುಡಿಗಿ. |
| ವಯಸ್ಥಸ್ತರುಣೊಯುವಾ। | ವಯಸ್ಥಃ-ತರುಣಃ-ಯುವಾ-ನ್-೩-ಪ್ರಾಯದ ಹುಡಗನ ಹೆಸರುಗಳು. ತರುಣೀ-ಪ್ರಾಯದ ಹುಡಿಗಿ. |

ಪ್ರವಯಾಸ್ಥ್ಸವಿರೋವೃದ್ಧೋ
ಜೀನೋಜೀರ್ಣೋಜರನ್ನಪಿ॥

ವರ್ಷೀಯಾನ್ ದಶಮೀಜ್ಯಾ
ಯಾನ್

ಪೂರ್ವಜಸ್ತ್ವಗ್ರಿಯೋಗ್ರಜಃ।

ಜಘನ್ಯಜೇಸ್ಯುಃ ಕನಿಷ್ಠಯು
ವೀಯೋವರಜಾನುಜಾಃ॥೪೨॥

ಅಮಾಂಸೋದುರ್ಬಲಶ್ಛಾತೋ

ಬಲವಾನ್ ಮಾಂಸಲೋಂಸ
ಲಃ

ತುಂದಿಲಸ್ತುಂದಿಭಸ್ತುಂದೀಬೃ
ಹತ್ಕುಕ್ಷಿಃಪಿಚಂಡಿಲಃ॥

ಅವಟೀಟೋ ವನಾಟಶ್ಚಾವ
ಭ್ರಟೋನತನಾಸಿಕೇ।

ಕೇಶವಃಕೇಶಿಕಃಕೇಶೀ

ವಲಿನೋವಲಿಭ (ಸ್ಸಮೌ)

ಪ್ರವಯಾಃ-ಸ-ಸ್ಥವಿರಃ-ವೃದ್ಧಃ-
ಜೀರ್ಣಃ- ಜರನ್-ತ-೭--ಮುದುಕ
ರುಗಳು. ವೃದ್ಧಾ-ಮುದಿಕಿ.

ವರ್ಷೀಯಾನ್- ಸ-ದಶಮೀ-
ಜ್ಯಾಯಾನ್- ನ್-ಪು-೩-ಶತ ವೃದ್ಧ-ಮು
ದುಕ-ಹತ್ತನೇಅವಸ್ಥೆ, ಸಮೀಪಸ್ತ
ಳ್ಳವನು.

ಪೂರ್ವಜಃ- ಅಗ್ರಿಯಃ-ಅಗ್ರಜ
ಣ್ಣನ ಹೆಸರುಗಳು.

ಜಘನ್ಯಜಃ-ಕನಿಷ್ಠಃ-ಯವೀ
ಅವರಜಃ-ಅನುಜಃ -೬-ತಂಮನ ಹೆ
ಳು.

ಅಮಾಂಸಃ-ದುರ್ಬಲಃ-ಛಾತಃ-
ತಃ-೩-ಬಡಬಡಕಲುವೈಯುಳ್ಳವ
ಪೇತಲವನು, ಬಲವಿಲ್ಲದವನು, ಅ

ಬಲವಾನ್-ತ-ಮಾಂಸಲಃ-ಅಂಸ
ಬಲಿತವನು, ಬಲಿಷ್ಠ, ಶಕ್ತಿಯುಳ್ಳ

ತುಂದಿಲಃ-ತುಂದಿಭಃ-ಮಾ-- ತುಂ
ತುಂದೀ-ನ್--ಬೃಹತ್ಕುಕ್ಷಿಃ-ಪಿಚಂಡಿ
ದೊಡ್ಡ ಹೊಟ್ಟೆಯುಳ್ಳವನು ಬೊಜ್ಜ
ನವನು-ಡೋಲು ಹೊಟ್ಟೆಯುವನು.

ಅವಟೀಟಃ-ಅವನಾಟಃ-ಅವಭ್ರ
ತನಾಸಿಕಃ-೪-ಕುಳಿಮೂಗಿನವನ ಹೆ
ಳು. ಚಿಕ್ಕ ಮೂಗುಳ್ಳವನು, ನಡ್ಡಿ
ಗುಳ್ಳವನು.

ಕೇಶವಃ-ಕೇಶಿಕಃ-ಕೇಶೀ-ನ್-೩-
ಮುಂಡೆಗೂದಲುಳ್ಳವನು. ಉದ್ದವಾದ
ನೇ ಬಹಳ ಜುಟ್ಟುಳ್ಳವನು.

ವಲಿನಃ- ವಲಿಭಃ-೨- ಹೊಟ್ಟೆಯ
ರೇಖೆರೇಖೆಗಳಾಗಿ ತ್ರಿವಳಿಗಳೆಂಬ ಚರ್ಮ
ಮಡತೆಗಳುಳ್ಳವನಹೆಸರು. ಮತ್ತೆ

ತನದಿಂದ ಚರ್ಮದೊಳಗೆ ರಕ್ತಮಾಂಸಗಳ ಸತ್ವ ಕಡಮೆಯಾಗಿ ಜೋಲುಬಿದ್ದ ಗಳಿಗೆ ಚರ್ಮಯುಳ್ಳವನಿಗೂ ಹೆಸರುಗಳು.

ವಿಕಲಾಂಗಸ್ತು ಪೋಗಂಡಃ

ವಿಲಾಂಗಃ-ಪೋಗಂಡಃ-ಪು-ಅಪೋಗಂಡಃ-೨-ಅಂಗಹೀನವಾದವನ ಹೆಸರುಗಳು. ಕುಂಟಕುರುಡ ಮುಂತಾದವರೆಲ್ಲಕ್ಕೂ ಸಾಮಾನ್ಯ ನಾಮವು.

ಖರ್ವೋಹ್ರಸ್ವಶ್ಚ ವಾಮನಃ।

ಖರ್ವಃ-ಹ್ರಸ್ವಃ-ವಾಮನಃ-೩-ಮೊಟಕಾದವನು, ಗಿಡ್ಡನು, ಉದ್ದನಾಲದಕುಳ್ಳನು.

ಖರಣಾಸಸ್ಸ್ಯಾತ್ ಖರಣಸೊ

ಖರಣಾಃ-ಸ--ಖರಣಸಃ-ಅ-೨- ಗಂಟುಮೂಗಿನವನು, ಚಪಟಿಮೂಗಿನವನು, ಉದ್ದ ಮೂಗಿನವನು.

ವಿಗ್ರೋವಿಗತನಾಸಿಕಃ॥೩೦॥

ವಿಗ್ರಃ-ಪು-ವಿಖ್ಯಃ- ವಿಗತನಾಸಿಕಃ-೨-ಮೂಗಿಲ್ಲದವನು ಮುಕ್ಕಡಿಯುವನು.

ಖುರಣಾಃಸ್ಸ್ಯಾತ್ ಖುರಣಸಃ

ಖುರಣಾಃ-ಸ-ಖುರಣಸಃ-೨- ಬುರುಡೆ ಮೂಗುಳ್ಳವನು. ಹೀನಸೀಮೂಗನು,ಕೊಕ್ಕೀ ಮೂಗಿನವನಿಗೂ ಹೆಸರು.

ಪ್ರಜ್ಞುಃಪ್ರಗತಜಾನುಕಃ।

ಪ್ರಜ್ಞುಃ-ಪು--ಪ್ರಜ್ಞುಃ- ಪ್ರಗತಜಾನುಕಃ-೨-ಎಂದಕ್ಕೊಂದು ದೂರವಾಗಿ ಅಗಲವಾದ ಮೊಳ ಕಾಲುಳ್ಳವನಹೆಸರು. ಕಿಸುಗಾಲವನು.

ಊರ್ಧ್ವಜ್ಞುರೂರ್ಧ್ವಜಾನುಃ (ಸ್ಯಾತ್)

ಊರ್ಧಜ್ಞುಃ-ಪು-ಊರ್ಧ್ವಜ್ಞುಃ- ಊರ್ಧ್ವಜಾನುಃ-೨- ಉದ್ದವಾದ ಮೊಳಕಾಲುಳ್ಳವನು. ಬಾರುಕಾಲವನು.

ಸಂಜ್ಞುಸ್ಸಂಹತಜಾನುಕಃ॥

ಸಂಜ್ಞುಃ-ಪು- ಸಂಜ್ಞು—ಸಂಹತ ಜಾನುಕಃ-೨-ಎಂದಕ್ಕೊಂದು ತಗಲುವ ಮೊಳಕಾಲುಗಳುಳ್ಳವನ ಹೆಸರುಗಳು.

ಸ್ಯಾದೆಡೆಬಧಿರಃ

ಏಡಃ-ಬಧಿರಃ-೨-ಕಿವುಡನಹೆಸರುಗಳು.

ಕುಬ್ಜೆ ಗಡುಲಃ

ಕುಬ್ಜಃ-ಗಡುಲಃ-೨-ಗೂನುಂಟಾಗಿ ಎಲುವುಗಳು ಬೊಗ್ಗಿ ಗಂಟಿಕ್ಕಿದ ಗುಜ್ಜಾರಿ ಯಾದವನು.

ಕುಕರೆಕುಣಿಃ

ಕುಕರಃ-ಕುಣಿಃ-ಪು--ಕೋಣಃ-೨--ಕೈಯಿಲ್ಲದ ಹೆಳವನ ಹೆಸರುಗಳು, ಬೊಟ್ಟ ಕೈಯಿಳ್ಳವನು.

ಪೃಶ್ನಿರಲ್ಪತನೌ

ಪೃಶ್ನಿಃ-ಅಲ್ಪತನುಃ-೨--ಚಿಕ್ಕಮೈಯ್ಯವನು, ಸಣ್ಣ ಸೆಗಿಡ್ಡಾಳು, ಗಿಡ್ಡ ಬಡಕಲವನು.

ಶ್ರೋಣಃಪಂಗೌ

ಶ್ರೋಣಃ-ಪಂಗುಃ-೨-ಕಾಲಿಲ್ಲದ ಕುಂಟನಹೆಸರುಗಳು, ಕುಂಟುಕಾಲುಳ್ಳವನು.

ಮುಂಡಸ್ತುಮುಂಡಿತೆ॥

ಮುಂಡಃ--ಮುಂಡಿತಃ-೨--ತಲೇಮೇಲೆ ಕೂದಲುಬೆಳೆಯುದ ಬೋಳುತಲೆಯುವನು.

ವಳಿರಃಕೆಕರೆ

ವಳಿರಃ-ಕೇಕರಃ-೨- ಮೆಳ್ಳೆಗಣ್ಣನವನು.

ಖೋಡೆಖಂಜ

ಖೋಡಃ-ಖಂಜಃ-೨-ತೊಡೆಗಳ ಹರಿವಿಗೂ ಕಾಲುಗಳೇ ಯಿಲ್ಲದ ಕುಂಟನು.

ಸ್ತ್ರೀಪುಜರಾವರಾಃ।

ಜರಾವರಾಃ-ತ್ರಿಪು- ಜರಾಶಬ್ದದಿಂದಆಚೆಗೆ ಹೇಳಲ್ಪಟ್ಟ ಉತ್ತಾನಶಯಾದಿ ಖಂಜ ಶಬ್ದದವರಿಗೂ ಮಧ್ಯೆ ಇರುವ ಶಬ್ದಗಳೆಲ್ಲ ಮೂರುಲಿಂಗಗಳಲ್ಲಿಯೂ ಪ್ರಯೋಗವಿಧೆ(*ಉದಾಹರಣ*)ವಿಕಲಾ-ಖರ್ವಾ-ಸ್ತ್ರೀ- ವಿಕಲಂ- ಖರ್ವಂ-ನ--ಇತ್ಯಾದಿಗಳು.

ಜಟುಲಃಕಾಲಕಃಪಿಪ್ಲುಸ್ತಿಲಕಸ್ತಿಲಕಾಲಕಃ॥

ಜಟುಲಃ-ಪು-ಜಡುಲಃ-ಕಾಲಕಃ-ಪಿಪ್ಲುಃ-ತಿಲಕಃ- ತಿಲಕಾಲಕಃ-ಪು-೫-ತಿಲಕಾಕಾರಗಳಾದ ಕರೀಮಚ್ಚೆಗಳ ಹೆಸರುಗಳು, ಸಂಗಾತೀಮಚ್ಚೆ, ಹುಟ್ಟುಮಚ್ಚೆ.

ಅನಾಮಯಂ ಸ್ಯಾದಾರೋಗ್ಯಂ

ಅನಾಮಯಂ-ಆರೋಗ್ಯಂ-ನ-೨-ರೋಗವಿಲ್ಲದೇಯಿರುವಿಕೆ, ವಾತಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಗಳೂ ಸಮಾನವಾಗಿರುವಿಕೆ.

ಚಿಕಿತ್ಸಾ(ರುಕ್ಪ್ರತಿಕ್ರಿಯಾ)

ಚಿಕಿತ್ಸಾ-ಸ್ತ್ರೀ-೧-ರುಕ್ಪ್ರತಿಕ್ರಿಯಾ-ರೋಗಕ್ಕೆ ಶಾಮಕವಾಗಿ ಔಷಧಾದಿ ಪ್ರತಿಕ್ರಿಯೆಗಳನ್ನು ಮಾಡುವಿಕೆ.

ಭೇಷಜೌಷಧಭೈಷಜ್ಯಾನ್ಯಗದೋಜಾಯು(ರಿತ್ಯಪಿ)

ಭೇಷಜಂ-ಔಷಧಂ-ಭೈಷಜ್ಯಂ- ನ-ಅಗದಃ-ಪು-ಜಾಯುಃ-ಸ್ತ್ರೀ-೫-ರೋಗಹರ

ವಾದವುದ್ದಿನ ಹೆಸರು.

(ಸ್ತ್ರೀ)ರುಗ್ರುಜಾಚೋಪತಾಪ ರೋಗವ್ಯಾಧಿಗದಾಮಯಾಃ

ರುಕ್-ಕ್-ರುಜಾ-ಆ-ಸ್ತ್ರೀ-ಉಪತಾಪಃ-ರೋಗಃ-ವ್ಯಾಧಿಃ-ಗದಃ-ಆಮಯಃ-ಪು-೭-ರೋಗದ ಹೆಸರುಗಳು.

(ಪುಮಾನ್) ಯಕ್ಷ್ಮಾ ಕ್ಷಯ ಶ್ಶೋಷಃ

ಯಕ್ಷ್ಮಾ-ನ್-ಕ್ಷಯಃ-ಶೋಷಃ- ಪು-೩-ಕ್ಷಯರೋಗದ ಹೆಸರುಗಳು.

ಪ್ರತಿಶ್ಯಾಯಸ್ತು ಪೀನಸಃ॥

ಪ್ರತಿಶ್ಯಾಯಃ-ಪೀನಸಃ-ಪು-೨- ಪೀನಸ ರೋಗದ ಹೆಸರುಗಳು.

(ಸ್ತ್ರೀ)ಕ್ಷುತ್ಕ್ಷುತಂಕ್ಷವಃ(ಪುಂಸಿ)

ಕ್ಷುತ್-ಧ್-ಸ್ತ್ರೀ-ಕ್ಷುತಂ-ನ- ಕ್ಷವಃ-ಪು-೩-ಸೀನುಗಳ ಹೆಸರುಗಳು.

ಕಾಸಸ್ತು ಕ್ಷವಥುಃ(ಪುಮಾನ್

ಕಾಸಃ-ಕ್ಷವಥುಃ-ಪು-೨-ಕೆಮ್ಮಲು, ಗೂರುಬ್ಬಸ.

ಶೋಫಸ್ತು ಶ್ವಯಥುಶ್ಶೋಥಃ।

ಶೋಫಃ-ಶ್ವಯಥುಃ-ಶೋಥಃ-ಪು-೩-ಬಾತುಕೊಳ್ಳುವಿಕೆ,ಬಾವು

ಪಾದಸ್ಫೋಟೋವಿಪಾದಿಕಾ ॥

ಪಾದಸ್ಫೋಟಃ-ಪು-ವಿಪಾದಿಕಾ-ಸ್ತ್ರೀ-೨-ಕಾಲುಗಳು ಒಡೆಯುವ ಕುಷ್ಠರೋಗ ವಿಶೇಷ.

ಕಿಲಾಸಂಸಿಧ್ಮ

ಕಿಲಾಸಂ-ಸಿಧ್ಮ-ನ್-ಪು- ಸಿಧ್ಮಂ-ನ -೨ ಸಿಬ್ಬಿದ ಹೆಸರುಗಳು, ಸಿಬ್ಬ.

ಕಚ್ಛ್ವಾಂತುಪಾಮಪಾಮವಿಚರ್ಚಿಕಾ।

ಕಚ್ಛೂಃ-ಊ-ಪಾಮನ್-ನ್-ನ-ಪಾಮಾ-ಆ-ವಿಚರ್ಚಿಕ-೪-ಸ್ತ್ರೀ-ಕಜ್ಜಿ, ತುರಿ ಕಜ್ಜಿ.

ಕಂಡೂಃಖರ್ಜೂಶ್ಚ ಕಂಡೂಯಾ

ಕಂಡೂಃ-ಖರ್ಜೂಃ-ಕಂಡೂಯಾ-ಸ್ತ್ರೀ-೩-ನವೆ, ತುರಿ.

ವಿಸ್ಫೋಟಃಪಿಟಕ (ಸ್ತ್ರೀಪು॥)

ವಿಸ್ಫೋಟಃ-ಪು-ಪಿಟಕಃ-ತ್ರಿ-೨-ಬೊಕ್ಕೆ, ಹುಣ್ಣಿನ ಹೊಕ್ಕೆ, ಬೊಬ್ಬೆ.

ವ್ರಣೋ(ಸ್ತ್ರೀಯಾ)ಮೀರ್ಮಮರುಃ (ಕ್ಲೀಬೆ)

ವ್ರಣಃ-ಪ್ನ-ಈರ್ಮಂ-ಅರುಃ -ಸ್- ನ ೩-ಹುಣ್ಣು.

ನಾಡೀವ್ರಣಃ(ಪುಮಾನ್ ।

ನಾಡೀವ್ರಣಃ- ಪು-೧-ನಾರು ಹುಣ್ಣಿನ ಹೆಸರು

ಕೋಠೋಮಂಡಲಕಂ

ಕೋಠಃ-ಪು-ಮಂಡಲಕಂ-ನ-೨-ಮಂಡಲಾಕಾರವಾದ ಕುಷ್ಠದ ಹೆಸರು ಕೊ.

| | |
|---|---|
| | ಳಿಮಚ್ಚೆ ಹುಣ್ಣು. |
| ಕುಷ್ಠಶ್ವಿತ್ರೆ | ಕುಷ್ಠಂ-ಶ್ವಿತ್ರಂ- ನ-೨-ಬಿಳಿಕುಷ್ಠ, ತೊಣ್ಣು. |
| ದುರ್ನಾಮ ಕಾರ್ಶಸೀ | ದುರ್ನಾಮಕಂ-ಅರ್ಶಃ-ಸ-ನ-೨-ಮೂಲವ್ಯಾಧಿ, ಮೊಳೇ ರೋಗ. |
| ಆನಾಹಸ್ತುವಿಬಂಧಃಸ್ಯಾತ | ಆನಾಹಃ- ವಿಬಂಧಃ-ಪು-ನಿಬಂಧಃ-ಪ್ರ-೨-ಹೊಟ್ಟೆಉಬ್ಬರ, ಮಲಮೂತ್ರಗಳು ಕಟ್ಟಿಕೊಳ್ಳುವಿಕೆ. |
| ಗ್ರಹಣೀರುಕ್ಪ್ರವಾಹಿಕಾ | ಗ್ರಹಣೀರು ಕ್-ಜ್-ಪ್ರವಾಹಿಕಾ-ಸ್ತ್ರೀ-೨- ಗ್ರಹಣೀರೋಗ, ಹೊಟ್ಟೆಕಚ್ಚಿ ಭೇದಿಗಳಾಗುವಿಕೆ. |
| ಪ್ರಛರ್ದಿಕಾವಮಿ (ಶ್ಚಸ್ತ್ರೀ ಪುಮಾಂಸ್ತು)ವಮಥುಸ್ಸಮಾಃ। | ಪ್ರಛರ್ದಿಕಾ-ವಮಿಃ-ಪು-ವಮೀ-ಸ್ತ್ರೀ-ವಮಥುಃ-ಪು-೩- ಕಕ್ಕುರೋಗ, ವಾಂತಿ, ವಮನ. |
| (ವ್ಯಾಧಿಭೆದಾ)ವಿದ್ರಧಿಃಸ್ತ್ರೀ ಜ್ವರಮೇಹಭಗಂದರಾಃ। | ವಿದ್ರಧಿಃ-ಸ್ತ್ರೀ-೧-ಹೊಟ್ಟೆಯೊಳು ಗಡ್ಡೆ ಬೆಳೆಯುವಿಕೆ ಜ್ವರಃ-ಪು-೧- ಅಜೀರ್ಣದಿಂದ ವ್ಯೈಬಿಸಿಯಾಗುವಿಕೆ,ಮೇಹಃ-ಪು-೧-ವಸ್ತಿ ಗರ್ಭದೋಷದಿಂದ ರೇತಸ್ಸು ಕರಗಿ ತಡೆಯಿಲ್ಲದೆ ಸೋರುವಿಕೆ. ಭಗಂದರಃ-ಪು-೧-ಶಿಶ್ನೋಪಸ್ಥಗಳ ಬಳಿಯಲ್ಲಿ ಹುಟ್ಟುವ ಹುಣ್ಣು, ಈ ೪-ವ್ಯಾಧಿಭೇದಾಃ-ರೋಗಭೇದಗಳು. |
| ಅಶ್ಮರೀಮೂತ್ರ ಕೃಛ್ರಂ ಸ್ಯಾತ | ಅಶ್ಮರೀ- ಸ್ತ್ರೀ-ಮೂತ್ರಕೃಛ್ರಂ-ನ-೨ ಮೂತ್ರಕೃಛ್ರ-ಮೂತ್ರ ಸುರಿಯುದ ಕಷ್ಟವಾದ ತಡೆ, ಬಹುಮೂತ್ರ. |
| ಪೂರ್ವೆಶುಕಾ(ವಧೆಸ್ತ್ರಿಷು | ಇದು ಮೊದಲುಗೊಂಡು (ಶುಕ್ರಂ ತೇಜೋರೆತಸೀಚ) ಎಂಬುವ ಶುಕ್ರಶಬ್ದದವರೆಗೂ ಮುಂದೆ ಹೇಳತಕ್ಕ ಶಬ್ದಗಳೆಲ್ಲಾ-ತ್ರಿಲಿಂಗಗಳು. |
| ರೊಗಹಾರ್ಯ್ಯಗದಂ ಕಾರೊ ಭಿಷಗ್ವೈದ್ಯೌಚಿಕಿತ್ಸಕೆ। | ರೋಗಹಾರೀ-ಸ--ಅಗದಂಕಾರಃ-ಭಿಷಕ್-ಪು-ವೈದ್ಯಃ-ಚಿಕಿತ್ಸಕಃ-೫-ವೈದ್ಯನಹೆ |

ಸರುಗಳು.

ವಾರ್ತೋನಿ ರಾಮಯಃ ಕಲ್ಯಉಲ್ಲಾಘೋ ನಿರ್ಗತೋಗದಾತ ॥

ವಾರ್ತಃ- ನಿರಾಮಯಃ-ಕಲ್ಯಃ-ಉಲ್ಲಾಘಃ-೪-ಗದಾತ ನಿರ್ಗತಃ-ರೋಗದ ದೆಸೆಇಂದ ಯಿಾಚೆಗೆ ಬಂದವನು, ಆರೋಗ್ಯವೆ ಡದವನು. ಇವುಗಳಲ್ಲಿ ಮೊದಲು ಮೂರು ಶಬ್ದಗಳು ರೋಗವಿಲ್ಲದವನ ಹೆಸರುಗಳು.

ಗ್ಲಾನ ಗ್ಲಾಸ್ನೂ ಆಮಯಾವೀಪಿಕೃತೊವ್ಯಾಧಿತೋಪಟುಃ। ಆತುರೋಭ್ಯ ಮಿತೋಭ್ಯಾಂತಃ

ಗ್ಲಾನಃ-ಗ್ಲಾಸ್ನುಃ-ಆಮಯಾವೀ- ನ್-ವಿಕೃತಃ-ವ್ಯಾಧಿತಃ-ಅಪಟುಃ- ಆತುರಃ-ಅಭ್ಯಮಿತಃ-ಅಭ್ಯಾಂತಃ-ಪು-೯- ರೋಗ ಉಳ್ಳವನ ಹೆಸರುಗಳು. ಗ್ಲಾನಗ್ಲಾಸ್ನುಶಬ್ದಗಳು ಸಂಕಾಗೆ ಕ್ಷಯಿಸಿ ದುರ್ಬಲನಾದವನ ಹೆಸರುಗಳು.

ಸಮೌಪಾಮನಕಚ್ಛುರೌ ॥

ಪಾಮನಃ-ಕಚ್ಛುರಃ-ಪು-೨-ಮೂಗತೀಟೆ, ಕಜ್ಜಿಯುಳ್ಳವನ ಪೆಸರುಗಳು.

ದದ್ರುಣೊ ದದ್ರುರೋಗೀಸ್ಯಾ

ದದ್ರುಣಃ-ದದ್ರುರೋಗೀ-ನ್-ಪು-೨-ದದ್ರುವೆಂಬ ಕುಷ್ಠಭೇದದ ಪೆಸರುಗಳು. ತದ್ದುಗಳು. ದದ್ದುಗಳು.

ದರ್ಶೋರೋಗಯುತೋರ್ಶಸಃ।

ಅರ್ಶೋರೋಗಯುತಃ-ಅರ್ಶಸಃ-ಪು-೨ ಮೂಲರೋಗದವನು. ಆಸನ ರಕ್ತವ್ರಣದವನ ಹೆಸರು.

ವಾತಕೀವಾತರೋಗೀಸ್ಯಾ

ವಾತಕೀ-ನ್-ವಾತರೋಗೀ-ನ್-ಪು-೨ ವಾತರೋಗದವನ ಹೆಸರುಗಳು.

ತ್ಸಾತಿಸಾರೋತಿಸಾರಕೀ

ಸಾತಿಸಾರಃ-ಅತಿಸಾರಕೀ-ನ್-೨-ಅತಿಸಾರ ರೋಗದವನ ಹೆಸರುಗಳು. ಭೇದಿಯಾಗುವವನು.

ಸ್ಯುಃಕ್ಲಿನ್ನಾಕ್ಷೇಚುಲ್ಲಚಿಲ್ಲಪಿಲ್ಲಾಃಕ್ಲಿನ್ನೆಕ್ಷ್ಣಿಚಾಪ್ಯಮೀ ।

ಚುಲ್ಲಃ-ಚಿಲ್ಲಃ-ಪಿಲ್ಲಃ-೩-ಕ್ಲಿನ್ನಾಕ್ಷೇ-ರೋಗದಿಂದ ಕೊಳತುನೀರು ಸುರಿಯುವಕಂಣುಗಳುಳ್ಳವನಹೆಸರುಗಳು.(ಅಮೀಕ್ಲಿನ್ನೆಕ್ಷ್ಣಿಚಾಪಿಸ್ಯುಃ. ಈ೩ಶಬ್ದಗಳೂ ಕೊಳತನೀರು, ಸುರಿಯುವ ಕಂಣಿಗೂ ಹೆಸರುಗಳು.

ಉನ್ಮತ್ತಉನ್ಮಾದವತಿ

ಉನ್ಮತ್ತಃ-ಉನ್ಮಾದವಾನ್-ನ್-೨-ಹು

ಷ್ಟು ಹಿಡಿದವನ ಹೆಸರುಗಳು. ಪೆಚ್ಚನು.

ಶ್ಲೇಷ್ಮಲಃಶ್ಲೇಷ್ಮಣಃಕಫೀ। ಶ್ಲೇಷ್ಮಲಃ-ಶ್ಲೇಷ್ಮಣಃ-ಕಫೀ-ನ್-೩-ಶ್ಲೇಷ್ಮವ್ಯಾಧಿಯುಳ್ಳವನ ಹೆಸರುಗಳು. ಉಸುಳು ರೋಗದವನು.

ನ್ಯುಬ್ಜೋ(ಭುಗ್ನೆರುಜಾ) ನ್ಯುಬ್ಜಃ-೧-ರುಜಾಭುಗ್ನೆ-ರೋಗದಿಂದ ದುರ್ಬಲನಾಗಿ ಬೊಗ್ಗಿಹೋದವನ ಹೆಸರುಗಳು. ರೋಗದಿಂದ ಕೆಂದಿದವನು.

ವೃದ್ಧನಾಭೌತುಂಡಿಲತುಂಡಿಭೌ॥ ವೃದ್ಧನಾಭಿಃ-ತುಂಡಿಲಃ-ತುಂಡಿಭಃ-೩-ಬೊಜ್ಜೆ ಬೆಳೆದು ಆಳವಾಗಿ ಗುಂಡೀ ಕಾಣುವ ಹೊಕ್ಕಳುಳ್ಳವನ ಹೆಸರುಗಳು.

ಕಿಲಾಸೀಸಿಧ್ಮಲೋಂ ಕಿಲಾಸೀ-ನ್-ಸಿಧ್ಮಲಃ-೨-ಸಿಬ್ಬವೆಂಬ ಚರ್ಮದೋಷವಾದ ಮಚ್ಚೆಗಳುಳ್ಳವನ ಹೆಸರುಗಳು.

ಥೋದ್ಧ ಅಂಧಃ-ಅದೃಕ್-ಶ್-ಪು-೨-ಕುರುಡನ ಹೆಸರುಗಳು.

ಜಾತ್ಮ್ರಛ್ಛಾಲಮೂರ್ತ ಮೂರ್ಛಿತೌ ॥೩೦೧॥ ಮೂರ್ಛಾಲಃ-ಮೂರ್ತಃ- ಮೂರ್ಛಿತಃ-೩-ಮೂರ್ಛೆ ರೋಗವುಳ್ಳವನ ಹೆಸರುಗಳು. ರೋಗಹಾರಿ ಶಬ್ದವು ಮೊದಲುಗೊಂಡು ಇದುವರಿವಿಗೂ ಹೇಳಲ್ಪಟ್ಟ ಶಬ್ದಗಳಿಗೆ ಪೂರ್ವೇಕಾದಿಃ ಎಂಬುವಲ್ಲಿ ಲಿಂಗ ಹೇಳಲ್ಪಟ್ಟಿದೆ

ಶುಕ್ರಂತೇಜೋರೇತಸೀಚಬೀಜವೀರ್ಯೇಂದ್ರಿಯಾಣಿಚ। ಶುಕ್ರಂ-ತೇಜಃ-ಸ-ರೇತಃ-ಸ-ಬೀಜಂ-ವೀರ್ಯಂ-ಇಂದ್ರಿಯಂ -೬- ರೇತಸ್ಸಿನ ಹೆಸರುಗಳು.

ಮಾಯುಃಪಿತ್ತಂ ಮಾಯುಃ-ಪು-ಪಿತ್ತಂ-ನ-೨-ಪೈತ್ಯದ ಹೆಸರುಗಳು.

ಕಫಃಶ್ಲೇಷ್ಮಾ ಕಫಃ-ಶ್ಲೇಷ್ಮಾ-ನ್-ಪು-೨-ಕಫದ ಹೆಸರುಗಳು.

(ಸ್ತ್ರಿಯಾಂತು)ತ್ವಗಸೃಗ್ಧರಾ॥ ತ್ವಕ್-ಚ್-ಅಸೃಗ್ಧರಾ-ಪಾ ಅಸೃಗ್ಧರಾ-ಸ್ತ್ರೀ-೨-ಚರ್ಮದ ಹೆಸರುಗಳು ತೊಗಲ ಹೆಸರುಗಳು.

ಪಿಶಿತಂತರಸಂಮಾಂಸಂಪಲಲಂ ಕ್ರವ್ಯಮಾಮಿಷಂ।

ಪಿಶಿತಂ-ತರಸಂ-ಮಾಂಸಂ-ಪಲಲಂ-ಕ್ರವ್ಯಂ-ಆಮಿಷಂ-ನ-೬-ಮಾಂಸದ ಹೆಸರುಗಳು. ಮಾಂಸಾಮಿಷಶಬ್ದಗಳೆರಡೂ ಪ್ನ-ಎಂತಲೂ ಹೇಳುವರು,

ಉತ್ತಪ್ತಂಶುಷ್ಕಮಾಂಸಂ(ಸ್ಯಾತ್) ತ್ವಲ್ಲೂರಂ(ತ್ರಿ)ಲಿಂಗಕಂ॥

ಉತ್ತಪ್ತಂ-ಶುಷ್ಕಮಾಂಸಂ-ನ-ವಲ್ಲೂರಂ-ತ್ರಿ-೩-ಒಣಗಿದ ಮಾಂಸದ ಹೆಸರುಗಳು

ರುಧಿರೇಸೃಗ್ಲೋಹಿತಾಸ್ರರಕ್ತ ಕ್ಷತಜಶೋಣಿತಂ।

ರುಧಿರಂ-ಅಸೃಕ್-ಪ್-ಲೋಹಿತಂ-ಅಸ್ರಂ-ರಕ್ತಂ-ಕ್ಷತಜಂ-ಶೋಣಿತಂ-ನ/೭- ರಕುತದಹೆಸರುಗಳು.

ವೃಕ್ಕಾಗ್ರಮಾಂಸಂ

ವೃಕ್ಕಾ-ಪು-ವೃಕ್ಕ್ಯಾ-ಸ್ತ್ರೀ-ಪು - ವೃಕ್ಕ್ಯಃ-ಬುಕ್ಕಃ-ಪು-ಪು-ವೃಕ್ಕಾ-ನ- ವೃಕ್ಕ್ಯಾ-ನ-ಬುಕ್ಕಾ-ನ-ಅಗ್ರಮಾಂಸಂ-ನ-೧-ಶಾಸ್ತ್ರದಲ್ಲಿ ವೃಕ್ಕ್ಯವೆಂದು ಪ್ರಸಿದ್ಧವಾದ ೩ ಳ್ಳೀಮಾಂಸದ ಹೆಸರುಗಳು.

ಹೃದಯಂಹೃ

ಹೃದಯಂ-ಹೃತ್-ದ-ನ-೧-ಎದೆಯ ಗುಂಡಿಗೆ, ಹೃದಯಕಮಲ. ವೃಕ್ಕಾದಿಗಳು-೪-ಗುಂಡಿಗೆ ಹೆಸರುಗಳೆಂತಲೂ ಕೆಲವರನ್ನುವರು.

ನ್ಮೇದಸ್ತುವಪಾವಸಾ॥

ಮೇದಃ-ಸ-ನ-೧-ಹೃದಯದಲ್ಲಿಯೂ, ಎಲುಬುಗಳಲ್ಲಿಯೂ ಇರುವ ನೆಣ, ಇದನ್ನು ಮೇದಮಯೆನ್ನುವರು, ವಪಾ-ಸ್ತ್ರೀ-೧-ಹೊಕ್ಕಳ ಕೆಳಗಡೆ ಬಟ್ಟೆಯೋಪಾದಿಯಾಗಿರುವ ಪೊರೆಯುಮಾಂಸದ ಹೆಸರು. ವಸಾ-ಸ್ತ್ರೀ-೧-ಎಲ್ಲಾ ಮಾಂಸಗಳಲ್ಲಿಯೂ ಮೇಲಾದ ಕೊಬ್ಬಿನ ಹೆಸರು, ಈ ೩ ಪರ್ಯಾಯಪದಗಳೆಂತಲೂ ಕೆಲವರನ್ನುವರು.

(ಪಶ್ಚಾದ್ಗ್ರೀವಾಸಿರಾ)ಮನ್ಯಾ

ಮನ್ಯಾ-ಸ್ತ್ರೀ-೧-ಪಶ್ಚಾದ್ಗ್ರೀವಾ-ಸಿರಾ-ಎಡೆತಲೆಯೊಳಗಿರುವ ನರದ ಹೆಸರು.

ನಾಡೀತುಧಮನಿಸ್ಸಿರಾ।

ನಾಡೀ- ಧಮನಿಃ-ಪು-ಧಮನೀ-ಸಿರಾ-ಪು-ಶಿರಾ-ಸ್ತ್ರೀ-ಸಾಮಾನ್ಯವಾಗಿ ನರಗಳಹೆಸರುಗಳು

| | |
|---|---|
| ತಿಲಕಂಕ್ಲೋಮ | ತಿಲಕಂ-ಕ್ಲೋಮ-ನ್-ನಾ-ಕ್ಲೋಮನ್-ನ-೨-ಹೊಟ್ಟೆಯ ಬಲದ ಅಳ್ಳೆಯೊಳಗಿರುವ ನೀರು ಚೀಲದ ಹೆಸರುಗಳು. |
| ಮಸ್ತಿಷ್ಕಂಗೋರ್ಧಂ | ಮಸ್ತಿಷ್ಕಂ-ಗೋರ್ಧಂ-ನ-೨-ಎಲುವುಗಳ ಗೂಡಿನಲ್ಲಿರುವ ಮೆದುಳಿ ಹೆಸರುಗಳು. |
| ಕಿಟ್ಟಂಮಲೋ (ಸ್ತ್ರಿಯಾಂ)॥ | ಕಿಟ್ಟಂ-ನ-೨-ಮಲಃ-ಪ್ನ-೨- ಶರೀರದ ಕೊಳಕಿನ ಹೆಸರು ಅಂದರೆ, ಕೊಬ್ಬಿಗೂ ರೇತಸ್ಸಿಗೂ ರಕ್ತಕ್ಕೂ ಮೆದುಳಿಗೂ ಉಚ್ಚೆಗೂ ಹೇಲಿಗೂ ಕಿವಿಯ ಗುಗ್ಗಿಗೂ ಸಿಂಬಳಕ್ಕೂ ಶ್ಲೇಷ್ಮಕ್ಕೂ ಕಣ್ಣಿನೀರಿಗು ಕಂಣಾಗೀಜಿಗೂ ಬೆವರಿಗೂ ಹೆಸರು. |
| ಅಂತ್ರಂಪುರೀತ | ಅಂತ್ರಂ-ಪಾ-ಅಂತ್ರ-ಪುರೀತತ್-ತ-ನ-೨-ಕರುಳುಗಳ ಹೆಸರುಗಳು. ಪುರೀತತ್ ಶಬ್ದವು ಸ್ತ್ರೀಲಿಂಗವೆಂದು ಕೆಲವರನ್ನುವರು |
| ದ್ಗುಲ್ಮಸ್ತುಪ್ಲೀಹಾಪುಂಸ್ಯ | ಗುಲ್ಮಃ-ಪ್ಲೀಹಾ-ನ್-ಪು-೨-ಎಡಯೊಳಗಡೇ ಇರುವ ಕಪ್ಪಾದ ಮಾಂಸ ವಿಶೇಷದ ಹೆಸರುಗಳು. |
| ಥವಸ್ನಸಾ । ಸ್ನಾಯುಃ(ಸ್ತ್ರಿಯಾಂ) | ವಸ್ನಸಾ-ಪಾ-ಸ್ನಸಾ-ಸ್ನಾಯುಃ-ಸ್ತ್ರೀ-೨-ಸೂಕ್ಷ್ಮನರಗಳು, ಸಂಣಗಿರುವನರಗಳು. |
| ಕಾಲಖಂಡಯಕೃತೀ (ತುಸಮೇಇಮೆ) ॥೩೬॥ | ಕಾಲಖಂಡಂ-ಯಕೃತ-ನ-೨-ಹೊಟ್ಟೆಯೊಳಗೆ ಬಲದಕಡೇ ಇರುವ ಕಪ್ಪಾದ ಮಾಂಸವಿಶೇಷ. |
| ಸೃಣಿಕಾಸ್ಯಂದಿನೀಲಾಲಾ | ಸೃಣಿಕಾ-ಪಾ-ಸೃಣೀಕಾ-ಸ್ಯಂದಿನೀ-ಲಾಲಾ-ಸ್ತ್ರೀ-೩-ಬಾಯಿ ಜೊಲ್ಲು. |
| ದೂಷಿಕಾನೇತ್ರಯೋರ್ಮಲಂ। | ದೂಷಿಕಾ-ಪಾ-ದೂಷೀಕಾ-ಸ್ತ್ರೀ-೧-ನೇತ್ರಯೋಃ-ಮಲಂ-ಕಂಣಿನ ಸಿಡ್ಲು, ಗೀಜು. |
| ಮೂತ್ರಂಪ್ರಸ್ರಾವ | ಮೂತ್ರಂ-ನ-ಪ್ರಸ್ರಾವಃ-ಪು-೨- ಮೂತ್ರದ ಹೆಸರುಗಳು. |
| ಉಚ್ಚಾರಾ ವಸ್ಕರೌ ಶಮಲಂಶಕೃತ ।೩೭॥ ಪುರೀಷ ಗೂಥವರ್ಚಸ್ಕಮ (ಸ್ತ್ರಿ) | ಉಚ್ಚಾರಃ-ಅವಸ್ಕರಃ-ಪು-ಶಮಲಂ-ಶಕೃತ-ಪುರೀಷಂ- ಗೂಥಂ-ನ - ವರ್ಚಸ್ಕಂ ... ವಿಟ-ಶ-ಸ್ತ್ರೀ- |

ಷ್ಠಾ ವಿಷಾಸ್ತ್ರಿಯಾ

ಸ್ಯಾತ್ಕರ್ಪರಃಕಪಾಲೋಸ್ತ್ರೀ

ಕೀಕಸಂಕುಲ್ಯಮಸ್ಥಿಚ ॥

ಸ್ಯಾಚ್ಛರೀರಾಸ್ಥ್ನಿ) ಕಂಕಾಳಃ

(ಪೃಷ್ಠಾಸ್ಥ್ನಿತು)ಕಶೆರುಕಾ।

(ಶಿರೋಸ್ಥ್ನಿತು) ಕರೋಟಿಃ) (ಸ್ತ್ರೀ)

ಪಾರ್ಶ್ವಾಸ್ಥಿನಿತುಪರ್ಶುಕಾ ॥

ಅಂಗಂಪ್ರತೀಕೋ ವಯವೋ ಪಘನೋ

ಥಕಳೇಬರಂ । ಗಾತ್ರಂವಪುಸ್ಸಂಹನನಂಶರೀರಂವರ್ಷ್ಮವಿಗ್ರಹಃ ॥೩೩೦॥ ಕಾಯೋದೇಹಃ ಕ್ಲೀಬಪುಂಸೋಃ (ಸ್ತ್ರಿಯಾಂ) ಮೂರ್ತಿಸ್ತನುಸ್ತನೂಃ ।

ಪಾದಾಗ್ರಂಪ್ರಪದಂ

ಪಾದಃಪದಂಘ್ರಿಶ್ಚರಣೋ(ಸ್ತ್ರಿಯಾಂ) ॥೩೩೧॥

(ತದ್ಗ್ರಂಥೀ)ಘುಟಿಕೆಗುಲ್ಫೌ

ಅಮೇಧ್ಯದಹೆಸರುಗಳು.

ಕರ್ಪರಃ-ಪು--ಕಪಾಲಃ-ಪ್ನ-೨-ತಲೇಮೂಳೆ, ಕಪಾಲದಮೂಳೆ.

ಕೀಕಸಂ-ಕುಲ್ಯಂ-ಅಸ್ಥಿ-ನ-೩- ಎಲುವಿನ ಹೆಸರುಗಳು.

ಕಂಕಾಳಃ-ಪು-೧-ಚರ್ಮಮಾಂಸ ರಹಿತವಾಗಿ ಪಂದಕ್ಕೊಂದು ಬೆರತುಕೊಂಡಿರುವ, ಶರೀರಾಸ್ಥ್ನಿ-ಮೈಯೊಳಗಿರುವ ಎಲುವುಗಳ ಸಮೂಹದ ಹೆಸರು.

ಕಶೇರುಕಾ-ಸ್ತ್ರೀ-೧-ಪೃಷ್ಠಾಸ್ಥ್ನಿ-ಬೆನ್ನೆಲುವಿನ ಹೆಸರು.

ಕರೋಟಿಃ-ಸ್ತ್ರೀ-೧-ಪಾರ್ಶ್ವಾಸ್ಥ್ನಿ-ಪಕ್ಕದಯೆಲುವಿನ ಹೆಸರು.

ಪರ್ಶುಕಾ-ಸ್ತ್ರೀ-೧-ಪಾರ್ಶ್ವಾಸ್ಥಿನಿ-ಪಕ್ಕದ ಯೆಲುವಿನಹೆಸರು.

ಅಂಗಂ-ನ-ಪ್ರತೀಕಃ-ಅವಯವಃ-ಅಪಘನಃ-ಪು-೪-ಕೈ ಕಾಲು ಮುಂತಾದ ಅಂಗಗಳ ಹೆಸರುಗಳು.

ಕಳೇಬರಂ-ಗಾತ್ರಂ-ವಪುಃ-ಸ- ಸಂಹನನಂ-ಶರೀರಂ--ವರ್ಷ್ಮ-ಣ-ನ-ವಿಗ್ರಹಃ- ಕಾಯಃ-ಪು-ದೇಹಃ-ಪ್ನ-ಮೂರ್ತಿಃ-ತನುಃ-ತನೂಃ-ಸ್ತ್ರೀ-೧೩-ಶರೀರದ ಹೆಸರು, ತನುಶಬ್ದವು ಸಕಾರಾಂತವೂ ಪ್ರಯೋಗವಿಧೆ.

ಪಾದಾಗ್ರಂ-ಪ್ರಪದಂ-ನ-೨-ಕಾಲಡಿಯ ತುದಿ, ಪಾದದಕೊನೆ.

ಪಾದಃ-ಪತ-ದ-ಅಂಘ್ರಿಃ-ಪು- ಚರಣಃ-ಪ್ನ-೪-ಕಾಲಿನ ಅಡಿ, ಪಾದದ ಹೆಜ್ಜೆ.

ಘುಟಿಕಾ-ಸ್ತ್ರೀ-ಗುಲ್ಫಃ-ಪು-೨- ತದ್ಗ್ರಂಥೀ-ಆಪಾದದ ೨ಪಕ್ಕಗಳಲ್ಲಿಯೂ ಯಿರುವ ಮೂಳೆ ಗೆಂಣುಗಳಮೇಲೆ ಮಾಂಸಬಂ ... ಹರಡೆ.

(ಪುಮಾ) ನ್ಪಾರ್ಷ್ಣಿ(ಸ್ತಯೊರಧಃ।)

ಜಂಘಾತುಪ್ರಸೃತಾ

ಜಾನೂರುಪರ್ವಾಷ್ಠೀವದಸ್ತ್ರಿಯಾಂ ॥೩೩೨॥

ಸಕ್ಥಿ(ಕ್ಲೀಬೇಪುಮಾ)ನೂರು

(ಸ್ತತ್ಸಂಧಿಃಪುಂಸಿ)ವಂಕ್ಷಣಃ

ಗುದಂತ್ವಪಾನಂಪಾಯುರ್ನಾ

ವಸ್ತಿ(ರ್ನಾಭೇರಧೋದ್ವಯೋಃ॥)

ಕಟೋ (ನಾ)ಶ್ರೋಣಿಫಲಕಂ

ಕಟಿಶ್ರೋಣಿಃಕಕುದ್ಮತೀ।

(ಪಶ್ಚಾ) ನ್ನಿತಂಬಃ (ಸ್ತ್ರೀಕಟ್ಯಾಃ)

(ಕ್ಲೀಬೇತು) ಜಘನಂಪುರಃ।

(ಕೂಪಕೌತುನಿ ತಂಬಸ್ಥಾದ್ವಯುಹೀನೆ) ಕುಕುಂದರೆ

ಪಾರ್ಷ್ಣಿಃ-ಪು-ಪಾ-ಪಾರ್ಷ್ಣೀ-ಸ್ತ್ರೀ-೧-ತಯೋರಧಃ-ಚೀಲ ಮಂಡೆದ ಕೆಳಗಣ ಪ್ರದೇಶಕ್ಕೆ ಪೆಸರು.

ಜಂಘಾ-ಪ್ರಸೃತಾ-ಸ್ತ್ರೀ-೨- ಕಣಕಾಲಿನಹೆಸರುಗಳು.

ಜಾನುಃ-ನ-ಪಾ-ಪು-ಊರುಪರ್ವ-ನ-ನ ಅಷ್ಠೀವತ್-ತ-ಪ್ನ-೩-ಮೊಳಕಾಲಿನ ಹೆಸರುಗಳು.

ಸಕ್ಥಿ-ನ-ಊರುಃ-ಪು-೨-ತೊಡೇ ಹೆಸರುಗಳು.

ವಂಕ್ಷಣಃ-ಪು-೧-ತತ್ಸಂಧಿಃ--ಆತೊಡೆಳಿಗೂ ಅಂಡಿಗೂ ಮಧ್ಯೆಯಿರುವ ಸಂಧಿಯ ಪೆಸರು.

ಗುದಂ-ಅಪಾನಂ-ನ--ಪಾಯುಃ-ಪು-೩-ಗುದಸ್ಥಾನದ ಪೆಸರುಗಳು, ತಿಕ.

ವಸ್ತಿಃ-ಪ್ನ-೧-ನಾಭೇರಧಃ- ಹೊಕ್ಕುಳ ಕೆಳಗಣ ಕಿಬಹೊಟ್ಟೆ, ಕಿಬ್ಬೊಟ್ಟೆ.

ಕಟಃ-ಪು-ಶ್ರೋಣಿಫಲಕಂ-ನ-೨-ಸೊಂಟದ ಪೆಸರುಗಳು, ಟೊಂಕ, ನಡು.

ಕಟಿಃ-ಪಾ-ಕಟೀ-ಶ್ರೋಣಿಃ-ಪಾ-ಶ್ರೋಣೀ-ಕಕುದ್ಮತೀ-ಸ್ತ್ರೀ- ಅಂಡುಗಳಹೆಸರುಗಳು, ಪಿರ್ರ್ರೆಗಳು ಈ ೫ ಶಬ್ದಗಳೂ ಟೊಂಕದಹೆಸರೆಂದು ಕೆಲವರು.

ನಿತಂಬಃ-ಪು-೧-ಸ್ತ್ರೀ-ಕಟ್ಯಾಃ-ಪಶ್ಚಾತ್ ಹೆಂಗಳಹಿಂದುಗಡೇ ಪಿರ್ರೆಗಳಹೆಸರು.ಸ್ತ್ರೀಯರಅಂಡುಗಳಬಳೀಧೊಪ್ಪಾನೇಪ್ರದೇಶ

ಜಘನಂ-ನ-೧-ಪುರಃ-ಸ್ತ್ರೀಯರ ಭಗದ ಮೇಲ್ಗಡೇ ಅಂಡುಗಳ ಮುಂಭಾಗವಾದ ಡಿಮ್ಮ್ರ, ಮಡಿಕಟ್ಟು.

ಕುಕುಂದರಂ-ನ-೧-ನಿತಂಬಸ್ಥ ಕೂಪ ಕೌ-ಹೆಂಗಳ ಅಂಡುಗಳ ಮೇಲಿರುವ ಗುಣಿ

(ಸ್ತ್ರಿಯಾಂ)ಸ್ಫಿಚೌ ಕಟಪ್ರೋಥಾ

ವುಪಸ್ಥೋ (ವಕ್ಷ್ಯಮಾಣ ಯೋಃ) ॥೨೨೫॥

ಭಗಂಯೋನಿರ್ದ್ವಯೋಃ

ಶಿಶ್ನೋಮೇಢ್ರೋ ಮೇಹನಶೇಫ ಸೀ ।

ಮುಷ್ಕೋಂಡ ಕೋಶೋವೃ ಷಣಃ

(ಪೃಷ್ಠ ವಂಶಾಧರೇ) ತ್ರಿಕಂ॥

ಪಿಚಿಂಡಕುಕ್ಷೀ ಜಠರೋದರ ತುಂದಂ

ಸ್ತನೌಕುಚೌ ।

ಚೂಚುಕಂ ತು ಕುಚಾಗ್ರಂ ಸ್ಯಾ

(ನ್ನನಾ) ಕ್ರೋಡಂಭುಜಾಂ ತರಂ ॥೨೨೬॥ ಉರೋವತ್ಸಂಚ ವಕ್ಷಶ್ಚ

ಪೃಷ್ಠಂತು (ಚರಮಂ ...

ಗಳ ಹೆಸರು.

ಸ್ಫಿಕ್-ಚ್-ಶಾ-ಸ್ಫಿಕ-ಚ-ಸ್ತ್ರೀ-ಕಟಿ ಪ್ರೋಥಃ-ಪು-೨-ಅಂಡುಗಳಮೇಲೆ ಎತ್ತರವಾಗಿರುವಸ್ಥಳದ ಹೆಸರುಗಳು.

ಉಪಸ್ಥಃ-ಪು-ಶಾ-ನ-೧-ವಕ್ಷ್ಯಮಾಣಯೋಃ-ಮುಂದೆ ಹೇಳಲ್ಪಡುವ ಉಪಸ್ಥ ಶಿಶ್ನಗಳಿಗೆ ಹೆಸರು.

ಭಗಃ-ಪು--ಶಾ-ನ- ಯೋನಿಃ-ಸ್ತ್ರೀ-೨-ಯೋನಿಯುಹೆಸರುಗಳು. ಹೆಂಗಳ ಮೂತ್ರದ್ವಾರ, ಇಂದ್ರಿಯು ಸ್ಥಾನವು.

ಶಿಶ್ನಃ-ಮೇಢ್ರಃ-ಪು-ಶಾ-ಮೇಢ್ರಂ-ನ-ಮೇಹನಂ-ಶೇಫಃ-ಸ-ನ- ೪ ಶಿಶ್ನದ ಹೆಸರುಗಳು. ಪುರುಷನ ಮೂತ್ರದ್ವಾರದಲ್ಲಿರುವ ಇಂದ್ರಿಯದ ರಹಸ್ಯಸ್ಥಾನ.

ಮುಷ್ಕಃ-ಅಂಡಕೋಶಃ-ಶಾ- ಅಂಡಃ-ಕೋಶಃ-ವೃಷಣಃ-ಪು- ೩- ವೃಷಣಗಳು. ತರುಡುಗಳು.

ತ್ರಿಕಂ-ನ- ೧-ಪೃಷ್ಠವಂಶಾಧರೇ-ಬೆನ್ನು ಮೂಳೆಗೆ ಬುಡ, ಬೆನ್ನೆಲುಬಿನ ಕೆಳಗಡೆ.

ಪಿಚಿಂಡಃ-ಕುಕ್ಷಿಃ-ಪು-ಜಠರಂ-ಉದರಂ-ತುಂದಂ-ನ-೫-ಹೊಟ್ಟೆ, ಬೊಜ್ಜೆ.

ಸ್ತನಃ-ಕುಚಃ-ಪು-೨-ಸ್ತನಗಳಹೆಸರು. ಮೊಲೆಗಳು.

ಚೂಚುಕಂ-ನ-ಶಾ-ಪು-ಕುಚಾಗ್ರಂ-ನ-೨-ಮೊಲೆಗಳ ಕೊನೆಗಳ ಹೆಸರುಗಳು. ಮೊಲೆತೊಟ್ಟು.

ಕ್ರೋಡಂ-ಸ್ತ್ರೀ-ಭುಜಾಂತರಂ-೨-ಕೈಗಳ ನಡುವೆ ಹೆಸರುಗಳು. ಉರಃ-ಸ--ವತ್ಸಂ-ವಕ್ಷಃ-ಸ-ನ-೩-ಎದೆಯುಹೆಸರುಗಳು. -೫-ಎದೆಗೆ ಹೆಸರೆಂದು ಕೆಲವರು.

ಪೃಷ್ಠಂ-ನ- ... -ವ್ಯೈಶ್ಯ್

ನೋಃ )
ಸ್ಕಂಧೋ ಭುಜ ಶಿರೋಂಸೋ (ಸ್ತ್ರೀ
ಸಂಧೀತಸ್ಯೈವಜತ್ರುಣೀ॥

ಹಿಂದುಗಡೆ, ಬೆನ್ನು.

ಸ್ಕಧಃ-ಪು-ಭುಜಶಿರಃ-ಸ-ನ-ಅಂಸಃ-ಪ್ನ-೩-ಹೆಗಲುಪೆಸರು. ಭುಜಶಿರಸ್ಸ. ಜತ್ರು-ನ-೧-ತಸ್ಯೈವಸಂಧೀ-ಭುಜಶಿರಸ್ಸಿಗೂ-ಎದೆಗೂಸಂದಿಯ ಪೆಸರು. ಕಂಕಳುವಿನ ಸಂಧಿ, ಎದೆಗುಂಡಿಗೆ ಸಂಧಿಗೂ ಹೆಸರೆಂದು ಕೆಲವರು.

ಬಾಹುಮೂಲೆ ( ಉಭೌಕಕ್ಷೌ )

ಬಾಹುಮೂಲಂ-ನ--ಕಕ್ಷಃ-ಪು-೨-ಕಂಕಳ ಹೆಸರು.

ಪಾರ್ಶ್ವ (ಮಸ್ತ್ರೀ ತಯೊರಧಃ)

ಪಾರ್ಶ್ವಂ-ಪ್ನ-೧-ತಯೋರಧಃ-ಕಂಕಳಕೆಳಗಡೇ ಪಕ್ಕದ ಪೆಸರುಗಳು.

ಮಧ್ಯಮಂ ಚಾವ ಲಗ್ನಂಚಮಧ್ಯೋಸ್ತ್ರೀ
ದ್ವೌಪರಾಡ್ವಯೊಃ ॥

ಮಧ್ಯಮಂ-ಅವಲಗ್ನಂ-ನ-ಮಧ್ಯಃ-ಪ್ನ-೩-ಟೊಂಕದಹೆಸರುಗಳು, ಸೊಂಟ,ನಡು.

ಪರೌದ್ವೌ-ಮುಂದೆಹೇಳಲ್ಪಡುವ ಭುಜಬಾಹುಶಬ್ದಗಳೆರಡೂ (ದ್ವಯೊಃ) ಪ್ನ.

ಭುಜಬಾಹೂ ಪ್ರವೆಷ್ಟೋದೋಃ

ಭುಜಃ-ಬಾಹುಃ-ಪ್ರವೇಷ್ಟಃ-ದೋಃ-ಸ-ಪು-ಪಾ-ದೋಃ-ಸ- ನ- ಪಾ-ದೋಸಾ-ಃ ಸ್ತ್ರೀ-೪-ತೋಳುಗಳ ಪೆಸರುಗಳು.

ಸ್ಯಾತ್ಕಫೋಣಿಸ್ತು ಕುರ್ಪರ।

ಕಫೋಣಿಃ-ಪು-ಪಾ-ಸ್ತ್ರೀ-ಕುರ್ಪರಃ-ಪಾ-ಕೂರ್ಪರಃ-ಪು-೨-ಮೊಳಕೈಗಳ ಪೆಸರುಗಳು.

(ಅಸ್ಯೋಪರಿ)ಪ್ರಗಂಡಸ್ಸ್ಯಾತ

ಪ್ರಗಂಡಃ-ಪು-೧--ಅಸ್ಯೋಪರಿ- ಮೊಳಕೈಗಿಂತಲೂ-ಮೇಲೆಕಂಕಳವರಿಗೂ ಮೇಲುತೋಳಿನ ಹೆಸರು.

ಪ್ರಕೋಷ್ಠಸ್ತಸ್ಯಚಾಪ್ಯಧಃ

ಪ್ರಕೋಷ್ಠಃ-ಪು-೧-ತಸ್ಯ-ಅಧಃ-ಮಣಿಕಟ್ಟಿನವರಿಗೂ ಮೊಳಕೈಕೆಳಗಡೇ ಮುಂಗೈಪೆಸರು.

ಮಣಿ ಬಂಧಾ ದಾಕನಿಷ್ಠಂ
ಕರಸ್ಯಕರಭೊ (ಬಹಿಃ)

ಕರಭಃ-ಪು-೧-ಮಣಿಬಂಧಾತ್-ಮಣಿಬಂಧವೆಂದರೆ ಮಣಿಕಟ್ಟು, ಅದುಮೊದಲುಗೊಂಡು-ಆಕನಿಷ್ಠಂ-ಕಿರಿಬೆರಳವರಿಗೂ, ಕರಸ್ಯ ಬಹಿಃ - ಕೈಮೇಲ್ಗಡೆಯ ಹೆಸರು.

| | |
|---|---|
| ಪಂಚಶಾಖಃ ಶಯಃಪಾಣಿ | ಪಂಚಶಾಖಃ-ಶಯಃ-ಪಾಣಿಃ-ಪು-೩-ಮ ಣಿಕಟ್ಟಿನಿಂದಲೂ ಬೆರಳುಗಳಿಂದಲೂ ಕೂಡಿದ ಸಂಪೂರ್ಣ ಹಸ್ತದ ಹೆಸರುಗಳು. |
| ಸ್ತರ್ಜನೀ(ಸ್ಯಾ) ತ್ಪ್ರದೇಶಿನೀ | ತರ್ಜನೀ-ಪ್ರದೇಶಿನೀ-ಸ್ತ್ರೀ-೨-ಹೆಬ್ಬೆರಳೊತ್ತಿನ ತರ್ಜನೀಬೆರಳ ಹೆಸರುಗಳು. |
| ಅಂಗುಲ್ಯಃಕರಶಾಖಾಸ್ಸ್ಯುಃ | ಅಂಗುಳೀ-ಮಾ--ಅಂಗುಳಿಃ-ಕರಶಾಖಾ-ಸ್ತ್ರೀ-೨- ಸಾಮಾನ್ಯವಾಗಿ ಬೆರಳುಗಳೆಲ್ಲಕ್ಕೂ ಹೆಸರುಗಳು. ಬೆಟ್ಟು. |
| (ಪುಂಸ್ಯಂ) ಗುಷ್ಠಃಪ್ರದೇಶಿನೀ। ಮಧ್ಯಮಾನಾಮಿಕಾ (ಚಾಪಿ)ಕನಿಷ್ಠಾ (ಚೇತಿತಾಃಕ್ರಮಾತ | ಅಂಗುಷ್ಠಃ-ಪು-೧-ಹೆಬ್ಬೆರಳು. ಪ್ರದೇಶಿನೀ-ಸ್ತ್ರೀ-೧-ಹೆಬ್ಬೆಟ್ಟಿನವತ್ತು ಬೆರಳು. ಮಧ್ಯಮಾ-ಸ್ತ್ರೀ-೧-ನಡಬೆರಳು, ಅನಾಮಿಕಾ ಸ್ತ್ರೀ-೧-ಪವಿತ್ರದಬೆರಳು, ಕನಿಷ್ಠಾ-ಸ್ತ್ರೀ-೧-ಕಿರಿಬೆರಳು, ತಾಃಕ್ರಮಾತ- ಆ ಅಂಗುಷ್ಠಾದಿ-೫-ಶಬ್ದಗಳೂ -ಹೆಬ್ಬೆರಳುಮುಂತಾದ-೫-ಬೆಟ್ಟುಗಳಿಗೂ ಕ್ರಮದಿಂದ ಬೇರೆಬೇರೆ ಹೆಸರುಗಳು. |
| ಪುನರ್ಭವಃ ಕರರುಹೋ ನಖೋಸ್ತ್ರೀನಖರೋಸ್ತ್ರಿಯಾಂ। | ಪುನರ್ಭವಃ-ಕರರುಹಃ-ಪು-ನಖಃ-ಪ್ನ-ನಖರಃ-ಪ್ನ-ಪ-ತ್ರಿ-೪- ಉಗುರುಗಳ ಹೆಸರುಗಳು. |
| ಪ್ರಾದೇಶತಾಲಗೋಕರ್ಣಾಸ್ತರ್ಜನ್ಯಾದಿಯುತೇತತೇ ॥೩೪೩॥ ಅಂಗುಷ್ಠೇ | ಪ್ರಾದೇಶಃ-ಪು-೧-ತಾಲಃ-ಪು-೧-ಗೋಕರ್ಣಃ-ಪು-೧-ಈಷಿ ತರ್ಜನ್ಯಾದಿಯುತೇ ಅಂಗುಷ್ಠೇ-ವತ್ತು ಬೆರಳು ಮುಂತಾದವುಗಳಿಂದೊಡಗೂಡಿದ ಹೆಬ್ಬೆಟ್ಟು, ಚಾಚಲ್ಪಟ್ಟ ಪರಿಮಾಣಕ್ಕೆ ಹೆಸರು. ಚೋಟುದ್ದ,ಚೋಟಗಲ. ಚೋಟೆತ್ತರ. |
| ಸಕನಿಷ್ಠೇ ಸ್ಯಾದ್ವಿತಸ್ತಿರ್ದ್ವಾದಶಾಂಗುಳಿಃ। | ವಿತಸ್ತಿಃ-ಪು-ಪ-ಸ್ತ್ರೀ-ದ್ವಾದಶಾಂಗುಳಿಃ-ಪು-೨-ಸಕನಿಷ್ಠೇ ವಿತತೇಅಂಗುಷ್ಠೇ ಸ್ಯಾತ್- ಕಿರಿಬೆರಳಿನಿಂದೊಡಗೂಡಿ ಚಾಚಲ್ಪಟ್ಟ ಹೆಬ್ಬೆಟ್ಟಿನ ಆಳತೆ, ಘೇಣು, ಗೇಣು. |
| (ಪಾಣೌ)ಚಪೇಟಪ್ರತಲಪ್ರಹಸ್ತೌವಿಸ್ತೃತಾಂಗುಳೌ॥ | ಚಪೇಟಃ-ಪ್ರತಲಃ-ಪ್ರಹಸ್ತಃ-ಪು-೩-ವಿಸ್ತೃತಾಂಗುಳೌ-ಚಾಚಲ್ಪಟ್ಟ ಬೆರಳು |

ಕೈಗಳ್ಳ ಅಂಗೈಗೆ ಹೆಸರುಗಳು.

(ದ್ವೌ ಸಂಹತೌ)ಸಂಹತತಲಃ (ಪ್ರತಲೌವಾಮದಕ್ಷಿಣೌ।)

ಸಂಹತತಲಃ-ಪಾ-ಸಿಂಹತತಲಃ-ಪ್ರ-೧-ಸಂಹತೌವಾಮದಕ್ಷಿಣೌದ್ವೌಪ್ರತಲೌ-ಚಾಚಲ್ಪಟ್ಟ ಬೆರಳುಗಳುಳ್ಳದ್ದಾಗಿಯೂ ಅಂಗೈಗಳೆರಡೂ ಕೂಡಿಕೊಂಡದ್ದಾಗಿಯೂ ಇರುವ ಮುಗಿದ ಎಡಬಲಕೈಗಳೆರಡಕ್ಕೂ ಹೆಸರು.

ಪಾಣಿರ್ನಿಕುಬ್ಜಃ)ಪ್ರಸೃತಿ

ಪ್ರಸೃತಿಃ-ಸ್ತ್ರೀ-ಪ-ಪ್ರು-೧- ನಿಕುಬ್ಜಃ ಬೊಗ್ಗಿದ ಅಂಗೈ ಹೆಸರು. ಶ್ಯಾರೆ, ಸೇರ.

(ಸ್ತೌಯುತಾ) ವಂಜಲಿಃ(ಪುಮಾನ್) ॥೩೪೫॥

ಅಂಜಲಿಃ-ಪ್ರು-೧-ಯುತೌ-ಬೊಗ್ಗಿಸಿಸೇರಿಸಲ್ಪಟ್ಟ ೨ ಅಂಗೈಗಳ ಹೆಸರು, ಬಗಸ.

ಪ್ರಕೋಷ್ಠೆ ವಿಸ್ತೃತಕರೆಹಸ್ತೊ

ಹಸ್ತಃ-ಪ್ರು-೧-ವಿಸ್ತೃತತಲೆ-ಚಾಚಲ್ಪಟ್ಟ ಕೈಯುಳ್ಳ ಹಸ್ತದ ಹೆಸರು. ಅಂದರ ಮೊಳ.

ಮುಷ್ಟ್ಯಾತುಬದ್ಧಯಾ। ಸರತ್ನಿಸ್ಸ್ಯಾ

ರತ್ನಿಃ-ಪ್ರು-ಪ-ಸ್ತ್ರೀ- ೧- ಬದ್ಧಯಾಮುಷ್ಟ್ಯಾಸಃ-ಹಿಡಿಯೊಡಗೂಡಿದ ಮೊಳ,ಅಂದರೆ ಹಿಡಿಕಡಿಮೇ ಮೊಳ.

ದರತ್ನಿ(ಸ್ತುನಿಷ್ಕನಿಷ್ಠೆನಮುಷ್ಟಿನಾ ॥೩೪೬॥

ಅರತ್ನಿಃ-ಪ್ರು-ಪ-ಸ್ತ್ರೀ-೧-ನಿಷ್ಕನಿಷ್ಠೆನ-ಚಾಚಲ್ಪಟ್ಟ ಕಿರಿಬೆರಳುಳ್ಳ, ಮುಷ್ಟಿನಾ-ಹಿಡಿಯಿಂದೊಡಗೂಡಿದ ಮೊಳದ ಹೆಸರು.

ವ್ಯಾಮೊ ಬಾಹ್ವೋಸ್ಸಕರಯೊಸ್ತತಯೊಸ್ತಿರ್ಯಗಂತರಂ।

ವ್ಯಾಮಃ-ಪ್ರು-೧-ಸಕರಯೊಸ್ತಿರ್ಯಕ್ತತಯೊರ್ಬಾಹ್ವೋರ್ಯದಂತರಂತತ- ಕೈಗಳಿಂದೊಡಗೂಡಿದ ಅಡ್ಡವಾಗಿ ಚಾಚಲ್ಪಟ್ಟ ತೋಳುಗಳೆರಡರ ಮಧ್ಯಪ್ರದೇಶ,ಮಾರು.

ಊರ್ಧ್ವವಿಸ್ತೃತದೊಃ ಪಾಣೆನೃಮಾನೆ ಪಾರುಷಂ ತ್ರಿಷು॥

ಪಾರುಷಂ- ತ್ರಿ-೧- ಊರ್ದ್ವವಿಸ್ತೃತದೊಃಪಾಣೆನೃಮಾನೆ — ಮೇಲೆಕ್ಕೆಯೆತ್ತಿ ಚಾಚಲ್ಪಟ್ಟ ಕೈಯುಳ್ಳ ಮನುಷ್ಯನ ಅಳತೆ ಆಳೊಕ್ಕೆಯುದ್ದ.

ಕಂಠೊಗಳೊಥ

ಕಂಠಃ-ಗಳಃ-ಪ್ರು-೨-ಕುತ್ತಿಗೆ ಕತ್ತು.

ಗ್ರೀವಾಯಾಂಶಿರೊಧಿಃಕಂಧರೆತ್ಯಪಿ।

ಗ್ರೀವಾ-ಶಿರೋಧಿಃ-ಕಂಧರಾ-ಸ್ತ್ರೀ-ಕೊರಳು.

| | |
|---|---|
| ಕಂಬುಗ್ರೀವಾ(ತ್ರಿರೇಖಾಸಾ) | ಕಂಬುಗ್ರೀವಾ-ಸ್ತ್ರೀ-೧-ತ್ರಿರೇಖಾಸಾ-ಮೂರು ರೇಖೆಗಳುಳ್ಳ ಕೊರಳ ಹೆಸರು. |
| ವಟುರ್ಘಾಟಾಕೃಕಾಟಿಕಾ | ಅವಟುಃ-ಪು-ಘಾಟಾ- ಕೃಕಾಟಿಕಾ-ಸ್ತ್ರೀ-೩-ಹೆಗ್ಗತ್ತು. |
| ವಕ್ತ್ರಾಸ್ಯೇವದನಂತುಂಡಮಾನನಂಲಪನಂಮುಖಂ। | ವಕ್ತ್ರಂ-ಆಸ್ಯಂ-ವದನಂ- ತುಂಡಂ- ಆನನಂ-ಲಪನಂ-ಮುಖಂ-ನ-೭-ಬಾಯಿ. |
| (ಕ್ಲೀಬೆ)ಘ್ರಾಣಂಗಂಧವಹಾಘೋಣಾನಾಸಾಚನಾಸಿಕಾ॥ | ಘ್ರಾಣಂ-ನ-ಗಂಧವಹಾ-ಘೋಣಾ-ನಾಸಾ-ನಾಸಿಕಾ-ಸ್ತ್ರೀ-೫-ಮೂಗು. |
| ಓಷ್ಠಾಧರೌತು ರದನಚ್ಛದೌದಶನವಾಸಸೀ। | ಓಷ್ಠಃ-ಅಧರಃ-ರದನಚ್ಛದಃ-ಪು-ದಶನವಾಸಃ-ಸ-ನ-೪-ತುಟಿಗಳ ಹೆಸರುಗಳು. |
| (ಅಧಸ್ತಾ)ಚ್ಚಿಬುಕಂ | ಚಿಬುಕಂ-ನ-೧-ಅಧಸ್ತಾತ್-ತುಟಿಯ ಕೆಳಗಡೆ ಗಲ್ಲದ ಹೆಸರು, ಗಡ್ಡ. |
| ಗಂಡೌಕಪೋಲೌ | ಗಂಡಃ-ಕಪೋಲಃ-ಪು-೨-ಕೆನ್ನೆಯ ಹೆಸರುಗಳು, |
| (ತತ್ಪರಾಹನುಃ) ॥೩೯೦॥ | ಹನುಃ-ಸ್ತ್ರೀ-ಪ-ಪು-೧- ತತ್ಪರಾ-ಆ ಕೆನ್ನೆಗಳ ಮೇಲ್ಭಾಗಕ್ಕೂ ಹಿಂಭಾಗಕ್ಕೂ ಹೆಸರು. ಕಟವಾಯಿ, ಕಣತಲೇ, ಕೆಳಬಾಡೆಗೂ ಹೆಸರೆಂದು ಕೆಲವರನ್ನುವರು. |
| ರದನಾದಶನಾದಂತಾರದಾ* | ರದನಾಃ-ದಶನಾಃ-ದಂತಾಃ- ಪು-೩-೪-ಹುಲ್ಲುಗಳು. |
| ಸ್ತಾಲುತುಕಾಕುದಂ | ತಾಲು-ಪಾ-ತಾಲು-ನ-ಕಾಕುದಂ-ನ-೨ ದವಡೆಗಳು, ಒಳದವಡೆ, ಹೊರದವಡೆ, ಕೆಳದವಡೆ, ಮೇಲುದವಡೆ, ದಾಡೆ. |
| ರಸಜ್ಞಾರಸನಾಜಿಹ್ವಾ | ರಸಜ್ಞಾ-ರಸನಾ-ಜಿಹ್ವಾ-ಸ್ತ್ರೀ-೩-ನಾಲಿಗೆ. |
| ಪ್ರಾಂತಾವೊಷ್ಠಸ್ಯ)ಸೃಕ್ವಿಣೀ ॥೩೯೧॥ | ಸೃಕ್ವ-ನ-ಪಾ-ಸೃಕ್ವಿ-ನ-೧-ಓಷ್ಠಸ್ಯಪ್ರಾಂತೌ-ತುಟಿಯ ಕೊನೆ ಅಂದರೆ ಜೊಲ್ಲುನೀರು ಸುರಿಯುವದಕ್ಕೆ ತಕ್ಕ ಬಾಯಿಯ ಅಂಚು. |
| ಲಲಾಟಮಲಿಕಂಗೋಧಿ | ಲಲಾಟಂ- ಅಲಿಕಂ-ಪಾ- ಅಳೀಕಂ-ನ-ಗೋಧಿಃ-ಪು-೩-ಹಣೆ, ಪಣೆ. |

(ಊರ್ಧ್ವೇದೃಗ್ಭ್ಯಾಂ)ಭ್ರುವೌ(ಸ್ತ್ರಿಯಾಂ ।)

ಕೂರ್ಚ(ಮಸ್ತ್ರೀಭ್ರುವೋರ್ಮಧ್ಯಂ)

ತಾರಕಾಕ್ಷ್ಣಃಕನೀನಿಕಾ

ಲೋಚನಂನಯನಂನೇತ್ರಮೀಕ್ಷಣಂಚಕ್ಷುರಕ್ಷಿಣೀ । ದೃಗ್ದೃಷ್ಟೀಚಾ

ಶ್ರುನೇತ್ರಾಂಬುರೋದನಂಚಾಸ್ರಮಸ್ರುಚ ॥೨೫೨॥

ಅಪಾಂಗೌ(ನೇತ್ರಯೋರಂತೌ)

ಕಟಾಕ್ಷೋ(ಪಾಂಗದರ್ಶನೇ।)

ಕರ್ಣಶಬ್ದಗ್ರಹೌಶ್ರೋತ್ರಂ ಶ್ರುತಿಃಸ್ತ್ರೀಶ್ರವಣಂಶ್ರವಃ ॥

ಉತ್ತಮಾಂಗಂಶಿರಶ್ಶೀರ್ಷಂ ಮೂರ್ಧಾನಾ ಮಸ್ತಕೋಸ್ತ್ರಿಯಾಂ।

ಚಿಕುರಃಕುಂತಲೋವಾಲಃಕಚಃಕೇಶಃಶಿರೋರುಹಃ ॥೨೫೩॥

ತದ್ವೃಂದೇಕೈಶಿಕಂಕೈಶ್ಯ

ಭ್ರೂಃ-ಸ್ತ್ರೀ-೧-ದೃಗ್ಭ್ಯಾಮೂರ್ಧ್ವೇ-ಕಣ್ಣಮೇಲ್ಭಾಗ, ಕಣ್ಣುಬ್ಬು, ಹುಬ್ಬು.

ಕೂರ್ಚಂ-ಪ್ನ-೧-ಭ್ರುವೋರ್ಮಧ್ಯಂ-ಕಣ್ಣುಬ್ಬುಗಳೆರಡರ ನಡುವೆ, ಭ್ರೂಮಧ್ಯ ಹುಬ್ಬುಗಂಟಿಕ್ಕುವಸ್ಥಳ.

ತಾರಕಾ-ಕನೀನಿಕಾ-ಸ್ತ್ರೀ-೨-ಅಕ್ಷ್ಣಃ ಕಣ್ಣಿನ ಗುಡ್ಡ್ಡೆ.

ಲೋಚನಂ-ನಯನಂ-ನೇತ್ರಂ-ಈಕ್ಷಣಂ-ಚಕ್ಷುಃ-ಸ-ಅಕ್ಷಿ-ಣ-ದೃಕ್-ಶ-ದೃಷ್ಟಿಃ ಸ್ತ್ರೀ-೮-ಕಣ್ಣುಗಳು.

ಅಶ್ರು-ನೇತ್ರಾಂಬು-ರೋದನಂ-ಅಸ್ರಂ-ಅಶ್ರಂ-ಅಸ್ರು-ನ-೫-ಕಣ್ಣಿನಲ್ಲಿ ಸುರಿಯುವ ನೀರು. ಅಳುವ ನೀರು.

ಅಪಾಂಗಃ-ಪು-೧-ನೇತ್ರಯೋಃ-ಅಂತೌ-ಕಣ್ಣುಗಳ ಕೊನೆಗಳು. ಕುಡಿಗಣ್ಣು,ಕಡೆಗಣ್ಣು, ಕಟಾಕ್ಷದ ಕಣ್ಣು.

ಕಟಾಕ್ಷಃ-ಪು-೧-ಅಪಾಂಗ ದರ್ಶನೇ-ಕಡೆಗಣ್ಣ ನೋಟ.

ಕರ್ಣಃ-ಶಬ್ದಗ್ರಹಃ-ಪು-ಶ್ರೋತ್ರಂ-ನ-ಶ್ರುತಿಃ-ಸ್ತ್ರೀ-ಶ್ರವಣಂ-ಶ್ರವಃ-ನ-೬-ಕಿವಿಗಳು, ಕಿವಿಗಳ ಹೆಸರು.

ಉತ್ತಮಾಂಗಂ-ಶಿರಃ-ಶೀರ್ಷಂ-ನ-ಮೂರ್ಧಾ-ನ್-ಪು-ಮಸ್ತಕಃ-ಪ್ನ-೫-ತಲೆ, ಮಂಡೆ, ಶಿರಸ್ಸೆಂದು ಸಕಾರಾಂತ ನಪುಂಸಕವೂ, ಶಿರವೆಂದು ಆಕಾರಾಂತ ಪುಲ್ಲಿಂಗವೂ ಉಂಟೆಂದು ಕೆಲವರನ್ನುವರು.

ಚಿಕುರಃ-ಕುಂತಲಃ-ವಾಲಃ-ಕಚಃ-ಕೇಶಃ-ಶಿರೋರುಹಃ-ಪು-೬-ತಲೇ ಕೂದಲು, ಮಂಡೆ ಗೂದಲು.

ಕೈಶಿಕಂ-ಕೈಶ್ಯಂ-ನ-೨- ತದ್ವೃಂದೇ-ಆ ಕೂದಲುಗಳ ಗುಂಪು, ಕೂದಲು ಕುಚ್ಚು.

| | |
|---|---|
| ಮಲಕಾಶ್ಚೂರ್ಣಕುಂತಲಾಃ। | ಅಲಕಃ-ಪು-ಷ--ಸ-ಚೂರ್ಣಕುಂತಲಃ-ಪು-೦-ಮುಂಗುರುಳು, ಕುರುಳು. |
| (ತೆಲಲಾಟೆ) ಭ್ರಮರಕಾಃ | ಭ್ರಮರಕಃ-ಪು-೧-ಲಲಾಟೇತೆ-ಹಣೆಯ ಮೇಲೆ ಜೋಲಾಡುವ ಮುಂಗುರುಳು. ಸುಳಿ ಮುಂಗುರುಳು. |
| ಕಾಕಪಕ್ಷಶ್ಶಿಖಂಡಕಃ॥ | ಕಾಕಪಕ್ಷಃ-ಶಿಖಂಡಕಃ-ಪು-೦-ಜುಲ್ಪಾ ಕೂದಲು. |
| ಕಬರೀಕೇಶವೇಶೋ | ಕಬರೀ-ಸ್ತ್ರೀ-ಕೇಶವೇಶಃ-ಪು-೦- ತುರುಬು. |
| ಧಧಮ್ಮಿಲ್ಲಸ್ಸಂಯತಾಃಕಚಾಃ। | ಧಮ್ಮಿಲ್ಲಃ-ಪು-೧-ಸಂಯತಾಃಕಚಾಃ--ಕಟ್ಟಲ್ಪಟ್ಟಕೂದಲು, ತಲೆಕೂದಲಗಂಟು, ಎಣೆಗಂಟು. |
| ಶಿಖಾಚೂಡಾಕೇಶಪಾಶೀ | ಶಿಖಾ-ಚೂಡಾ-ಕೇಶಪಾಶೀ-ಸ್ತ್ರೀ-೩-ಶಿಖೆ, ಜುಟ್ಟು. |
| ವ್ರತಿನಾಂತುಜಟಾಸಟಾ॥ | ಜಟಾ-ಸಟಾ-ಸ್ತ್ರೀ-೦-ವ್ರತೀನಾಂ-ವ್ರತನಿಯಮವುಳ್ಳವರ ಜಡೆಗಳಹೆಸರು. ಮಣುಕು ಕೂದಲು ಜಡೇತಿರಿಗಳು. |
| ವೇಣೀಪ್ರವೇಣೀ | ವೇಣೀ-ಪ್ರವೇಣೀ-ಪಾ-ವೇಣಿಃ-ಪ್ರವೇಣಿಃ-ಸ್ತ್ರೀ-೦-ಹಣೆಯಲ್ಪಟ್ಟ ಜಡೆ, ಕೂದಲು ಹಣೆತಜಡೆ. |
| ಶೀರ್ಷಣ್ಯಾಶಿರಸ್ಯಾವಿಶದೇಕಚೇ। | ಶೀರ್ಷಣ್ಯಃ-ಶಿರಸ್ಯಃ-ಪು-೦ ವಿಶದೇಕಚೆ-ವಂದಕ್ಕೊಂದು ಸೇರದೇ ಸಿಕ್ಕಿಲ್ಲದ ಕೂದಲು ಹೆಸರು. |
| ಪಾಶಃಪಕ್ಷಶ್ಚಹಸ್ತಶ್ಚ ಕಲಾಪಾರ್ಥಾಃಕಚಾತ್ಪರ ॥ | ಪಾಶಃ-ಪಕ್ಷಃ-ಹಸ್ತಃ-ಪು-೩ನ್ನು-ಕಚಾತ್ಪರೆ ಕಲಾಪಾರ್ಥಾ-ಕೇಶಪರ್ಯಾಯ ಶಬ್ದಗಳಮೇಲೆ ಪ್ರಯೋಗಿಸಲ್ಪಟ್ಟನುಗಳಾದ ಈ ಶಬ್ದಗಳು ಕೇಶಸಮೂಹವಾಚಕಗಳಾಗುವವು ॥೮॥(ಕೇಶಪಾಶಃ) (ಕೇಶಪಕ್ಷಃ)ಇತ್ಯಾದಿ. |
| ತನೂರುಹಂರೋಮಲೋಮ | ತನೂರುಹಂ-ರೋಮ-ನ್-ಲೋಮ-ನ್-ನ-೩-ಮೈಮೇಲೆ ಹುಟ್ಟಿದ ಕೂದಲ ಹೆ |

ಸರುಗಳು, ಮೈಗೂದಲು.

ತದ್ವೃದ್ಧೌ ಶ್ಮಶ್ರು ಪುಂಮುಖೇ ।

ಶ್ಮಶ್ರು-ನ-೧-ಪುಂಮುಖೇ ತದ್ವೃದ್ಧೌ-ಗಂಡುಸರಮುಖದಲ್ಲಿ ಬೆಳೆದಕೂದಲು,ಅಂದರೆ ಗಡ್ಡ, ದಾಡಿ,ಮೀಸೆ.

ಆಕಲ್ಪವೇಷಾನ್ನೈಪಥ್ಯಂಪ್ರತಿಕರ್ಮಪ್ರಸಾಧನಂ ॥೩೪೯॥

ಆಕಲ್ಪಃ-ವೇಷಃ-ಪು-ನೇಪಥ್ಯಂ-ಪ್ರತಿಕರ್ಮ-ನ-ಪ್ರಸಾಧನಂ- ಈ ಶಬ್ದಗಳೂ ತಿಲಕಪತ್ರ ರಚನಾದಿಗಳಿಗೂ ಹೆಸರು.

ದಶೈತೇತ್ರಿಷ್ವಲಂ ಕರ್ತಾಲಂಕರಿಷ್ಣುಶ್ಚ *ಮಂಡಿತಃ । ಪ್ರಸಾಧಿತೋಲಂಕೃತಶ್ಚ ಭೂಷಿತಶ್ಚ ಪರಿಷ್ಕೃತಃ ॥೩೫೦॥

ಅಲಂಕರ್ತಾ - ಋ - ಅಲಂಕರಿಷ್ಣುಃ-ಪು-೨- ಅಲಂಕರಿಸುವವನ ಹೆಸರುಗಳು, ಮಂಡಿತಃ-ಪ್ರಸಾಧಿತಃ- ಅಲಂಕೃತಃ-ಭೂಷಿತಃ-ಪರಿಷ್ಕೃತಃ-೫-ಅಲಂಕರಿಸಲ್ಪಟ್ಟವನ ಹೆಸರುಗಳು.

ವಿಭ್ರಾಡ್ಭ್ರಾಜಿಷ್ಣು ರೋಚಿಷ್ಣೂ

ವಿಭ್ರಾಟ್-ಜ್-ಭ್ರಾಜಿಷ್ಣುಃ-ರೋಚಿಷ್ಣುಃ-ಪು-೩-ಭೂಷಣಾದಿಗಳಿಂದ ಪ್ರಕಾಶಿಸುತ್ತಿರುವವನ ಹೆಸರುಗಳು. ಏತೇದಶ-ಈ-೧೦-ಶಬ್ದಗಳೂ, ತ್ರಿಷು- ಮೂರು ಲಿಂಗಗಳಲ್ಲಿಯೂ ವರ್ತಿಸುತ್ತವೆ.

ಭೂಷಣಂಸ್ಯಾದಲಂಕ್ರಿಯಾ ।

ಭೂಷಣಂ-ನ-ಅಲಂಕ್ರಿಯಾ-ಸ್ತ್ರೀ-೨-ಅಲಂಕರಿಸುವಿಕೆ, ಅಲಂಕಾರಮಾಡುವಿಕೆ.

ಅಲಂಕಾರಸ್ತ್ವಾಭರಣಂ ಪರಿಷ್ಕಾರೋ ವಿಭೂಷಣಂ ಮಂಡನಂ (ಚತು

ಅಲಂಕಾರಃ-ಪು-ಆಭರಣಂ-ನ-ಪರಿಷ್ಕಾರಃ-ಪು-ವಿಭೂಷಣಂ-ಮಂಡನಂ-ನ-೫-ಆಭರಣಗಳು, ಒಡವೆ.

ಥ)ಮುಕುಟಂ ಕಿರೀಟಂ( ಪುನ್ನಪುಂಸಕಂ। )

ಮುಕುಟಂ-ಪು-ಮುಕುಟಂ- ನ- ಕಿರೀಟಂ-ಪ್ನ-೨-ಕಿರೀಟದ ಹೆಸರು, ಸುವರ್ಣ ರತ್ನ ವಸ್ತ್ರಾದಿಗಳಿಂದ ರಚಿಸಿದ ಶಿರೋಭೂಷಣ, ಮುಂಡಾಸು,ಪಾಗು, ಟೊಪ್ಪಿ.

ಚೂಡಾಮಣಿಶ್ಶಿರೋರತ್ನಂ

ಚೂಡಾಮಣಿಃ-ಪು-ಶಿರೋರತ್ನಂ-ನ-೨-ತಲೆಯೊಳಗೆ ಧರಿಸತಕ್ಕ ಮಾಣಿಕ್ಯವೆಂಬ ರತ್ನಾಭರಣ.

ತರಳೋ (ಹಾರಮಧ್ಯಗಃ

ತರಳಃ-ಪು-ಹಾರಮಧ್ಯಗಃ- ಹಾರದ

| | |
|---|---|
| | ಸಡಿವೆಯಿರುವ ನಾಯಕಮಣಿ, ಪದಕದ ಮಣಿ, ಹಾರಕ್ಕೆ ಶಿಖಾಮಣಿ, ಸರದ ಮುಖ ಮಣಿ. |
| ವಾಲಪಾಶ್ಯಾ ಪಾರಿತಥ್ಯಾ | ವಾಲಪಾಶ್ಯಾ-ಪಾರಿತಥ್ಯಾ-ಸ್ತ್ರೀ-೨-ತುರುಬು, ಜಡೆಗಂಟುಗಳಲ್ಲಿ ಹೆಂಗಳು ಅಲಂಕಾರಕ್ಕೆ ಧರಿಸಿಕೊಳ್ಳುವ ಚಿನ್ನದ ವಡಿವೆ, ಜಡೆಬಿಲ್ಲೆ, ರ್‍ಯಾಕಣೆ, ಮುಂತಾದದ್ದು. |
| ಪತ್ರಪಾಶ್ಯಾ ಲಲಾಟಿಕಾ । | ಪತ್ರಪಾಶ್ಯಾ-ಲಲಾಟಿಕಾ-ಸ್ತ್ರೀ-೨-ಹಣೆಗಿಟ್ಟುಕೊಳ್ಳುವ ಭಾಷಿಂಗದ ವಡಿವೆ, ಬೈತಲೇ ಬೊಟ್ಟು. |
| ಕರ್ಣಿಕಾ ತಾಳಪತ್ರಂ ಸ್ಯಾ | ಕರ್ಣಿಕಾ-ಸ್ತ್ರೀ-ತಾಳಪತ್ರಂ-ನ-೨-ಕಿವಿಗಿಟ್ಟುಕೊಳ್ಳುವ ವಾಲೆ, ಸರಪಣಿ, ಬುಗಡಿ, ಮುಂತಾದದ್ದು. |
| ತ್ಕುಂಡಲಂ ಕರ್ಣವೇಷ್ಟನಂ॥ | ಕುಂಡಲಂ-ಕರ್ಣವೇಷ್ಟನಂ-ನ-೨-ಕಿವಿಗಿಟ್ಟುಕೊಳ್ಳುವ ಹತ್ತಕಡಗು, ಕುಂಡಲ, ನಂಟು, ಗಂಟಿಯೆಂಬ ವಡಿವೆ. |
| ಗ್ರೈವೆಯಕಂ ಕಂಠಭೂಷಾ | ಗ್ರೈವೇಯಕಂ-ಪು-ಗ್ರೈವೇಯಂ-ನ-ಕಂಠಭೂಷಾ-ಸ್ತ್ರೀ-೨-ಕೊರಳಲ್ಲಿ ಹಂತವಾಗಿ ಧರಿಸಲ್ಪಟ್ಟ ವಡಿವೆ, ಅಡ್ಡಿಕೆ, ಉತ್ತಂಡ, ಚಿಂತಾಕ, ತಾಳಿ ಮುಂತಾದದ್ದು. |
| ಲಂಬನಂ ಸ್ಯಾಲ್ಲಲಂತಿಕಾ ॥ | ಲಂಬನಂ-ಪು-ಲಂಬಮಾನಂ-ನ-ಲಲಂತಿಕಾ-ಸ್ತ್ರೀ-೨-ಕೊರಳಲ್ಲಿ ನ್ಯಾತಾಡುವ ವಡಿವೆ, ಜೋಮಾಲೇಸರ, ಕಂಠೀಸರ, ಮಣಿಗಳ ಹಾರ ಮುಂತಾದದ್ದು. |
| ಸ್ವರ್ಣೈಃ ಪ್ರಾಲಂಬಿಕಾ | ಪ್ರಾಲಂಬಿಕಾ-ಸ್ತ್ರೀ-೧-ಸ್ವರ್ಣೈಃ-ಭಂಗಾರದಿಂದಲೇ ರಚಿಸಲ್ಪಟ್ಟ ಕಂಠಹಾರ, ಕಂಠೀಸರ, ಚಂದ್ರಹಾರ, ಗೋಧೀಸರ, ಮುಂತಾದದ್ದು. |
| ಥೋರಸೂತ್ರಿಕಾ ಮೌಕ್ತಿಕೈಃ ಕೃತಾ ॥೧೦೪॥ | ಉರಸೂತ್ರಿಕಾ-ಸ್ತ್ರೀ-೧-ಮೌಕ್ತಿಕೈಃ ಕೃತಾ-ಮುತ್ತುಗಳಿಂದ ಮಾಡಲ್ಪಟ್ಟ ಹಾರ, ಮುತ್ತಿನ ಕಂಠಿ, ಮುತ್ತಿನ ಅಡಿಗಳು ಕಂ |

ರೀಸರ.

ಹಾರೊ ಮುಕ್ತಾವಳೀ

ಹಾರಃ-ಪು-ಪಾ-ಸ್ತ್ರೀ- ಮುಕ್ತಾವಳೀ-ಪಾ-ಮುಕ್ತಾವಳಿಃ-ಸ್ತ್ರೀ-೨- ಮುತ್ತಿನದಂಡೆಗಳ ಹೆಸರುಗಳು. ಮಂದಕ್ಕೊಂದು ಸೂತ್ರರವಾಗಿ ಪೋಣಿಸಲ್ಪಟ್ಟಿರುವ ಮುತ್ತಿನ ದಂಡೆಗಳು.

ದೇವಚ್ಛಂದೊ (ಸೌಶತಯುಷ್ಟಿಕಃ।)

ದೇವಚ್ಛಂದಃ-ಪು-೧-ಶತಯುಷ್ಟಿಕಃ-ಅಷ್ಟಾ ಅನೇಕ ಸರಗಳುಳ್ಳ ಮುತ್ತಿನ ಕಂಠೀಸರ, ಸಾಕಲಡೀ, ಮುತ್ತಿನ ಕಂಠೀ ಮುಂತಾದ್ದು. ಮೂರುದಂಡೆಗಳುಳ್ಳ ಮುತ್ತಿನಕಂಠಿಗೂ, ೧೦೮ ದಂಡೆಗಳುಳ್ಳ ಮುತ್ತಿನ ಕಂಠೀಸರಕ್ಕೂ ಹೆಸರೆಂದು ಕೆಲವರು. ಮುತ್ತಿನ ಕಟ್ಟಾಣೀಸರಕ್ಕೂ ಹೆಸರಾಗುತ್ತೆ.

(ಹಾರಭೆದಾ ಯುಷ್ಟಿಭೆದಾ) ದ್ಗುತ್ಸಗುತ್ಸಾರ್ಥಗೊಸ್ತನಾಃ। ಅರ್ಧಹಾರೊ ಮಾಣವಕ

ಗುತ್ಸಃ-ಗುತ್ಸಾರ್ಧಃ-ಗೋಸ್ತನಃ-ಅರ್ಧಹಾರಃ-ಮಾಣವಕಃ-ಪು- ಈ ಐನ್ನು ಯುಷ್ಟಿಭೇದಾತ-ಹಾರಭೇದಾಃ-ಸರದದಂಡೆಗಳ ಲೆಕ್ಕದಭೇದದಿಂದ ಬೇರೆ ಬೇರೆ ಹೆಸರುಗಳುಳ್ಳ ಸರಗಳು ಹೇಗಂದರೆ, ಗುತ್ಸಃ-೩೨ ದಂಡೆಗಳುಳ್ಳದ್ದು. ಗುತ್ಸಾರ್ಧಃ-೧೬, ಗೋಸ್ತನಃ-೪೦-ಅಥವಾ-೪, ಅರ್ಧಹಾರಃ-೬೪,ಹಾರಃ-೧೦೮,ಮಾಣವಕಃ-೨೦.

ಏಕಾವ(ಳ್ಯೆಕಯುಷ್ಟಿಕಾ॥)

ಏಕಾವಳೀ-ಸ್ತ್ರೀ-೧-ಏಕಯುಷ್ಟಿಕಾ-ಒಂಟಸರ, ಏಕಲಡೀ-ಒಂದುಸರ, ಏಕಾವಳೀಸರ.

(ಸೈವ) ನಕ್ಷತ್ರಮಾಲಾಸ್ಯಾತ್ಸಪ್ತವಿಂಶತಿಮೌಕ್ತಿಕಾ

ನಕ್ಷತ್ರಮಾಲಾ-ಸ್ತ್ರೀ-೧-ಸಪ್ತ ವಿಂಶತಿಮೌಕ್ತಿಕಾ-೨೭. ಮುತ್ತುಗಳುಳ್ಳ ಸೈವ ಆಕಂಠಮಾಲೆ ಅಂದರೆ ನಕ್ಷತ್ರಮಾಲೆ.

ಆವಾಪಕಃ ಪಾರಿಹಾರ್ಯ್ಯಃಕಟಕಂವಲಯೊಸ್ತ್ರಿಯಾಂ।

ಆವಾಪಕಃ-ಪಾ-ಆವಾಯುಕಃ-ಪಾರಿಹಾರ್ಯಃ-ಪು-೨-ಸೂಡಿಗವೆಂಬಕಡಗ, ಚೂಡಾಲು,ಪಾಂಚಿ,ಕಂಕಣ,ಚಾಕಟ್ಟು, ದೋರೆ, ತಟ್ಟು,ಗೇರುಬಳೆ, ಪಾಕ್ಕೃತೋಡೆ, ಬಳೆ,

ಕಟಕಂ-ನ- ಪು-ವಲಯಃ-ಪ್ನ-೨- ಕಡಗು ಬಳೆ ಮುಂತಾದ ಹಸ್ತಾಭರಣ, ಕರವಲಯಾಭರಣ ಈ ೪-ಹಸ್ತ ವಲಯ.

ಕೆಯೂರ ಮಂಗದಂ(ತುಲ್ಯೆ)

ಕೇಯೂರಂ-ಅಂಗದಂ-ನ-೨-ಬಾಹುಪುರಿಹೆಸರು. ನಾಗಮುರಿಗೆ,ತೋಳುತೊಡಿಗೆ, ಬಾಜೂಬಂದು, ವಂಕಿ.

ಅಂಗುಳೀಯಕಮೂರ್ಮಿ ಕಾ।

ಅಂಗುಳೀಯಕಂ-ನ-ಪಾ-ಪು- ಊರ್ಮಿಕಾ-ಸ್ತ್ರೀ-೨-ಉಂಗರದ ಪೆಸರು. ಅಂಗುಳ್ಯಾಭರಣ, ಉರುಟು, ಕರುಕು, ಹರಳುಂಗರ, ಬಿಲ್ಲೆ ಉಂಗರ.

(ಸಾಕ್ಷರಾಂ) ಗುಳಿಮುದ್ರಾ ಸ್ಯಾತ

ಅಂಗುಳಿಮುದ್ರಾ-ಸ್ತ್ರೀ-೧-ಸಾಕ್ಷರಾಸಾ- ಅಕ್ಷರಗಳು ಕೆತ್ತಲ್ಪಟ್ಟಮೊಹರು, ಬಿಲ್ಲೆಯುಳ್ಳ ಉಂಗುರದ ಹೆಸರು, ಮುದ್ರೆಉಂಗುರ.

ಕಂಕಣಂಕರಭೂಷಣಂ ।

ಕಂಕಣಂ- ಕರಭೂಷಣಂ-ನ-೨-ಮುತ್ತಿನತೋಡೆ, ಸರಿಗೆ, ರತ್ನದತೋಡೆ, ರತ್ನ ಕಂಕಣ ಮುಂತಾದ ಹಸ್ತಾಭರಣ.

(ಸ್ತ್ರೀಕಟ್ಯಾಂ * ಮೆಖಲಾ ಕಾಂಚೀಸಪ್ತಕೀರಶನಾ(ತಥಾ। ಕ್ಲೀಬೆ) ಸಾರಸನಂಚಾ

ಮೇಖಲಾ-ಕಾಂಚೀ-ಸಪ್ತಕೀ-ರಶನಾ- ಪಾ-ರಸನಾ-ಸ್ತ್ರೀ-ಸಾರಸನಂ-ನ-೫- ಸ್ತ್ರೀ-ಕಟ್ಯಾಂ-ಹೆಂಗಳಟೊಂಕಕ್ಕೆ ಆಭರಣಗಳು, ಮೇಖಲಾ-೮ ಪಟ್ಟಿಗಳುಳ್ಳಡಾಬು, ಕಾಂಚೀ-೧ ಪಟ್ಟಿಯುಳ್ಳಡಾಬು, ಸಪ್ತಕೀ-ಏಳೆಳೆಗಳಡಾಬು,ರಶನಾ-೧೬ ಎಳೆಗಳುಳ್ಳ ಡಾಬು, ಸಾರಸನಂ-೩ ಎಳೆಗಳಡಾಬು, ಉಡೆಧಾರ, ಗಜ್ಜೆ ಉಡಿಧಾರ,ಘಂಟೇ ಉಡಿಧಾರ.

(ಥಪುಂಸ್ಕಟ್ಯಾಂ) ಶೃಂಖಲಂ (ತ್ರಿಷು।)

ಶೃಂಖಲಂ-ತ್ರಿ-೧--ಪುಂಸ್ಕಟ್ಯಾಂ-ಪುರುಷನ ಉಡಧಾರ,ಕಟಸೂತ್ರ.

ಪಾದಾಂಗದಂ ತುಲಾಕೋಟಿ ರ್ಮಂಜೀರೊನೂಪುರೊಸ್ತ್ರೀಯಾಂ॥೩೬॥ಹಂಸಕಃಪಾದಕಟಕಃ

ಪಾದಾಂಗದಂ-ನ- ತುಲಾಕೋಟಿಃ-ಮಂಜೀರಃ-ಪು-ನೂಪುರಃ- ಹಂಸಕಃ- ಪಾದಕಟಕಃ-ಪ್ನ-೯-ಅಂದಿಗೆ-ಕಾಲುಸರಪಣಿ, ಪಾದದ ಕಾಲುಕಡಗ, ಕಾಲು ತೊಡಿಗೆ.

ಕಿಂಕಿಣೀಕ್ಷುದ್ರ ಘಂಟಿಕಾ।

ಕಿಂಕಿಣೀ-ಕ್ಷುದ್ರಘಂಟಿಕಾ-ಸ್ತ್ರೀ-೨-ಕಿರಿಘಂಟೆಗಳ ಹೆಸರು. ಕಿರುಗೆಜ್ಜೆ.

ತ್ವಕ್ಫಲಕ್ರಿಮಿರೋಮಾಣಿವಸ್ತ್ರಯೋನಿ

ತ್ವಕ್-ಜ್-ಸ್ತ್ರೀ-೧-ನಾರು- ಫಲಂ,ನ-೧-ಕಾಯಿ, ಹಣ್ಣು, ಕ್ರಿಮಿಃ-ಪು-೧-ಹುಳು, ರೋಮ-ಣ-ನ-ಕೂದಲು। ಈ ೪,(ವಸ್ತ್ರಯೋನಿಃ)ಬಟ್ಟೆಗೆ ಕಾರಣಗಳು. ಅಂದರೆ, ಕಿತ್ತಾರ್ಗ-ನಾರು ಶೀರೆ ಮುಂತಾದವುಗಳಿಗೆ ನಾರು, ಹತ್ತಿ ಮುಂತಾದವುಗಳಿಗೆ ಕಾಯಿ, ರೇಷ್ಮೆ ಪಟ್ಟೆ ಮುಂತಾದವುಗಳಿಗೆ ಹುಳುವು,ಕಂಬಳಿ, ಧಾವಳಿ, ಮುಂತಾದವುಗಳಿಗೆ ಕೂದಲು, ಇವೇ ಕಾರಣಗಳು.

ರ್ದಶತ್ರಿಷು ॥೩೭೦॥

ಮುಂದೆಹೇಳಲ್ಪಡುವ ೧೦ಶಬ್ದಗಳೂ ತ್ರಿಲಿಂಗಗಳು.

ವಾಲ್ಕಂಕ್ಷೌಮಾದಿ

ವಾಲ್ಕಂ-ಕ್ಷೌಮಂ-೨-ನಾರು ಶೀರೆ.

ಫಾಲಂತುಕಾರ್ಪಾಸಂಬಾದರಂಚತತ ।

ಫಾಲಂ-ಕಾರ್ಪಾಸಂ-ಬಾದರಂ-೩-ನೂಲು ಬಟ್ಟೆ.

ಕೌಶೆಯಂ (ಕ್ರಿಮಿಕೊಶೊತ್ಥಂ)

ಕೌಶೇಯಂ-ನ-೧-ಕ್ರಿಮಿಕೋಶೋತ್ಥಂ-ರೇಷ್ಮೆ ಹುಳು ಮುಂತಾದವುಗಳ ಬುರಡೇಗುಡ್ಡು ಮೊದಲಾದವುಗಳಿಂದ ಲಾಟಿಸಿ ಯಳೀತೆಗಿಯತಕ್ಕ ಪಟ್ಟೇಮಡಿ,ಮಗಟ ಮುಂತಾದವುಗಳ ಹೆಸರು.

ರಾಂಕವಂ(ಮೃಗರೊಮಜಂ)

ರಾಂಕವಂ-೧-ಮೃಗರೋಮಜಂ-ಮೃಗರೋಮಗಳಿಂದ ಮಾಡಲ್ಪಟ್ಟ ಶಾಲು, ಬನಾತು, ಬುರ್ನಿಸ್, ಪ್ಲಾರ್ಗ, ಮುಂತಾದವುಗಳಿಗೆ ಪೆಸರುಗಳು.

ಅನಾಹತಂನಿಷ್ಪ್ರವಾಣಿತಂತ್ರಕಂಚ ( ನವಾಂಬರೆ)

ಅನಾಹತಂ-ನಿಷ್ಪ್ರವಾಣೀ- ತಂತ್ರಕಂ-೩-ನವಾಂಬರೆ ಹೊಸಬಟ್ಟೆ.

(ತತ್ಸ್ಯಾ)ದುದ್ಗಮನೀಯಂ(ಯದ್ಧೌತಯೊರ್ವಸ್ತ್ರಯೊರ್ಯುಗಂ)

ಉದ್ಗಮನೀಯಂ-ನ-೧-ಧೌತಯೋಃವಸ್ತ್ರಯೋರ್ದ್ವಯಂ- ಮಗದ ೨ ಬಟ್ಟೆಗಳು. ಮಡಿಪಂಚೆಜೊತೆ,ಮಡಿಧೋತ್ರದಜೊತೆ.

ಪತ್ರೋರ್ಣಂಧೌತಕೌಶೇಯಂ

ಪತ್ರೋರ್ಣಂ-ನ-೧-ಧೌತಕೌಶೇಯಂ

| | |
|---|---|
| | ತೊಳೆದ ಪಟ್ಟೇಶೀರೆ ಮುಂತಾದದ್ದು. |
| (ಬಹುಮೂಲ್ಯಂ)ಮಹಾಧನಂ | ಮಹಾಧನಂ-ನ-೧- ಬಹುಮೂಲ್ಯಂ-ಬಹುಧನ ಸಾಧ್ಯವಾದವಸ್ತ್ರ, ಬಹಳ ಕ್ರಯವುಳ್ಳ ಭಾರೀಬಟ್ಟೆ. |
| ಕ್ಷೌಮಂದುಕೂಲಂ (ಸ್ಯಾ | ಕ್ಷೌಮಂ-ಪಾ-ಕ್ಷೋಮಂ-ದುಕೂಲಂ-ನ-೦-ಬಿಳೀಪಟ್ಟೇಮಡಿ,ಪಟ್ಟೇವಸ್ತ್ರ,ಸವುಯೆಳೆಯಾಗಿಯೂ ನೌರಾಗಿಯೂ ಇರುವ ಬಿಳೀ ಹಸನು ಮಡಿ. |
| ದ್ವೈತು)ನಿವೀತಂ ಪ್ರಾವೃತಂ ತ್ರಿಷು ॥೩೭೩॥ | ನಿವೀತಂ-ಪ್ರಾವೃತಂ-ತ್ರಿ-೦-ಹೊದಿಯುವಬಟ್ಟೆ. ಅಂಗವಸ್ತ್ರ, ಅಂಗೋಸ್ತ್ರ,ಬಹಿರ್ವಾಸಸ್ಸು, ಭೈರವಾಸ. |
| ಸ್ತ್ರಿಯಾಂಬಹುತ್ವೇವಸ್ತ್ರಸ್ಯದಶಾಸ್ಸ್ಯುರ್ವಸ್ತ್ರಯೋರ್ದ್ವಯೋಃ | ದಶಾಃ-ಸ್ತ್ರೀ-ಪಾ-ಪು-ನಿತ್ಯಬಹುವಚನ, ವಸ್ತಿಃ-ಸ್ಸ-೦-ಬಟ್ಟೆಯಬದ್ದಿಕೆಗೆ ಹೆಸರುಗಳುಮತ್ತು-ಅಂಚಿಗೂ ಕಂಬಿಗೂಪೆಸರು. ಬಟ್ಟೆಯಕೊನೆ. (ವಸ್ತಿರ್ದ್ವಯೋರ್ನಿರೂಹೆನಾಭ್ಯದೋಭೂವ್ನಿದಶಾಸುಚೆತಿ ಮೇದಿನೀ.) |
| ದೈರ್ಘ್ಯಮಾಯಾಮಆರೋಹಃ | ದೈರ್ಘ್ಯಂ-ನ-ಆಯಾಮಃ-ಆರೋಹಃ-ಪಾ-ಆನಾಹಃ-ಪು-೩-ಉದ್ದವಾಗಿರುವ ತಿರ್ಯಕ್ಪರಿಮಾಣ, ನೀಳವಾಗಿರುವಿಕೆ, ಲಾಂಗಾಗಿರುವಿಕೆ, ವಿಶಾಲತೆ, ಎತ್ತರವಾಗಿರುವಿಕೆ. |
| ಪರಿಣಾಹೋವಿಶಾಲತಾ। | ಪರಿಣಾಹಃ-ಪು-ವಿಶಾಲತಾ-ಸ್ತ್ರೀ-೦-ಅಗಲದ ಹೆಸರು. ಅಡ್ಡಗಲ, ತಿರ್ಯಗ್ವಿಶಾಲತೆ. |
| ಪಟಚ್ಚರಂಜೀರ್ಣವಸ್ತ್ರಂ | ಪಟಚ್ಚರಂ-ಜೀರ್ಣವಸ್ತ್ರಂ-ನ-೦-ಹಳೇಬಟ್ಟೆ, ಹರುಕಿಲ್ಲದ ಬಲವಿಲ್ಲದ ಹಳೇಬಟ್ಟೆ. |
| ಸಮೌನಕ್ತಕಕರ್ಪಟೌ॥ | ನಕ್ತಕಃ-ಕರ್ಪಟಃ-ಪು-೦- ಹರುಕುಬಟ್ಟೆ,ಚಿಂದೀಬಟ್ಟೆ,ಇದು ಕೊಳೆಯುಳ್ಳಬಟ್ಟೆಗೂ ಹೆಸರು. |
| ವಸ್ತ್ರಮಾಚ್ಛಾದನಂವಾಸಶ್ಚೈಲಂವಸನಮಂಶುಕಂ। | ವಸ್ತ್ರಂ-ಆಚ್ಛಾದನಂ-ವಾಸಃ-ಸ-ಚೇಲಂ-ವಸನಂ-ಅಂಶುಕಂ-ನ-೬- ಸಾಮಾನ್ಯವಾಗಿ ಬಟ್ಟೆಗೆಹೆಸರು. ಉಡುವ ಧೋತ್ರ, ಸೀರೆ, ಪಂಚೆ, ಕಣಿ. |

| | |
|---|---|
| ಸುಚೆಲಕಃಪಟೋ(ಸ್ತ್ರೀಸ್ಯಾ!) | ಸುಚೇಲಕಃ-ಪು-ಪಟಃ-ಪ್ಪ-೨-ವಳ್ಳಿಸೀರೆ, ಮೇಲುಶೀರೆ, ಮೇಲುಧೋತ್ರ, ಮೇಲುಬಟ್ಟೆ, ಉತ್ತಮವಸ್ತ್ರ. |
| ದ್ವರಾಶಿಃಸ್ಥೂಲಶಾಟಕಃ | ವರಾಶಿಃ-ಪಾ-ವರಾಸಿಃ-ಸ್ಥೂಲಶಾಟಕಃ-ಪು-೩-ಧಪ್ಪವಾದ ಖಾದೀಬಟ್ಟೆ, ಹಚ್ಚಡಬಟ್ಟೆ, ಹಚ್ಚಡದಗಿಂಟ, ಕಚರಾದುಪ್ಪಟ್ಟಿ, ಸಾದಾಸೀರೆ, ಪರದೇ ಘಾಡಾಬಟ್ಟೆ, ಗುಡರಕ್ಕೆತಕ್ಕ ದುಪ್ಪಟ್ಟೆ, ಸಾರ್ಟೀ ಮುಂತಾದದ್ದು. |
| ನಿಚೋಳಃಪ್ರಚ್ಛದಪಟಃ | ನಿಚೋಳಃ-ಪ್ರಚ್ಛದಪಟಃ-ಪು-೨-ಮೇಲುಹಾಸಿಗೆ, ಹಾಸಿಗೇಮೇಲೆ ಹಾಸುವಸಣ್ಣದುಬಟ್ಟೆ. |
| ಸಮೌರಲ್ಲಕಕಂಬಳೌ | ರಲ್ಲಕಃ-ಕಂಬಳಃ-ಪು-೨--ಕಂಬಳಿಹೆಸರು. ರತ್ನಕಂಬಳಿ ಉಜ್ಜಾಕಂಬಳಿ ಸಣ್ಣಕಂಬಳಿ ಮುಂತಾದ್ದು. |
| ಅಂತರೀಯೋಪಸಂವ್ಯಾನಪರಿಧಾನಾನ್ಯಧೋಂಶುಕೇ। | ಅಂತರೀಯಂ- ಉಪಸಂವ್ಯಾನಂ-ಪರಿಧಾನಂ-ಅಧೋಂಶುಕಂ-ನ-೪--ಉಟ್ಟುಕೊಳ್ಳುವದಕ್ಕಾಗಿ ಮಾಡಲ್ಪಟ್ಟ ಬಟ್ಟೆ, ಉಟ್ಟಿರುವ ಸೀರೆ, ಧೋತ್ರ ಮುಂತಾದ್ದು. |
| (ದ್ವೌ)ಪ್ರಾವಾರೋತ್ತರಾಸಂಗೌಸಮೌಬೃಹತಿಕಾತಥಾ।ಸಂವ್ಯಾನಮುತ್ತರೀಯಂಚ | ಪ್ರಾವಾರಃ-ಉತ್ತರಾಸಂಗಃ-ಪು-ಬೃಹತಿಕಾ-ಸ್ತ್ರೀ- ಸಂವ್ಯಾನಂ- ಉತ್ತರೀಯಂ-ನ-೫-ಉತ್ತರೀಯದ ಹೆಸರು. ಮೈ ಮೇಲೆ ಹೊದ್ದಿರುವ ವಸ್ತ್ರ, ಪೊದೆದ ಪಾವಡೆ, ಹೊದ್ದಂಗವಸ್ತ್ರ, ಮೇಲುಹೊದಿಕೆ. ಮೇಲುಮುಸುಕು. |
| ಚೋಳಃಕೂರ್ಪಾಸಕೋಸ್ತ್ರಿಯಾಂ | ಚೋಳಃ-ಪು- ಕೂರ್ಪಾಸಕಃ-ಪ್ಪ-೨-ಸ್ತ್ರೀಪುರುಷರ ಕುಬುಸಗಳ ಹೆಸರು. ಗಂಡುಸರ ಕವಚದಅಂಗಿಗೂ ಹೆಂಗಳಕುಬುಸಕ್ಕೂ ಹೆಸರು. |
| ನಿಶಾರಸ್ಸು ಪ್ರಾವರಣೆಹಿಮಾನಿಲನಿವಾರಣೆ ॥೩೭೪॥ | ನಿಶಾರಃ-ಪು-೧-ಹಿಮಾನಿಲನಿವಾರಣಪ್ರಾವರಣೆ-ಮಂಜು, ಗಾಳಿ, ಇವುಗಳಬಾಧೆಯ |

ನ್ನು ಪರಿಹರಿಸುವ ಹಚ್ಚಡ ಮುಂತಾದವಸ್ತ್ರ ವಿಶೇಷದ ಹೆಸರು.

(ಅರ್ಧೋರುಕಂವರಸ್ತ್ರೀಣಾಂ ಸ್ಯಾ)ಚ್ಚಂಡಾತಕ(ಮಂಶುಕಂ।)

ಚಂಡಾತಕಂ-ಸ- ಪಾ-ಪು-೧-ವರಸ್ತ್ರೀಣಾಂ ಅರ್ಧೋರುಕಂ ಅಂಶುಕಂ-ಸೂಳೆಯರ ಅರತೊಡೆಗಳವರಿಗೂ ಮುಚ್ಚುವಬಟ್ಟೆ,ಆರತೊಡೆಚಲ್ಲಣ,ಚಡ್ಡಿ, ಅರ್ಧಪಾಯಿಜಾಮಾ, ಅರ್ಧ ಹಿಜಾರು.

(ಸ್ಯಾತ್ತ್ರಿ)) ಷ್ವಾಪ್ರಪದೀನಂ (ತತ್ಪ್ರಾಪ್ನೋತ್ಯಾ ಪ್ರಪದಂಹಿ ಯತ್) ॥೩೭॥

ಆಪ್ರಪದೀನಂ-ತ್ರಿ-೧-ಯತ್-ಆಪ್ರಪದಂ ಪ್ರಾಪ್ನೋತೀತತ್- ಯಾವವಸ್ತ್ರ ಪಾದದವರಿಗೂ ಯಿಳೇ ಬಿದ್ದುಯಿರುವದೋ ಅಂಥಾ ವಸ್ತ್ರದಹೆಸರು. ಅಂದರೆ ಕಶೇಪಾವಡೆ, ನಿಲುವಂಗಿ, ಹಿಜಾರು, ಮುಂತಾದ್ದು.

ಅಸ್ತ್ರೀ)ವಿತಾನಮುಲ್ಲೊಚೊ

ವಿತಾನಂ-ಪ್ನ-ಉಲ್ಲೊಚಃ-ಪಾ-ಉಲ್ಲಾಚಃ-ಪು-೧-ಮೇಲ್ಕಟ್ಟು-ವಸ್ತ್ರ ಭಾಡಿನೀವಸ್ತ್ರ-ಮನೇಮೇಲ್ಕಡೆಗೆ ಕಟ್ಟುವ ಚಿತ್ರದ ಬಟ್ಟೆ.

ದೂಷ್ಯಾದ್ಯಂವಸ್ತ್ರವೇಶ್ಮನಿ।

ದೂಷ್ಯಂ-ವಸ್ತ್ರವೇಶ್ಮ-ನ್-ನ-ಈ-೧-ವಸ್ತ್ರವೇಶ್ಮನಿ-೧ಬಟ್ಟೆಯಿಂದಕಟ್ಟಲ್ಪಟ್ಟಮನೆಗೆ ಹೆಸರುಗಳು, ಗುಡಾರ, ಗುಡಾರೆ,ಡೇರಾ, ಆದಿಶಬ್ದದಿಂದ ಪಟಕುಟೀರಾದಿ ಶಬ್ದಗಳೂ ಗುಡಾರಕ್ಕೆ ಹೆಸರುಗಳು.

ಪ್ರತೀಸೀರಾಯವನಿಕಾಸ್ಯಾತ್ತಿರಸ್ಕರಣೀ (ಚಸಾ ॥೩೮॥ ಪರಿಕರ್ಮಾಂಗ ಸಂಸ್ಕಾರಃ) ಸ್ಯಾ

ಪ್ರತೀಸಿರಾ-ಯವನಿಕಾ-ಪಾ-ಜವನಿಕಾ-ತಿರಸ್ಕರಣೀ-ಸ್ತ್ರೀ-೩-ತೆರೆಬಟ್ಟೆ, ಫರದೇ.

ಪರಿಕರ್ಮ-ನ್-ನ-ಅಂಗಸಂಸ್ಕಾರಃ-ಪು-೧-ಶರೀರದಮೇಲೆ ಉಜ್ಜಿ ತೊಳೆದು ಕೊಳೇ ಹೋಗಲಾಡಿಸಿ ಸೊಗಸು ಮಾಡುವಿಕೆ, ಪುಲಕಾಪು, ವಪ್ಪವಿಡುವಿಕೆ.

ನ್ಮಾರ್ಷ್ಟಿರ್ಮಾರ್ಜನಾಮೃಜಾ।

ಮಾರ್ಷ್ಟಿಃ-ಮಾರ್ಜನಾ-ಮೃಜಾ-ಸ್ತ್ರೀ-೩-ಶ್ರೀಗಂಧ, ಕುಂಕುಮಕೇಸರಿ, ಮುಂತಾದ ದ್ರವ್ಯಗಳನ್ನು ಮೈಗೆ ಹಾಕಿ ಉಜ್ಜಿ ತೊಳೆ ... ಕೊಳೇ ಹೋಗಲಾಡಿಸುವದಕ್ಕೆ

| | |
|---|---|
| | ಹೆಸರುಗಳು. |
| ಉದ್ವರ್ತನೋತ್ಸಾದನೆ(ದ್ವೆ ಸಮೆ) | ಉದ್ವರ್ತನಂ-ಉತ್ಸಾದನಂ- ನ-೨- ಶ ರುರ್ತಾೀ ಯಿಡುವದಕ್ಕೆ ಹೆಸರು, ಬಣ್ಣದ ಪುಡಿ,ಮೈಗೆಉಜ್ಜಿ ತೊಳೆಯುವ ಪುಡಿ. |
| ಆಪ್ಲಾವಆಪ್ಲವಃ ॥೩೮೧॥ ಸ್ನಾನಂ | ಆಪ್ಲಾವಃ-ಆಪ್ಲವಃ-ಪು-ಸ್ನಾನಂ-೩-ಸ್ನಾನದಹೆಸರು. ತಲೆಮುಂತಾದ ಸರ್ವಾಂಗವ ನ್ನು ನೀರಲ್ಲಿ ನೆನಸಿ ತೊಳೆಯುವಿಕೆ. |
| ಚರ್ಚಾತುಚರ್ಚಿಕ್ಯಂಸ್ಥಾನ ಕೋ | ಚರ್ಚಾ-ಸ್ತ್ರೀ-ಚರ್ಚಿಕ್ಯಂ -ಪಾ- ಚ ರ್ಚಿಕ್ಯಂ-ನ-ಸ್ಥಾನಕಃ-ಪು-೩- ಕುಂಕುಮ ಮುಂತಾದ ಅಂಗರಾಗದ ಹಿಟ್ಟಿಗೆ ಹೆಸರು. ಮೈಮಿಂಚುಪುಡಿ, ಮೈಗುಜ್ಜುವ ಗಂಧಪು ಡಿ, ಉದ್ವರ್ತನ ಚೂರ್ಣ, ಬುಕ್ಕೀಹಿಟ್ಟು. |
| ಥಪ್ರಬೋಧನಂ।ಅನುಬೋಧಃ | ಪ್ರಬೋಧನಂ-ನ-ಅನುಬೋಧಃ-ಪು-೨ ಸುಗಂಧದ್ರವ್ಯಗಳಲ್ಲಿ ಅಡಗಿಕೊಂಡಿರುವಪ ರಿಮಳಾದಿಗಳನ್ನು ಪ್ರಕಾಶ ಗೊಳಿಸುವತ್ತ ಲಾದ್ಯುತ್ತೇ ಜಕಸಾಮಗ್ರಿಯು ಹೆಸರು. |
| ಪತ್ರರೇಖಾ ಪತ್ರಾಂಗುಳಿ(ರಿ ಮೆಸಮೆ) ೩೮೨॥ | ಪತ್ರಲೇಖಾ-ಪಾ- ಪತ್ರರೇಖಾ-ಪತ್ರಾಂ ಗುಳಿಃ-ಸ್ತ್ರೀ-೨-ಸ್ತ್ರೀಯುಮೊಲೆಗಳು ಮುಂ ತಾದ ಅಂಗಗಳಲ್ಲಿ,ಕಸ್ತೂರಿಕೇಸರಿ, ಪಚ್ಚ ಕರ್ಪೂರ ಮುಂತಾದ ಪರಿಮಳದ ಬಣ್ಣಗ ಳಿಂದ ಬರೆಯಲ್ಪಡುವ ಮಕರಿಕಾಪತ್ರಾದಿ ಚಿತ್ರಗಳ ಹೆಸರುಗಳು. |
| ತಮಾಲಪತ್ರತಿಲಕಚಿತ್ರಕಾ ಣಿವಿಶೇಷಕಂ।( ದ್ವಿತೀಯಂಚತು ರೀಯಂಚ ನಸ್ತ್ರಿಯಾ ) | ತಮಾಲಪತ್ರಂ-ತಿಲಕಂ-ಚಿತ್ರಕಂ- ವಿಶೇ ಷಕಂ -೪- ಹಣೆಗಿಟ್ಟುಕೊಳ್ಳುವ ತಿಲಕ, ಬೊಟ್ಟು,ದ್ವಿತೀಯಂಚತುರೀಯಂ ಚನಸ್ತ್ರಿ ಯಾಂ-ತಿಲಕಃ-ವಿಶೇಷಕಃ - ಈ-೨-ಸ್ತ್ರೀ ಲಿಂಗವಲ್ಲ, ಪ್ನ-ಮಿಕ್ಕ ೨ ನ. |
| (ಮಥ)ಕುಂಕುಮಂ॥ ೩೮೩ ಕಾಶ್ಮೀರ ಜನ್ಮಾಗ್ನಿಶಿಖಂ ವರಂ ಬಾಹ್ಲೀಕಪೀತನೆ । ರಕ್ತಸಂ ಕೋಚಪಿಶುನಂಧೀರಲೋಹಿತಚಂ | ಕುಂಕುಮಂ-ಕಾಶ್ಮೀರಜನ್ಮ-ನ-ಅಗ್ನಿಶಿ ಖಂ-ವರಂ-ಬಾಹ್ಲೀಕಂ-ಪಾ-ಬಾಹ್ಲಿಕಂ-ಪೀ ತನಂ-ರಕ್ತಂ- ಸಂಕೋಚಪಿಶುನಂ-ಪಾ-ಸಂ ಕೋಚಪಿಶುನಂ- ಧೀರಂ-ಪಾ-ಧೀರಂ- |

ಬನಂ ॥೩೯೪॥

ಲೋಹಿತಂ-ಚಂದನಂ-ಪಾ- ಲೋಹಿತಚಂದನಂ-ನ-೧೧-ಕುಂಕುಮದ ಹುವ್ವಿನ ಹೆಸರುಗಳು, ಕುಂಕುಮ ಕೇಸರಿ.

ಲಾಕ್ಷಾರಾಕ್ಷಾಜತು(ಕ್ಲೀಬೆ) ಯಾವೋ ಲಕ್ತೋ ದ್ರುಮಾಮಯಃ।

ಲಾಕ್ಷಾ-ರಾಕ್ಷಾ-ಪಾ-ರಕ್ಷಾ-ಸ್ತ್ರೀ-ಜತು-ನ-ಯಾವಃ-ಅಲಕ್ತಃ- ದ್ರುಮಾಮಯಃ-ಪು-೬-ಅರಗಿನ ಹೆಸರುಗಳು, ಕೆಂಪರಗು, ಬಂಣದ ಅರಗು.

ಲವಂಗಂದೇವಕುಸುಮಂ ಶ್ರೀಸಂಜ್ಞ

ಲವಂಗಂ-ದೇವಕುಸುಮಂ-ಶ್ರೀಸಂಜ್ಞಂ-ನ-೩-ಲವಂಗದಹುವ್ವು, ಲವಂಗ.

(ಮಥ) ಜಾಪಕಂ॥೩೯೫॥ ಕಾಲೇಯಕಂಚಕಾಲಾನು ಸಾರ್ಯಂ (ಚಾ

ಜಾಪಕಂ-ಪಾ-ಜಾಮಕಂ-ಕಾಲೇಯಕಂ-ಕಾಲಾನುಸಾರ್ಯಂ-ನ-೩-ಕರೇಅಗರುಚಕ್ಕೆ, ಅಗರು ಗಂಧ, ಶ್ರೀಗಂಧಕ್ಕೂ ಹೆಸರು, ಕಪ್ಪಾದ ನಾನಾಬಗೆ ಸುಗಂಧ ದ್ರವ್ಯಗಳಿಗೂ ಹೆಸರುಗಳು.

ಥ) (ಸವರ್ಣಾರ್ಥಕಂ।) ವಂಶಕಾಗರುರಾಜಾರ್ಹ ಲೋಹಕೆ, ಮಿಜಜೋಂಗಕಂ ॥೩೯೬॥

ವಂಶಕಂ-ಪಾ-ವಂಶಿಕಂ-ಅಗುರು- ರಾಜಾರ್ಹಂ-ಲೋಹಂ-ಕ್ರಿಮಿಜಂ-ಜೋಂಗಕಂ- ನ ೬-ಅಗರುಗಂಧ,ಶ್ವೇತಾಗರು.

ಕಾಲಾಗರ್ವಗರುಃ

ಕಾಲಾಗರು-ನ-ಅಗರುಃ-ಪು-೧-ಕೃಷ್ಣಾಗರುಗಂಧ.

(ಸ್ಯಾತ್ತು)ಮಂಗಲ್ಯಂ (ಮಲ್ಲಿಗಂಧಿಯುಕ್।)

ಮಂಗಲ್ಯಂ-ನ-೧-ಮಲ್ಲಿಗಂಧಿಯುಕ್- ಮಲ್ಲಿಗೆಹುವ್ವಿನ ವಾಸನೆಯುಳ್ಳ ಕೃಷ್ಣಾಗರು ಹೆಸರು.

ಯಕ್ಷಧೂಪಸ್ಸರ್ಜ ರಸೋರಾಳಸ್ಸರ್ವರಸಾವಪಿ ॥೩೯೭॥ ಬಹುರೂಪೋ (ಪ್ಯ

ಯಕ್ಷಧೂಪಃ- ಸರ್ಜರಸಃ- ಆರಾಳಃ-ಪಾ-ರಾಳಃ-ಸರ್ವರಸಃ- ಬಹುರೂಪಃ-ಪು-೫-ಸಜ್ಜರಸದ ಹೆಸರುಗಳು.

ಥ)ವೃಕಧೂಪಕೃತ್ರಿಮಧೂಪಕೌ ।

ವೃಕಧೂಪಃ- ಕೃತ್ರಿಮಧೂಪಕಃ-ಪು-೨-ಅನೇಕಪರಿಮಳ ವಸ್ತುಗಳನ್ನು ಸೇರಿಸಿ ಮಾಡಿದ ಧೂಪಕ್ಕೆ ಹೆಸರುಗಳು.

ತುರುಷ್ಕಃ ಪಿಂಡಕಸ್ಸಿಲ್ಹೋ ಯಾವನೋಽಪ್ಯಥ

ತುರುಷ್ಕಃ-ಪಿಂಡಕಃ-ಸಿಲ್ಹಃ-ಯಾವನಃ-ಪು-೪-ಅರಬಿ ಸ್ಥಾನ ಯೆಂಬುವ ತುರುಕರ ಸೀಮೆಯಲ್ಲಿ ಹುಟ್ಟುವ ತದ್ದುಕಿನ ಮಡ್ಡಿ ಎಂ

ಬ ಧೂಪದ ಪೆಸರುಗಳು. ಅಂದುಗ ಬೋಂಕ ಎನ್ನುವರು. ಹಾಲುಮಡ್ಡಿ.

ಪಾಯಸಃ॥೩೮೮॥ ಶ್ರೀವಾಸೋವೃಕ್ಷಧೂಪೋಪಿ ಶ್ರೀವೇಷ್ಟಸರಳದ್ರವೌ ।

ಪಾಯಸಃ -ಶ್ರೀವಾಸಃ- ವೃಕ್ಷಧೂಪಃ-ಶ್ರೀವೇಷ್ಟಃ-ಸರಳ ದ್ರವಃ-ಪು -೫- ಸರಳ ದೇವದಾರು, ವೃಕ್ಷದ ಬೊಂಕೆ, ರ್‍ಯಾಳದ ಬೊಂಕೆ.

ಮೃಗನಾಭಿರ್ಮೃಗಮದಃಕಸ್ತೂರೀಚಾಥ

ಮೃಗನಾಭಿಃ- ಪ್ಸ-ಮೃಗಮದಃ-ಪ್ಸ-ಕಸ್ತೂರೀ-ಸ್ತ್ರೀ--೩-ಕಸ್ತೂರಿಯ ಪೆಸರುಗಳು. ಕತ್ತುರಿ.

ಕೋಲಕಂ ॥೩೮೯॥ ತಕ್ಕೋಲಕಂಕೋಶಫಲ

ಕೋಲಕಂ-ತಕ್ಕೋಲಕಂ-ಪಾ-ಕಕ್ಕೋಲಕಂ-ಪಾ-ಕಕ್ಕೋವಕಂ-ಕೋಶಫಲಂ-ನ-೩-ತಕ್ಕೋಲದಗಿಡ. ತಕ್ಕೋಲದಬೊಂಕೆ ತಕ್ಕೋಲದಫಲ- ಪರಿಮಳದ ಚಕ್ಕೇಮು.

(ಮಥ) ಕರ್ಪೂರ (ಮಸ್ತ್ರಿಯಾಂ।)ಘನಸಾರಶ್ಚಂದ್ರಸಂಜ್ಞಃ ಸ್ಸಿತಾಭ್ರೋಹಿಮವಾಲುಕಾ ॥

ಕರ್ಪೂರಃ-ಪ್ನ--ಘನಸಾರಃ- ಚಂದ್ರಸಂಜ್ಞಃ-ಸಿತಾಭ್ರಃ-ಪಾ--ಸಿತಾಭಃ-ಪು--ಹಿಮವಾಲುಕಾ-ಸ್ತ್ರೀ-೫-ಕರ್ಪೂರದಹೆಸರು.ಪಚ್ಚಕರ್ಪೂರ.

ಗಂಧಸಾರೋಮಲಯಜೋಭದ್ರಶ್ರೀಶ್ಚಂದನೊ (ಸ್ತ್ರಿಯಾಂ)

ಗಂಧಸಾರಃ- ಮಲಯಜಃ-ಭದ್ರಶ್ರೀಃ ಪು-ಚಂದನಃ-ಪ್ನ-೪-ಚಂದನದ ಗಿಡ. ಚಂದಣ.

ತೈಲಪರ್ಣಿಕಗೋಶೀರ್ಷೆ ಹರಿಚಂದನ (ಮಸ್ತ್ರಿಯಾಂ॥ )

ತೈಲಪರ್ಣಿಕಂ- ನ-೧--ಬಹಳ ತಂಪಾಗಿರುವಬಿಳೀಚಂದನವು-ಗೋಶೀರ್ಷಂ-ನ-೧ ಬಹಳಪರಿಮಳವುಳ್ಳ ಚಂದನ-ಹರಿಚಂದನಂ ನ-೧-ಮಾವಿನಹಂಣಿನವಾಸನೆಯುಳ್ಳ ಹಳದೀಚಂದನ ಈ-೩- ಅರಿಸಿನಬಣ್ಣದ ಚಂದನವೆಂದು ಕೆಲವರನ್ನುವರು.

ತಿಲಪರ್ಣೀ (ತು ) ಪತ್ರಾಂಗಂ ರಂಜನಂರಕ್ತಚಂದನಂ। ಕುಚಂದನಂ

ತಿಲಪರ್ಣೀ-ಸ್ತ್ರೀ-ಪಾ-ತಿಲಪರ್ಣೀ-ನ-ಪು-ಪತ್ರಾಂಗಂ - ರಂಜನಂ-ರಕ್ತಚಂದನಂ ಕುಚಂದನಂ-ನ-೫- ಕೆಂಪುಬಂಣದ ಚಂದನ ವೃಕ್ಷದಪೆಸರುಗಳು.



(ಚಾಥ)ಜಾತಿ ಕೋಶಜಾತಿಫ

ಜಾತಿಕೋಶಂ-ಜಾತಿಫಲಂ-ನ-೨-ಜಾಜಿ

ಲೆ(ಸವೆ) ॥೩೯೨॥

ಕಾಯಿಯು ಹೆಸರುಗಳು. ಜಾಕಾಯಿ.

(ಕರ್ಪೂರಾಗರು ಕಸ್ತೂರೀ ತಕ್ಕೊಲೈ) ರ್ಯಕ್ಷಕರ್ದಮಃ ।

ಯಕ್ಷಕರ್ದಮಃ- ಪು-೧--ಕರ್ಪೂರಾಗರು ಕಸ್ತೂರೀ ತಕ್ಕೋಲೈಃ-ಕರ್ಪೂರ ಅಗುರು ಕಸ್ಥೂರೀ ತಕ್ಕೋಲ ಈ ೪-ರಿಂದೊಡಗೂಡಿದ ಗಂಧ, ಪರಿಮಳದಹೆಸರು.

ಗಾತ್ರಾನುಲೆಪನೀವರ್ತಿರ್ವರ್ಣಕಂ (ಸ್ಯಾ) ದ್ವಿಲೆಪನಂ॥

ಗಾತ್ರಾನುಲೇಪನೀ-ವರ್ತಿಃ-ಸ್ತ್ರೀ-೨-ಸುಗಂಧ ದ್ರವ್ಯಗಳೆಲ್ಲವನ್ನೂ ಕುಟ್ಟಿ ಅರೆದಮುದ್ದೆ, ಗಂಧದಬಿಲ್ಲೆ, ವರ್ಣಕಂ- ವಿಲೇಪನಂ-ನ-೨-ಮೈಗೆ ಹಚ್ಚಿಕೊಳ್ಳುವದಕ್ಕಾಗಿ ತೆಯಿದ ಗಂಧದ ಹೆಸರು. ಈ೪-ಗಂಧದ ಮುದ್ದೆಗೆ ಹೆಸರುಗಳೆಂದು ಕೆಲವರಂದರು.

ಚೂರ್ಣಾನಿ ವಾಸಯೊಗಾ (ಸ್ಸ್ಯು)

ಚೂರ್ಣಂ-ನ--ವಾಸಯೋಗಃ-ಪು-೨-ಸುಗಂಧಪುಡಿಯು ಹೆಸರುಗಳು. ಗಂಧೊಡಿ-ಮೇಲು ಬುಕ್ಕಿ ಹಿಟ್ಟುಗೂಹೆಸರು.

ಭಾವಿತಂವಾಸಿತಂ(ತ್ರಿಷು)

ಭಾವಿತಂ-ವಾಸಿತಂ-ತ್ರಿ-೨-ವಾಸನೇಕಟ್ಟದ ವಸ್ತುವಿನ ಹೆಸರುಗಳು.

(ಸಂಸ್ಕಾರೂ ಗಂಧಮಾಲ್ಯಾದ್ಯೈರ್ಯಸ್ತ್ಯಾದೆ) ರಧಿವಾಸನಂ॥

ಅಧಿವಾಸನಂ-೧-ಗಂಧಮಾಲ್ಯಾದ್ಯೈಃವಸ್ತ್ರಾದೆಸ್ಸಂಸ್ಕಾರಃ-ವಸ್ತ್ರಪಾತ್ರ, ತಾಂಬೂಲ ಭೂಷಣ ಗೃಹಮಂಚಪೀಠಾದಿ ದ್ರವ್ಯಗಳಿಗೆ ಗಂಧಪುಷ್ಪ ಧೂಪ ತೈಲ ಲೇಪಾದಿಗಳಿಂದ ಪರಿಮಳ ಉಂಟಾಗುವಂತೆ ಸಂಬಂಧಪಡಿಸಿ ಸೊಗಸು ಮಾಡುವದಕ್ಕೆಹೆಸರು.

ಮಾಲ್ಯಂಮಾಲಾ ಸ್ರಜೌ (ಮೂರ್ಧ್ನಿ)

ಮಾಲ್ಯಂ-ನ-ಮಾಲಾ-ಸ್ರಕ್-ಜ್-ಸ್ತ್ರೀ-೩-ಮೂರ್ಧ್ನಿ ಸ್ರಜಃ-ಮಂಡೆಯೊಳಗಿರುವಹುವ್ವಿನ ದಂಡೆಗಳು. ಮುಡಿದಪೂಮಾಲೆಗಳು.

(ಕೆಶಮಧ್ಯೆತು)ಗರ್ಭಕಂ।

ಗರ್ಭಕಂ-ನ ಪು-೧-ಕೇಶಮಧ್ಯೇ-ತುರುಬು ಮುಂತಾದಕೇಶಪಾಶದ ನಡಿವೆ ಈಚಿಗೆ ಕಾಣದ ಹಾಗೆ ಮುಡುಕೊಂಡಿರುವ, ಹುವ್ವಿನ ಸರ

ಪ್ರಭ್ರಷ್ಟಕಂ (ಶಿಖಾಲಂಬಿ)

ಪ್ರಭ್ರಷ್ಟಕಂ-ನ-೧-ಶಿಖಾಲಂಬಿ- ಜುಟ್ಟಿನಲ್ಲಿ ನೇತಾಡುವ ಹುವ್ವಿನ ಸರ.

| | |
|---|---|
| (ಪುರೋನ್ಯಸ್ತಂ)ಲಲಾಮಕಂ॥ | ಲಲಾಮಕಂ-ನ-೧-ಪುರೋನ್ಯಸ್ತಂ-ಮುಖದಮೇಲೆ ಜೋಲಾಡುವಂತೆ ಮುಂದುಗಡೆಗೆ ಕಟ್ಟಿಕೊಂಡ ಹುವ್ವಿನಸರ. |
| ಪ್ರಾಲಂಬ (ಮೃಜುಲಂಬಿ ಸ್ಯಾತ್ಕಂಠಾ) | ಪ್ರಾಲಂಬಂ-ನ-೧-ಕಂಠಾತ್ಋಜುಲಂಬಿ-ಕತ್ತಿನಿಂದ ಎದೆಯಮೇಲೆ ನೆಟ್ಟಗೆಜೋಲಾಡುವಂತೆ ಹಾಕಿಕೊಂಡ ಹುವ್ವಿನಹಾರ ಪುಷ್ಪಮಾಲಿಕೆ. |
| ದ್ವೈಕಕ್ಷಕಂ ತುತತ್ ॥ ಯತ್ತಿರ್ಯಕ್ಕ್ಷಿಪ್ತಮುರಸಿ) | ವೈಕಕ್ಷಕಂ-ಪಾ- ವೈಕಕ್ಷ್ಯಕಂ- ನ-೧- ಉರಸಿತಿರ್ಯಕ್ಕ್ಷಿಪ್ತಂ-ವಕ್ಷಸ್ಥಲದಲ್ಲಿ ಜನಿವಾರದಹಾಗೆ ಅಡ್ಡವಾಗಿ ಕೊರಳಮೇಲಿಂದ ಹಾಕಿಕೊಳ್ಳಲ್ಪಟ್ಟ ಹುವ್ವಿನಹಾರ. |
| (ಶಿಖಾ) ಸ್ವಾಪೀಡಶೇಖರಾ ॥ | ಆಪೀಡಃ-ಶೇಖರಃ-ಪು-೧-ಶಿಖಾಸು-ಜುಟ್ಟುಗಂಟಿನಮೇಲೆ ಸುತ್ತಿಕೊಂಡಿರುವ ಹುವ್ವಿನಹಾರ,ಜಡೇಮೇಲೆ ಕಾಣುವಂತೆ ಮುಡುಕೊಂಡ ಹುವ್ವಿನ ಸರಗಳು. |
| ರಚನಾ (ಸ್ಯಾ) ತ್ಪರಿಸ್ಪಂದ | ರಚನಾ-ಸ್ತ್ರೀ- ಪರಿಸ್ಪಂದಃ-ಪು-೨-ಪುಷ್ಪಗಂಧತಾಂಬೂಲ ವಸ್ತ್ರಾಭರಣ ಧೂಪ ರಸವರ್ಣ ಚಿತ್ರಾದ್ಯಲಂಕಾರಗಳಲ್ಲಿ ಶೃಂಗಾರರಸಾನಂದ ವಿಶೇಷ ವೈಲಕ್ಷಣ್ಯ ಸ್ಫೂರ್ತಿಯುಂಟಾಗುವಂತೆ ಕೆಲಸದಲ್ಲಿ ಚಾತುರ್ಯವ ತೋರಿಸುವಿಕೆ. |
| ಆಭೋಗಃ (ಪರಿಪೂರ್ಣತಾ) | ಆಭೋಗಃ-ಪು-೧- ಪರಿಪೂರ್ಣತಾ-ಪದಾರ್ಥಗಳಿಗಾಗಲೀ-ಕೆಲಸಗಳಿಗಾಗಲಿ- ಗುಣಗಳಿಗಾಗಲೀ ಕೊರತೆಯಿಲ್ಲದೆ ಸಾಕಾದ ಮಟ್ಟಿಗೆ ತುಂಬಿ ಇರುವಿಕೆ. |
| ಉಪಧಾನಂ (ತೂ) ಪಬರ್ಹಃ | ಉಪಧಾನಂ-ನ-ಉಪಬರ್ಹಃ-ಪು-೨-ತಲೆದಿಂಬು. |
| ಶಯ್ಯಾಯಾಂಶಯನೀಯ(ವತ್)ಶಯನಂ | ಶಯ್ಯಾ-ಸ್ತ್ರೀ-ಶಯನೀಯಂ- ಶಯನಂ-ನ-೩-ಹಾಸಿಗೆ,ಜಾನ, ಸುಷುಪ್ತಿಗೆ, ಲೇಪು. |
| ಮಂಚಪರ್ಯಂಕಪಲ್ಯಂಕಾಃ ಖಟ್ವಯಾ(ಸಮಾಃ) | ಮಂಚಃ-ಪರ್ಯಂಕಃ-ಪಲ್ಯಂಕಃ-ಪು-ಖಟ್ವಾ-ಸ್ತ್ರೀ-೪-ಮಂಚ,ಪಟ್ಟೆಮಂಚ,ಶಪ್ರದ |

ಮಂಚ, ತೂಗು ಮಂಚ.

ಕಂತುಕಃಕಂದುಕೊ

ಕಂತುಕಃ-ಕಂದುಕಃ-ವಾ-ಕಂಡುಕಃ-ಪು-೨-ಚಂಡು, ಆಡುವ ಚಂಡು.

ದೀಪಃಪ್ರದೀಪಃ

ದೀಪಃ-ಪ್ರದೀಪಃ-ಪು-೨-ದೀವಿಗೆ-ಎಣ್ಣೆ ಬತ್ತೀ ದೀವಿಗೆ, ಕರ್ಪೂರದದೀವಿಗೆ, ಮ್ಯಾಣದ ಬತ್ತೀದೀವಿಗೆ.

ಪೀಠಮಾಸನಂ ॥೩೯೯॥

ಪೀಠಂ-ಆಸನಂ-ನ-೨-ಕೂಡುವಗದ್ದಿಗೆ, ಮಣೇ, ಪೀಠ, ಬೆಂಚು, ಕುರ್ಚಿ.

ಸಮುದ್ಗಕ ಸ್ಸಂಪುಟಕಃ

ಸಮುದ್ಗಕಃ-ಸಂಪುಟಕಃ-ಪು-೨-ಕರಾಟದಪೆಸರುಗಳು,ಭರಣಿ, ಸಂಪುಟ.

ಪ್ರತಿಗ್ರಾಹಃಪತದ್ಗ್ರಹಃ ।

ಪ್ರತಿಗ್ರಾಹಃ-ಪತದ್ಗ್ರಹಃ-ಪು-೨- ಪಡಿಗದಪೆಸರು, ಹಿಡಿದುತೆಗಿಯುವ ಸಾಧನವಿಶೇಷ.

ಪ್ರಸಾಧನೀಕಂಕತಿಕಾ

ಪ್ರಸಾಧನೀ-ಕಂಕತಿಕಾ-ಸ್ತ್ರೀ-೨- ಬಾಚಣಿಗೆ, ಕೂದಲೂ ಸಿಕ್ಕುಬಿಡಿಸುವ ಸಾಧನ, ಶೀರಣಿಗೆ.

ಪಿಷ್ಟಾತಃಪಟವಾಸಕಃ ॥

ಪಿಷ್ಟಾತಃ-ಪಟವಾಸಕಃ-ಪು-೨-ಬಟ್ಟೆಗಳಿಗೆ ಪರಿಮಳ ಕಟ್ಟುವ ಗಂಧ ದ್ರವ್ಯದ ಪೆಸರು.

ದರ್ಪಣೆಮುಕುರಾದರ್ಶೌ

ದರ್ಪಣಃ-ಮುಕುರಃ-ವಾ-ಮಕುರಃ-ಆದರ್ಶಃ-ಪು-೩-ಕನ್ನಡಿಯ ಹೆಸರುಗಳು.

ವ್ಯಜನಂತಾಳವೃಂತಕಂ।

ವ್ಯಜನಂ-ತಾಳವೃಂತಕಂ-ನ-೨- ಬೀಸಣಿಗೆ.

ಇತಿ ಮನುಷ್ಯವರ್ಗಃ.

ಮನುಷ್ಯವರ್ಗಃ ॥ ಮನುಷ್ಯರಿಂದೊಡಗೂಡಿದ ಪದಗಳ ಸಮೂಹವು, ಇತಿ- ಈ ಮೇರೆಮುಗಿದುದು.

—*—

—…॥*॥…—

ಸಂತತಿರ್ಗೋತ್ರಜನನಕುಲಾನ್ಯಭಿಜನಾನ್ವಯೌ ॥೪೦೦॥ವಂಶೋನ್ವವಾಯಸ್ಸಂತಾನೊ

ಸಂತತಿಃ-ಸ್ತ್ರೀ-ಗೋತ್ರಂ-ಜನನಂ-ಕುಲಂ-ನ-ಅಭಿಜನಃ- ಅನ್ವಯಃ-ವಂಶಃ-ಅನ್ವವಾಯಃ-ಸಂತಾನಃ-ಪು-೯- ಕುಲದ ಹೆಸರುಗಳು, ವಂಶ, ಗೋತ್ರ.

ವರ್ಣಾಃ(ಸ್ಯುಬ್ರಾಹ್ಮಣಾದಯಃ।)

ವರ್ಣಾಃ-ಪು-೧-ಬ್ರಾಹ್ಮಣಾದಯಃ-ಬ್ರಾಹ್ಮಣಾದ್ಯಂತಾದ ಜಾತಿಗಳು,ಬ್ರಹ್ಮವರ್ಣ, ಕ್ಷತ್ರಿಯವರ್ಣ, ವೈಶ್ಯವರ್ಣವುಂತಾಗಿ.

ರಾಜಬೀಜೀರಾಜವಂಶ್ಯೋ

ರಾಜಬೀಜೀ-ನ್-ರಾಜವಂಶ್ಯಃ-ಪು-೨ ರಾಜವಂಶದಲ್ಲಿ ಹುಟ್ಟಿದವನ ಹೆಸರುಗಳು, ರಾಜಪಿಂಡಿ, ಅರಸುಪಿಂಡಿ.

ಬೀಜ್ಯ(ಸ್ತುಕುಲಸಂಭವಃ।

ಬೀಜ್ಯಃ-ಕುಲಸಂಭವಃ-ಪು-೨-ಕುಲಸ್ಥನಹೆಸರು, ಯಾವದಾದರೂವಂದು ವಂಶದಲ್ಲಿ ಹುಟ್ಟಿದವನು.

ಮಹಾಕುಲಕುಲೀನಾರ್ಯಸಭ್ಯಸಜ್ಜನಸಾಧವಃ ।

ಮಹಾಕುಲಃ-ಕುಲೀನಃ-ಆರ್ಯಃ-ಸಭ್ಯಃ-ಸಜ್ಜನಃ-ಸಾಧುಃ-ಪು-೬ - ಒಳ್ಳೇ ಕುಲದಲ್ಲಿ ಹುಟ್ಟಿದವನು, ಪ್ರಸಿದ್ಧ, ಶುದ್ಧ, ಪ್ರಬಲ ಕುಲದಲ್ಲಿ ಹುಟ್ಟಿದವನು.

ಬ್ರಹ್ಮಚಾರೀ ಗೃಹೀವಾನಪ್ರಸ್ಥೋಭಿಕ್ಷು

ಬ್ರಹ್ಮಚಾರೀ-ಣ--ಗೃಹೀ-ಣ--ವಾನಪ್ರಸ್ಥಃ-ಭಿಕ್ಷುಃ-ಪು-ಈ ೪ ನ್ನು ಕ್ರಮವಾಗಿ ಮುಂಜಿಯಾಗಿ ಜಿತೇಂದ್ರಿಯತ್ವಾದಿ ಧರ್ಮವುಳ್ಳವನಿಗೂ, ಮದುವೆಯಾಗಿ ಯಜ್ಞಾದಿನಿರತನಿಗೂ, ಅರಣ್ಯದಲ್ಲಿ ತಪಸ್ಸುಮಾಡುವ ಸಪತ್ನೀಕನಿಗೂ, ಶಾಸ್ತ್ರೀಯವಾಗಿ ಸರ್ವಸಂಗವರ್ಜಿತನಾದ ವಿರಕ್ತನಿಗೂ ಬೇರೆಬೇರೆ ವೊಂದೊಂದು ಹೆಸರುಗಳು.

(ಶ್ಚತುಷ್ಟಯೇ ॥೪೦೦॥ ಆಶ್ರಮೋ(ಸ್ತ್ರೀ)

ಆಶ್ರಮಃ-ಪು-೧-ಚತುಷ್ಟಯೆ - ಬ್ರಹ್ಮಚರ್ಯಕ್ಕೂ ಗಾರ್ಹಸ್ಥ್ಯಕ್ಕೂ, ವಾನಪ್ರಸ್ಥತೆಗೂ, ಸನ್ಯಾಸಕ್ಕೂ ಹೆಸರು.

ದ್ವಿಜಾತ್ಯಗ್ರಜನ್ಮಭೂದೇವಬಾಡಬಾಃ । ವಿಪ್ರಶ್ಚ ಬ್ರಾಹ್ಮಣೋ

ದ್ವಿಜಾತಿಃ-ಅಗ್ರಜನ್ಮಾ-ನ್-ಭೂದೇವಃ-ಬಾಡಬಃ-ವಿಪ್ರಃ-ಬ್ರಾಹ್ಮಣಃ-ಪು-೬-ಬ್ರಾಹ್ಮಣನ ಹೆಸರುಗಳು. ಪಾರುವೈಯ್ಯ, ಭೂಮ್ಯ ದೇವರು.

(ಸೌ)ಷಟ್ಕರ್ಮಾ(ಯಾಗಾದಿಭಿರ್ಯುತಃ) ॥೪೦೩॥

ಷಟ್ಕರ್ಮಾ-ನ್-ಪು-೧--ಯಾಗಾದಿಭಿಃ-ಯಜನ ಯಾಜನಾ ಧ್ಯಯನಾಧ್ಯಾಪನದಾನ ಪ್ರತಿಗ್ರಹಗಳೆಂಬ-೬- ಕರ್ಮಗಳಿಂದು

ಯುತಃ-ಕೂಡಿದ,ಅಸೌ-ಈ ಬ್ರಾಹ್ಮಣನ ಹೆಸರು. ಶಿಷ್ಟದ್ವಿಜನು,ಕರ್ಮಠಬ್ರಾಹ್ಮಣನು

ವಿದ್ವಾನ್ವಿಪಶ್ಚಿದ್ದೋಷಜ್ಞ ಸ್ಸನ್ಸುಧೀಃಕೋವಿದೋಬುಧಃ। ಧೀರೋಮನೀಷೀಜ್ಞಃ ಪ್ರಾಜ್ಞ ಸ್ಸಂಖ್ಯಾವಾನ್ಪಂಡಿತಃ ಕವಿಃ॥ ಧೀಮಾಂತ್ಸೂರಿಃಕೃತೀಕೃಷ್ಟಿರ್ಲ ಬ್ಧವರ್ಣೋವಿಚಕ್ಷಣಃ। ದೂರದ ರ್ಶೀದೀರ್ಘದರ್ಶೀ

ವಿದ್ವಾನ್-ಸ್-ವಿಪಶ್ಚಿತ್-ತ್-ದೋಷಜ್ಞಃ-ಸತ್-ತ್-ಸುಧೀಃ-ಈ-ಕೋವಿದಃ- ಬುಧಃ-ಧೀರಃ-ಮನೀಷೀ-ನ್-ಜ್ಞಃ-ಪ್ರಾಜ್ಞಃ - ಸಂಖ್ಯಾವಾನ್-ತ್-ಪಂಡಿತಃ-ಕವಿಃ-ಧೀಮಾನ್-ತ್-ಸೂರಿಃ-ಇ-ಮಾ-ಸೂರೀ-ಈ-ಕೃತೀ-ನ್-ಕೃಷ್ಟಿಃ-ಲಬ್ಧವರ್ಣಃ-ವಿಚಕ್ಷಣಃ-ಪು-೨೦-ವಿದ್ವಾಂಸನ ಹೆಸರುಗಳು. ದೂರದರ್ಶಿ-ನ್ ೧-ದೀರ್ಘದರ್ಶೀ-ನ್-೧-ಪು-ಈ ೨ ದೂರವಾದ ಹಿಂದು ಮುಂದು ಯೋಚನೆಯುಳ್ಳವನಹೆಸರು. ಈ ೨-ಅನುಮಾಪಕನಾದ ವಿದ್ವಾಂಸನ ಹೆಸರುಗಳೆಂದು ಕೆಲವರನ್ನುವರು.

ಶ್ರೋತ್ರಿಯ ಛಾಂದಸೌ (ಸಮೌ) ॥೪೦॥

ಶ್ರೋತ್ರಿಯಃ-ಛಾಂದಸಃ-ಪು-೨-ವೇದವನ್ನು ಓದಿದವನಹೆಸರು. ನಿಯಮಾಧ್ಯಯನಮಾಡಿದ ವಿಪ್ರನು.

ಉಪಾಧ್ಯಾಯೋಧ್ಯಾಪಕೋ

ಉಪಾಧ್ಯಾಯಃ- ಅಧ್ಯಾಪಕಃ-ಪು-೨-ವೇದವನ್ನು ಓದಿಸುವವನಹೆಸರು. ಅಧ್ಯಾಪಕ ಬ್ರಾಹ್ಮಣನಾದ ಉಪಾಧ್ಯ.

(ಥಸ್ಯಾನ್ನಿಷೆಕಾದಿಕೃ)ದ್ಗುರುಃ।

ಗುರುಃ-ಪು-೧-ನಿಷೇಕಾದಿಕೃತ - ನಿಷೇಕ, ಗರ್ಭಾಧಾನ, ಪುಂಸವನ, ಜಾತಕರ್ಮ, ನಾಮಕರಣಾದಿ ಸಂಸ್ಕಾರಗಳಿಂದ ತನ್ನನ್ನು ಪರಿಶುದ್ಧವಾಗಿ ಮಾಡಿ ಹೆತ್ತ ತಂದೆಯ ಹೆಸರುಗಳು.

(ಮಂತ್ರವ್ಯಾಖ್ಯಾಕೃ) ದಾಚಾರ್ಯ

ಆಚಾರ್ಯಃ-ಪು-೧- ಮಂತ್ರವ್ಯಾಖ್ಯಾಕೃತ-ಮಂತ್ರಗಳಿಗೆ ಅರ್ಥವನ್ನು ತಿಳಿಸಿಕರ್ಮ ಧರ್ಮಜ್ಞಾನಗಳನ್ನು ಕೋರಿದ ವಿದ್ಯಾಗುರುವಿನಹೆಸರು.

ಆದೇಷ್ಟಾ(ತ್ವಧ್ವರೆ)ವ್ರತಿ॥ ಯಷ್ಟಾ(ಚ) ಯಜಮಾನ (ಶ್ಚ)

ಆದೇಷ್ಟಾ-ಪು-ಋ-೧-ಅಧ್ವರೆ-ಯಜ್ಞ ವಿಷಯವಾಗಿ ಉಪದೇಶವನ್ನು ಮಾಡುವ

| | |
|---|---|
| | ಗುರುವಿನಹೆಸರು, ವ್ರತೀ-ನ್-೧- ಯಷ್ಟಾ-ಋ-೧-ಯಜಮಾನಃ-ಪು-೧-ಈ-೩-ಯಜ್ಞವನ್ನುಮಾಡಿದ ಯಜಮಾನನ ಹೆಸರುಗಳು. ೪ ಯಜ್ಞ ಮಾಡುವವನ ಹೆಸರುಗಳೆಂತಲು, ಕೆಲವರಂದರು. |
| (ಸವೋಮವತಿ) ದೀಕ್ಷಿತಃ. | ದೀಕ್ಷಿತಃ-ಪು-೧-ಸೋಮವತಿಸಃ-ಸೋಮಯಾಗದಲ್ಲಿ ಕರ್ತನಾದವನ ಹೆಸರು. ಸೋಮಯಾಜಿ. |
| (ಇಜ್ಯಾಶೀಲಃ) ಯಾಯಜೂಕಃ | ಯಾಯಜೂಕಃ-ಪು-೧-ಇಜ್ಯಾ ಶೀಲಃ-ಆಗಾಗ್ಯೆಯಜ್ಞಗಳನ್ನು ಮಾಡುತಲೇ ಯಿರುವ ಸ್ವಭಾವನುಳ್ಳವನ ಹೆಸರು. |
| ಯಜ್ವಾ(ತುವಿಧಿನೇಷ್ಟವಾನ್) | ಯಜ್ವಾ-ನ್-ಪು-೧-ವಿಧಿನಾ ಇಷ್ಟವಾನ್-ಯಥಾಶಾಸ್ತ್ರವಾಗಿ ಯಜ್ಞವನ್ನು ಮಾಡಿದವನ ಹೆಸರು. |
| (ಸಗೀಷ್ಪತೀಷ್ಟ್ಯಾ)ಸ್ಥಪತಿಃ | ಸ್ಥಪತಿಃ-ಪು-೧-ಗೀಷ್ಪತೀಷ್ಟ್ಯಾ-ಸಃ-ಬೃಹಸ್ಪತಿ ಸವನವೆಂಬ ಯಜನವನ್ನು ಮಾಡಿದವನ ಹೆಸರು. |
| ಸೋಮಪೀಥೀ(ತು) ಸೋಮಪಾಃ। | ಸೋಮಪೀಥೀ-ನ್-ಪಾ-ಸೋಮಪೀತೀ-ನ್-ಸೋಮಪಾಃ-ಪು-೨-ಯಜ್ಞದಲ್ಲಿ ಸೋಮಪಾನ ಮಾಡಿದ ಯಜಮಾನನ ಹೆಸರುಗಳು. ಸೋಮಪರಾದ ಋತ್ವಿಜರಿಗೂ ಹೆಸರೆಂದು ಕೆಲವರಂದರು. |
| ಸರ್ವವೇದಾ (ಸ್ಸಯೇನೇಷ್ಟೋ ಯಾಗಸ್ಸರ್ವಸ್ವದಕ್ಷಿಣಃ) | ಸರ್ವವೇದಾಃ-ಸ-ಪು-೧-ಸರ್ವಸ್ವದಕ್ಷಿಣಃ-ಸರ್ವಸ್ವ-ತನಿಗುಂಟಾದ ಸ್ವತ್ತುಗಳೆಲ್ಲವನ್ನೂ, ದಕ್ಷಿಣಃ-ದಾನದ್ರವ್ಯವಾಗಿ ಕೊಡತಕ್ಕ, ಯಾಗಃ- ವಿಶ್ವಜಿತ್ತು ಮೊದಲಾದ ಯಜ್ಞವು, ಯೇನ- ಯಾವ ಗ್ರಹಸ್ಥನಿಂದ-ಇಷ್ಟಃ-ಮಾಡಲ್ಪಟ್ಟಿತೋ, ಸಃ-ಅಂಥಾ ವಿಶ್ವಜಿದ್ಯಾಜಿಯ ಹೆಸರು. |
| ಅನೂಚಾನಃಪ್ರವಚನೇಸಾಂಗೇಧೀತೀಗುರೋಸ್ತುಯಃ। | ಅನೂಚಾನಃ-ಪು-೧-ಗುರೋಃ- ಸಾಂಗೆ ಪ್ರವಚನೇಸತಿ-ಅಧೀತೀಯಃ- ಗುರುವಿನ ಬ |

ೆ ಷಡಂಗ ಸಹಿತವಾಗಿ ವೇದವನ್ನು ಓದಿ ಕೊಂಡವನ ಹೆಸರು.

(ಲಬ್ಧಾನುಜ್ಞ)ಸ್ಸಮಾವೃತ್ತಃ

ಸಮಾವೃತ್ತಃ-ಪು-೧-ಲಬ್ಧಾನುಜ್ಞಃ-ವೇದಾಧ್ಯಯನವನ್ನು ಮಾಡಿದ ಬಳಿಕ ಮದುವೆ ಯಾಗುವದಕ್ಕೆ ಗುರುವಿನಿಂದ ಅಪ್ಪಣೆಯನ್ನು ಹೊಂದಿದವನು.

ಸ್ಸುತ್ವಾ(ತ್ವಭಿಷವಕೃತೀ।)

ಸುತ್ವಾನ್-ಪಾ- ಸುತ್ವಾ-ನ್-ಪು-೧-ಅಭಿಷವೆ-ಯಜ್ಞತಂತ್ರದಲ್ಲಿ, ಕೃತೀ-ಸೋಮಲತೆಯನ್ನು ಕುಟ್ಟುವದು ಮುಂತಾದವುಗಳ ಪ್ರಯತ್ನ ಚಾತುರ್ಯಗಳುಳ್ಳವನ ಹೆಸರು. ಸೋಮಪ್ರಮಾಥಿಯ ಹೆಸರು.

ಛಾತ್ರಾಂತೆವಾಸಿನೌಶಿಷ್ಯೇ

ಛಾತ್ರಃ-ಅಂತೇವಾಸೀ-ನ್-ಶಿಷ್ಯಃ-ಪು-೩-ಶಿಷ್ಯನ ಪೆಸರು. ವಿವೇಕ, ಆಚಾರ, ಪಾರಿಶುಧ್ಯ, ಪುಣ್ಯ, ಈ ಇನ್ನು ಪಡೆಯುವದಕ್ಕೋಸ್ಕರ ಗುರುವಿನ ಆಜ್ಞೆಗೆ ಬದ್ಧನಾಗಿ ಸೇವೆ ಮಾಡುವವನು, ಗುರುಕುಲವಾಸಿ.

ಶೈಕ್ಷಾಃಪ್ರಾಥಮಕಲ್ಪಿಕಾಃ।

ಶೈಕ್ಷಃ-ಪ್ರಾಥಮಕಲ್ಪಿಕಃ-ಪು-೨-ಪ್ರಥಮಶಿಕ್ಷೇವಿದ್ಯಾರ್ಥಿ, ಆಗತಾನೇ ಹೋದುವದಕ್ಕೆ ಆರಂಭಿಸಿದವನು.

(ಏಕಬ್ರಹ್ಮವ್ರತಾಚಾರಾಮಿಥ)ಸ್ಸಬ್ರಹ್ಮಚಾರಿಣಃ॥

ಸಬ್ರಹ್ಮಚಾರೀ-ನ್- ಪು-೧- ಏಕಬ್ರಹ್ಮವ್ರತಾಚಾರಾಮಿಥಃಸ್ಸ್ಯಾಃ-ವಂದು ಗುರಿವಿನೆ ಬಳೀ ವಂದು ವೇದವನ್ನು ವೋದುವದಕ್ಕೆ ವಂದೇ ವ್ರತವನ್ನು ಆಚರಿಸುವ ಅನೇಕ ಶಿಷ್ಯರೊಳಗೆ ಪರಸ್ಪರವಾಗಿ ಅವನಿಗೆ ಇವನು ಸಬ್ರಹ್ಮಚಾರಿ, ಇವನಿಗೆ ಅವನು ಸಬ್ರಹ್ಮಚಾರಿ ಯೆನ್ನಿಸಿಕೊಳ್ಳುವನು.

ಸತೀರ್ಥ್ಯಾ (ಸ್ತ್ವೇ)ಕಗುರವಃ

ಸತೀರ್ಥ್ಯಃ-ಏಕ ಗುರುಃ-ಪು-೨-ವಂದು ಗುರುವಿನ ಬಳಿಯಲ್ಲಿ ಯಾವ ಉತ್ತಮವಿದ್ಯೆಯನ್ನಾದರೂ ಓದಿ ಕಲಿತುಕೊಂಡವ, ರೊಳಗೊಬ್ಬರಿಗೊಬ್ಬರು ಸತೀರ್ಥ್ಯರು ತಮ್ಮೆಲ್ಲರಿಗೂ ಒಬ್ಬನೇ ಗುರುವಾಗಿ ಉ

ಳ್ಳವರು.

(ಚಿತವಾನಗ್ನಿಮಗ್ನಿ ಚಿತ।)

ಅಗ್ನಿಚಿತ್-ತ-ಪು-೧-ಅಗ್ನಿಃಚಿತವಾ- ಅಗ್ನಿಚಯನವನ್ನು ಮಾಡಿದವನು, ಚಿ ತಾಗ್ನಿ.

(ಪಾರಂಪರ್ಯೋಪದೇಶೆಸ್ಯಾ) ದೈತಿಹ್ಯಮಿತಿಹಾ (ವ್ಯಯಂ)

ಐತಿಹ್ಯಂ-ನ-ಇತಿಹಾ*ಅವ್ಯಯವೃ*- ಪಾರಂಪರ್ಯೋಪದೇಶೆ-ಗುರುಪರಮಗು ಪರಾಪರ ಗುರುಕ್ರಮದಿಂದ ಪರಂಪರೆ ಗಿ ನಂಬಿಕೆಯೊಡನೆ ರಹಸ್ಯವಾಗಿ ತಿಳಿಸ ಡುವ ಉಪದೇಶಕ್ಕೆ ಹೆಸರು. ಹಿರಿ ಹೇಳಿಕೇಯಿಂದ ನಂಬತಕ್ಕ ಕಥೆಗೂ ಸರು.

ಉಪಜ್ಞಾ ಜ್ಞಾನಮಾದ್ಯಂ (ಸ್ಯಾತ್)

ಉಪಜ್ಞಾ-ಸ್ತ್ರೀ-೧-ಆದ್ಯಂಜ್ಞಾನಂ ಪದೇಶವಿಲ್ಲದೆ ತಾನಾಗಿ ಮೊದಲು ಹುಟ್ಟಿ ತಿಳುವಳಿಕೆ ಎಲ್ಲರಿಗೂ ತಿಳಿದದಕ್ಕಿ ಮುಂಚೆ ಮೊದಲು ಒಬ್ಬನಿಗೆ ತಿಳಿದ ತಿ ವಳಿಕೆ.

ಜ್ಞಾತ್ವಾರಂಭ ಉಪಕ್ರಮಃ

ಉಪಕ್ರಮಃ-ಪು- ಜ್ಞಾತ್ವಾ-ಇದು ಮೇರೆ ಸಿದ್ಧಿಸುವದೆಂಬ ನಿರ್ದುಷ್ಟ ನಿಶ್ಚ ದಿಂದ ಆರಂಭಿಸುವಿಕೆ.

ಯಜ್ಞಸ್ಸವೊಧ್ವರೊಯಾಗ ಸ್ಸಪ್ತತಂತುರ್ಮಖಃಕ್ರತುಃ ।

ಯಜ್ಞಃ-ಸವಃ-ಅಧ್ವರಃ-ಯಾಗಃ-ಸಪ್ತ ತಂತುಃ-ಮಖಃ-ಪು-ಮಖಃ- ಕ್ರತುಃ-ಪು ೭-ಯಜ್ಞದ ಹೆಸರುಗಳು.

ಪಾಠೊಹೊಮಶ್ಚಾತಿಥೀನಾಂ ಸಪರ್ಯಾತರ್ಪಣಂಬಲಿಃ। ಏತೆಪಂ ಚಮಹಾ ಯಜ್ಞಾಬ್ರಹ್ಮಯ ಜ್ಞಾದಿನಾಮಕಾಃ ॥೪೧೩॥

ಪಾಠಃ-೧-ವೇದಪಾರಾಯಣ ಜಪಾದಿಗ ಳು, ಹೋಮಃ-೧-ಔಪಾಸನ ವೈಶ್ವದೇ ವಾದಿಗಳು, ಅತಿಥೀನಾಂಸಪರ್ಯಾ-೧-ಅತಿ ಗಳಿಗೆ ಅನ್ನದಾನಾದಿ ಸತ್ಕಾರ, ತರ್ಪಣಂ ೧-ಪಿತೃತರ್ಪಣಾದಿಗಳು, ಬಲಿಃ-೧ಭೂತ ಬಲಿ, ಏತೆ-ಈ ೫ ಬ್ರಹ್ಮ ಯಜ್ಞಾದಿ ನಾ ಮಕಾಃ-ಪಾಠವೇ ಬ್ರಹ್ಮಯಜ್ಞ, ಹೋ ಮವೇ ದೇವಯಜ್ಞ, ಸಪರ್ಯೆಯೇ ಮನು ಷ್ಯಯಜ್ಞ. ತರ್ಪಣವೇ ಪಿತೃ ಯಜ್ಞ

ಬಲಿಯೇ ಭೂತಯಜ್ಞ, ಈ ೫ ಪಂಚಮಹಾಯಜ್ಞಗಳ ಬೇರೆ ಬೇರೆ ಹೆಸರುಗಳು.

ಸಮಜ್ಯಾ ಪರಿಷದ್ಗೋಷ್ಠೀಸಭಾಸಮಿತಿಸಂಸದಃ । ಆಸ್ಥಾನೀ (ಕ್ಲೀಬ) ಮಾಸ್ಥಾನಂ (ಸ್ತ್ರೀನಪುಂಸಕಯೊಸ್ಸದಃ ॥೪೧೪॥

ಸಮಜ್ಯಾ-ಪರಿಷತ್-ದ್-ಗೋಷ್ಠೀ-ಸಭಾ-ಸಮಿತಿಃ-ಸಂಸತ್-ದ್-ಆಸ್ಥಾನೀ-ಸ್ತ್ರೀ-ಆಸ್ಥಾನಂ-ನ-ಸದಃ-ಸ-ಪ್ನ-೯-ಸಾಮಾನ್ಯವಾಗಿ ಸಭೆಗೆ ಹೆಸರುಗಳು, ನರಸಮಾಜ, ಆಸ್ಥಾನೀಶಬ್ದ ಮೊದಲಾದ[ಮೂರು]ಶಬ್ದಗಳೊ ರಾಜ ಸಭೆಗೆ ವಿಶೇಷ ನಾಮಂಗಳೆಂದು ಕೆಲವರಂದರು.

ಪ್ರಾಗ್ವಂಶಃ ಪ್ರಾಗ್ಘವಿರ್ಗೇಹಾ

ಪ್ರಾಗ್ವಂಶಃ-ಪು-೧-ಹವಿರ್ಗೇಹಾತ್- ಪ್ರಾಕ್-ಹವಿಸ್ಸೆಂಬ ಹೋಮದ್ರವ್ಯ ವಿರುವ ಮನೆಗಿಂತಲೂ ಮೂಡಲಲ್ಲಿ ಯಜಮಾನ ಮುಂತಾದವರಿಗಿರುವದಕ್ಕೆ ನಿರ್ಮಿಸಿದ ಮನೆಗೆಹೆಸರು. ಇದು ಯಜ್ಞಶಾಲೆಯೊಳಗೆಪ್ರಸಿದ್ಧ.

ತ್ಸದಸ್ಯಾವಿಧಿದರ್ಶಿನಃ ।

ಸದಸ್ಯಃ-ವಿಧಿದರ್ಶೀ-ನ್-ಪು-೨-ಯಜ್ಞದಲ್ಲಿ ಹೆಚ್ಚು ಕಡಿಮೆ ಬಾರದಂತೆ ಸರಿನೋಡುತ್ತಿರುವ ಋತ್ವಿಕ್ಕಿನ ಹೆಸರು.

ಸಭಾಸದ ಸ್ಸಭಾಸ್ತಾರಾಸ್ಸಭ್ಯಾಸ್ಸಾಮಾಜಿಕಾ(ಶ್ಚ ತೇ)೪೧೫

ಸಭಾಸತ್-ದ್--ಸಭಾಸ್ತಾರಃ- ಸಭ್ಯಃ-ಸಮಾಜಿಕಃ-ಪು-೪-ಸಭೆಯಲ್ಲಿರುವವರು. ಸಭೀಕರ ಹೆಸರುಗಳು.

ಅಧ್ವರ್ಯೂ ದ್ಗಾತೃಹೋತಾರೊ ( ಯಜುಸ್ಸಾಮರ್ಗ್ವಿದಃ ಕ್ರಮಾತ್। )

ಅಧ್ವರ್ಯುಃ- ಉದ್ಗಾತಾ-ಋ-ಹೋತಾ-ಋ-ಪು-ಈ೩ನ್ನ-ಕ್ರಮಾತ್-ಯಜುಸ್ಸಾಮರ್ಗ್ವಿದಃ-ಯಜುರ್ವೇದ ತಂತ್ರಜ್ಞನೇ ಅಧ್ವರ್ಯು, ಸಾಮ ಗಾನಜ್ಞನೇ ಉದ್ಗಾತೃ, ಋಗ್ವೇದ ಪ್ರಯೋಗಜ್ಞನೆ ಹೋತೃ,ಈ ಮೂವ್ವರೂ ಬೇರೆಬೇರೆ ಋತ್ವಿಜರು.

( ಆಗ್ನೀಧ್ರಾದ್ಯಾ ಧನ್ಯೈರ್ವರ್ಯಾ) ಋತ್ವಿಜೋಯಾಜಕಾ(ಶ್ಚ ತೇ) ॥೪೧೬॥

ಋತ್ವಿಕ್- ಜ್-ಯಾಜಕಃ-ಪು-ಧನ್ಯೈಃ-ವರ್ಯಾಃ - ಆಗ್ನೀಧ್ರಾದ್ಯಾಃ- ಯಜ್ಞ ಕರ್ತನಾದ ಯಜಮಾನನಿಂದ ಧನಾದಿ ದಕ್ಷಿಣೆಗಳಂ ಕೊಟ್ಟು ಅದಕ್ಕಾಗಿ ಈ ಕರ್ಮವನ್ನು [illegible] ಅಂಗೀಕರಿ

ಸಿ ವರಿಸಲ್ಪಡತಕ್ಕ ಆಗ್ನೀಧ್ರ ನೆಂಬುವನೇ ಮೊದಲಾದ ೧೬ ಮಂದಿ ಕರ್ಮದ ಅಂಶಿ ರ್ವಾಹಕರ್ತರ ಹೆಸರುಗಳು.

ವೇದಿಃ(ಪರಿಷ್ಕೃತಾಭೂಮಿಃ)

ವೇದಿಃ-ಪೂ-ವೇದಿ-ಸ್ತ್ರೀ-೧-ಪರಿಷ್ಕೃತಾ ಭೂಮಿಃ- ಯಜ್ಞ ಮಾಡುವದಕ್ಕೋಸ್ಕರ ಶಾಸ್ತ್ರಪ್ರಕಾರ ಶೋಧಿಸಿ ಸರಿಮಾಡಲ್ಪಟ್ಟ ನೆಲಕ್ಕೆ ಹೆಸರು. ಯಜ್ಞಕ್ಕೆ ತಕ್ಕದಾಗಿ ಮಾಡಲ್ಪಟ್ಟ ಶುದ್ಧ ಸ್ಥಲ ಪ್ರದೇಶ.

ಸಮೆ) ಸ್ಥಂಡಿಲಚತ್ವರೆ ।

ಸ್ಥಂಡಿಲಂ-ಚತ್ವರಂ-ನ-೨--ಅಗ್ನಿಹೋತ್ರವನ್ನು ಪ್ರತಿಷ್ಠೆಮಾಡತಕ್ಕಬಗ್ಯೆ ಸಂಸ್ಕರಿಸಲ್ಪಟ್ಟಸ್ಥಾನ. ಶುದ್ಧಸ್ಥಳ.

ಚಷಾಲೊಯೂಪಕಟಕಃ

ಚಷಾಲಃ-ಯೂಪಕಟಕಃ-ಪು-೨-ಯೂಪಸ್ತಂಭದಲ್ಲಿ ಮರದಿಂದ ಮಾಡಲ್ಪಟ್ಟಬಳೆ.

ಕುಂಬಾ(ಸುಗಹನಾವೃತಿಃ।)

ಕುಂಬಾ-ಸ್ತ್ರೀ-೧-ಸುಗಹನಾವೃತಿಃ-ಯಜ್ಞಶಾಲೆಯು ಮಟ್ಟಿಗೆ ಸುತ್ತಲೂ ಹಾಕಲ್ಪಟ್ಟ,ವೇಳೆಕ್ಕೆ ಪ್ರವೇಶಿಸುವದಕ್ಕೆ ಅಶಕ್ಯವಾದ ಬೇಲಿಯ ಹೆಸರು. ಮತ್ತು ಯಜ್ಞಶಾಲೆಯು ಮೇಲ್ಮುಚ್ಚಳಕ್ಕೂ ಹೆಸರೆಂದು ಕೆಲವರನ್ನುವರು.

(ಯೂಪಾಗ್ರಂ) ತರ್ಮ

ತರ್ಮ-ಸ-ನ-೧--ಯೂಪಾಗ್ರಂ-ಯೂಪಸ್ತಂಭದ ಕೊನೆಯಹೆಸರು.

(ನಿರ್ಮಂಥ್ಯ ದಾರುಣಿ) ತ್ವ ರಣಿ (ದ್ವಯೋಃ) ॥

ಅರಣಿಃ-ಪ್ಸ-೧-ನಿರ್ಮಂಥ್ಯ ದಾರುಣಿ-ಕಡದುವರೆಗೊಂಡು ಅಗ್ನಿಯುಂಹುಟ್ಟಿಸುವ ಅರಣಿಯೆಂಬ ಮರಕ್ಕೆ ಹೆಸರು.

ದಕ್ಷಿಣಾಗ್ನಿ ರ್ಗಾರ್ಹಪತ್ಯಾಹ ವನೀಯೌ (ತ್ರಯೋಗ್ನಯಃ) ॥

ದಕ್ಷಿಣಾಗ್ನಿಃ-ಗಾರ್ಹಪತ್ಯಃ- ಆಹವನೀಯಃ-ಪು-ಈ ೩ನ್ನು ತ್ರಯೋಗ್ನಯಃ-ಪ್ರತ್ಯೇಕವಾಗಿ ತಮ್ಮ ತಮ್ಮ ಹೆಸರುಗಳಿಂದ ಪ್ರಸಿದ್ಧಗಳಾದ ಮೂರು ಶ್ರೌತಾಗ್ನಿಗಳು.

( ಅಗ್ನಿತ್ರಯಮಿದಂ) ತ್ರೇತಾ

ತ್ರೇತಾ-ಸ್ತ್ರೀ-೧-ಇದಂ-ಇದು,ಅಗ್ನಿತ್ರಯಂ ಒಂದು ಮಾತಿನಿಂದ ಮೂರಗ್ನಿಗಳನ್ನು ಹೇಳುವಹೆಸರು. ೩-ಅಗ್ನಿಗಳಿಗೂ ೧ ಹೆಸರು.

ಪ್ರಣೀತ (ಸ್ಸಂಸ್ಕೃತೋನಲಃ)

ಪ್ರಣೀತಃ-ಪು-೧-ಸಂಸ್ಕೃತಃ-ಮಂತ್ರದಿಂದ ಸಂಸ್ಕರಿಸಲ್ಪಟ್ಟ ಹುತನಾದ ಅಗ್ನಿಗೆ ಹೆಸರು.

ಸಮೂಹ್ಯ ಪರಿಚಾಯ್ಯೋಪಚಾಯ್ಯಾ (ಅಗ್ನೌಪ್ರಯೋಗಿಣಃ) ॥೪೯॥

ಸಮೂಹ್ಯಃ- ಪರಿಚಾಯ್ಯಃ- ಉಪಚಾಯ್ಯಃ-ಪು-ಈ ಇನ್ನು-ಅಗ್ನೌ-ಯಜ್ಞಾಗ್ನಿಯಲ್ಲಿ,ಪ್ರಯೋಗಿಣಃ- ಪ್ರಯೋಗಿಸತಕ್ಕವರಹೆಸರುಗಳು. ಅಗ್ನಿಗೆ ಪರಿಷೇಚನ- ಪರಿಸ್ತರಣಾ ಲಂಕರಣಾದ್ಯು ಪಚಾರಗಳಂ ಮಾಡುವ ಋತ್ವಿಕ್ಕುಗಳು. ಮತ್ತು ಉಪಚಾರಗಳಿಗೂ ಹೆಸರುಗಳೆಂದು ಕೆಲವರಂದರು.

(ಯೋಗಾರ್ಹಪತ್ಯಾದಾನೀಯ ದಕ್ಷಿಣಾಗ್ನೌ ಪ್ರಣೀಯತೇ । ತಸ್ಮಿ) ನ್ನಾನಾಯ್ಯೋ

ಆನಾಯ್ಯಃ-ಪು-೧-ಗಾರ್ಹಪತ್ಯಾತ್-ಆನೀಯ ದಕ್ಷಿಣಾಗ್ನೌ ಪ್ರಣೀಯತೆಯಸ್ತಸ್ಮಿನ್-ಯಾವ ಅಗ್ನಿಯು ಆಹವನೀಯಸ್ಥಾನದಿಂದ ತೆಗದು ದಕ್ಷಿಣಾಗ್ನಿಯಲ್ಲಿ ಪ್ರಣಯನವೆಂದು ಸಂಸ್ಕರಿಸಲ್ಪಡುತ್ತೋ ಅಂಥಾ ಅಗ್ನಿಗೆ ಹೆಸರು.

(ಥಾ) ಗ್ನಾಯಿೀ ಸ್ವಾಹಾ (ಚ) ಹುತಭುಕ್ಪ್ರಿಯಾ॥೪೨೦॥

ಆಗ್ನಾಯಿೀ-ಸ್ವಾಹಾ-ಹುತಭುಕ್ಪ್ರಿಯಾ-ಸ್ತ್ರೀ-೩-ಅಗ್ನಿಹೋತ್ರನ ಹೆಂಡತಿಯಾದ ಸ್ವಾಹಾದೇವಿಯ ಹೆಸರುಗಳು.

(ಋು) ಕ್ಸಾಮಿಧೇನೀ ಧಾಯ್ಯಾ (ಚಯಾಸ್ಯಾದಗ್ನಿ ಸಮಿಂಧನೀ।

ಸಾಮಿಧೇನೀ- ಧಾಯ್ಯಾ-ಸ್ತ್ರೀ-೨- ಅಗ್ನಿಸಮಿಂಧನೀಋಕ್-ಅಗ್ನಿಯನ್ನುಮೊದಲುಪ್ರಜ್ವಲಿಸುವಹಾಗೆ ಮಾಡುವದಕ್ಕೆ ಹೇಳಬೇಕಾದ ವೇದಮಂತ್ರಕ್ಕೆ ಹೆಸರುಗಳು.

(ಗಾಯತ್ರೀಪ್ರಮುಖಂ)ಛಂದೋ

ಛಂದಃ-ಸ-ನ-೧-ಗಾಯತ್ರೀಪ್ರಮುಖಂ-ಗಾಯತ್ರೀ ಮುಂತಾದ ೨೬ ಛಂದಸ್ಸುಗಳಿಗೂ ಹೆಸರು.

(ಹವ್ಯಪಾಕೇ)ಚರುಃ(ಪುಮಾನ್)

ಚರುಃ-ಪು-೧- ಹವ್ಯಪಾಕೇ- ಹವ್ಯಅಗ್ನಿಯಲ್ಲಿ ಹೋಮಮಾಡತಕ್ಕ,ಪಾಕೇ-ಪಕ್ವಾನ್ನದಹೆಸರು.



ಆಮಿಕ್ಷಾ (ಸಾಶೃತೋಷ್ಣ

ಆಮಿಕ್ಷಾ-ಸ್ತ್ರೀ-೧-ಶೃತೋಷ್ಣೇ ಕ್ಷೀರೆ ದಧಿ

ಯಾ)ಕ್ಷೀರೆಸ್ಯಾದ್ದಧಿಯೊಗತಃ।

ಯೋಗತಃ - ಕಾಯಿಸಲ್ಪಟ್ಟ ಬಿಸಿಯಾದ ಹಾಲಿನಲ್ಲಿ ಮೊಸರುಸೇರಿ ಹೆಪ್ಪುಕಟ್ಟಿದ ದಂತೆ ಸಪ್ಪೆಯಾಗಿರುವದಕ್ಕೆ ಹೆಸರು.

ಧವಿತ್ರಂ ( ವ್ಯಜನೆಂತದ್ಯದ್ರಚಿತಂಮೃಗಚರ್ಮಣಾ) ॥೪೧॥

ಧವಿತ್ರಂ-ಪಾ-ಧುವಿತ್ರಂ-ನ-೧- ಮೃಗಚರ್ಮಣಾರಚಿತಂವ್ಯಜನಂಯುತ-ಯಜ್ಞದಲ್ಲಿ ಅಗ್ನಿಪ್ರಜ್ವಲನ ಮಾಡುವದಕ್ಕೋಸ್ಕರ ಕೃಷ್ಣಾಜಿನದಿಂದ ಮಾಡಲ್ಪಟ್ಟ ಬೀಸಣಿಗೆ ಹೆಸರು, ಹುಲ್ಲೇಚರ್ಮದಬೀಸಣಿಗೆ.

ಪೃಷದಾಜ್ಯಂ( ಸದಧ್ಯಾಜ್ಯೆ)

ಪೃಷದಾಜ್ಯಂ-ನ-೧-ಸದಧ್ಯಾಜ್ಯೆ-ಮೊಸರಿನಿಂ ದೊಡಗೂಡಿದ ತುಪ್ಪ, ಮೊಸರುಬೆರತತುಪ್ಪ.

ಪರಮಾನ್ನಂ (ತು) ಪಾಯಸಂ।

ಪರಮಾನ್ನಂ-ನ-ಪಾಯಸಂ- ನ-೩-ಸ್ಪ-ಷ್ಟ-ಹಾಲುಹಾಕಿ ಪಕ್ವವಾಗಿ ಅಡಿಗೆ ಮಾಡಿದ ಅನ್ನಕ್ಕೆ ಹೆಸರುಗಳು.

ಹವ್ಯಕವ್ಯೆ( ದೈವಪೈತ್ರೆ ಅನ್ನೆ)

ಹವ್ಯಂ-ಕವ್ಯಂ-ನ-೨-ದೈವಪೈತ್ರೆ-ದೇವ ಯೋಗ್ಯವಾದ ಅನ್ನಕ್ಕೆ ಹವ್ಯವೆಂತಲೂ ಪಿತೃ ಯೋಗ್ಯವಾದ ಅನ್ನಕ್ಕೆ ಕವ್ಯ ವೆಂತಲೂ ಹೆಸರುಗಳು.

ಪಾತ್ರಂ(ಸ್ರುವಾದಿಕಂ) ॥

ಪಾತ್ರಂ-ನ-೧-ಸ್ರುವಾದಿಕಂ- ಸ್ರುವವೆ ಮೊದಲಾದ ಯಜ್ಞಪಾತ್ರಗಳೆಲ್ಲಕ್ಕೂ ಹೆಸರು. ಸೌಟು, ಬಟ್ಟಲು, ಮಿಳ್ಳೆ, ಗಿಂಡಿ,ತಟ್ಟೆ, ಸ್ವಾಲಿ, ತಂಬಿಗೆ, ಮರಿಗೆ, ಪಾಳ, ತೊಳೆ, ಮುಂತಾದವುರದಲ್ಲಿ ಮಾಡಿದ ಯಜ್ಞ ಪಾತ್ರಗಳು.

ಧ್ರುವೋಪಭೃಜ್ಜುಹೂ( ನಾ ತು)ಸ್ರುವೋಭೇದಾಸ್ಸ್ರುಚಸ್ತ್ರಿಯಃ।

ಧ್ರುವಾ-ಉಪಭೃತ-ಜುಹೂಃ - ಸ್ತ್ರೀ ಸ್ರುವಃ-ಪು-೪-ಸ್ರುಚಃಭೇದಾಃ- ಸ್ರುಕ್ಕು ಯೆಂಬ ಆಜ್ಯಗ್ರಹಣ ಪಾತ್ರದ ಆಯಾನಾಮಗಳು, ೪ಬಗೇ ಸೃಕ್ಕುಗಳು.

ಉಪಾಕೃತಃ( ಪಶುರಸೌಯೊಭಿಮಂತ್ರ್ಯಕೃತೌಹತಃ॥೪೪॥)

ಉಪಾಕೃತಃ-ಪು-೧-ಕ್ರತಾವಭಿಮಂತ್ರ್ಯ ಹತೊಯೊಸೌಪಶುಃ-ಯಜ್ಞದಲ್ಲಿ ಮಂತ್ರದಿಂದಹೊಕ್ಕಿಸಲ್ಪಟ್ಟ ಶಾಸ್ತ್ರೋಕ್ತಪ

ಕಾರಕೊಲ್ಲಲ್ಪಟ್ಟ ಪಶುವಿನಹೆಸರು.

ಪರಂಪರಾಕಂ ಶಸನಂ ಪ್ರೋಕ್ಷಣಂ (ಚವಧಾರ್ಥಕಂ)

ಪರಂಪರಾಕಂ-ಶಸನಂ-ಪಾ - ಶಮನಂ-ಪ್ರೋಕ್ಷಣಂ-ನ-೨-ವಧಾರ್ಥಕಂ-ಯಜ್ಞದಲ್ಲಿ ವೇದೋಕ್ತಪ್ರಕಾರವಾಗಿ ಮಾಡುವ ಪಶು ವಿಶಸನವೆಂಬ ಶ್ರೌತ ಪಶುವಧೆ.

(ವಾಚ್ಯಲಿಂಗಾಃ) ಪ್ರಮೀತೋಪಸಂಪನ್ನಪ್ರೋಕ್ಷಿತಾ (ಹತೇ) ॥೮೨೫॥

ಪ್ರಮೀತಃ-ಉಪಸಂಪನ್ನಃ-ಪ್ರೋಕ್ಷಿತಃ-೩ಪು, ಹತೆ-ಯಜ್ಞದಲ್ಲಿ ಕೊಲ್ಲಲ್ಪಟ್ಟ ಪಶುವುಂತಾದವುಗಳ ಹೆಸರುಗಳು. ಈ೩, ವಾಚ್ಯಲಿಂಗಾಃ - ವಿಶೇಷ್ಯಲಿಂಗ ವುಳ್ಳವುಗಳು.

ಸಾನ್ನಾಯ್ಯಂಹವಿ

ಸಾಂನಾಯ್ಯಂ-ಹವಿಃ -ಸ-ನ-೨- ಅಗ್ನಿಯಲ್ಲಿ ಹೋಮಮಾಡತಕ್ಕ ಚರುಪುರೋಡಾಶಾದಿ ಹವಿಸ್ಸುಗಳಹೆಸರು, ಸಾಂನಾಯ್ಯಶಬ್ದವು ದಧಿಪಯೋರೂಪವಾದ ಹವಿಸ್ಸಿನ ಹೆಸರು.

(ರಗ್ನೌತುಹುತಂತ್ರಿಷು)ವಷಟ್ಕೃತಂ।

ವಷಟ್ಕೃತಂ-ತ್ರಿ-೧-ಅಗ್ನೌ - ಅಗ್ನಿಯಲ್ಲಿ,ಹುತಂ-ಹೋಮಮಾಡಲ್ಪಟ್ಟಿರುವ ಹವಿಸ್ಸಿನ ಹೆಸರು.

ದೀಕ್ಷಾಂತೋವಭೃಥೊ (ಯಜ್ಞೆ)

ದೀಕ್ಷಾಂತಃ-ಅವಭೃಥಃ-ಪು-೨-ಯಜ್ಞೇ-ಯಜ್ಞದಕೊನೆಯಲ್ಲಿ ನ್ಯೂನಾತಿರಿಕ್ತಾದಿಸರ್ವ ಪ್ರಾಯಶ್ಚಿತ್ತಾರ್ಥವಾಗಿಯೂ ಯಜ್ಞಸಂಪೂರ್ತಿಗಾಗಿಯೂ ಮಾಡಲ್ಪಡುವ ಅವಭೃಥೇಷ್ಟಿಸ್ನಾನದ ಹೆಸರುಗಳು.

(ತತ್ಕರ್ಮಾರ್ಹಂತು ಯಜ್ಞಿಯಂ॥೮೨೬॥(ತ್ರಿಷ್ವಥ ಕ್ರತುಕರ್ಮೇಷ್ಟಂ)

ಯಜ್ಞಿಯಂ-ತ್ರಿ-೧-ತತ್ಕರ್ಮಾರ್ಹಂ- ಆ ಯಜ್ಞಕರ್ಮಕ್ಕೆ ತಕ್ಕ ಯೋಗ್ಯವಾದ ವಸ್ತುವಿನ ಹೆಸರು.

ಇಷ್ಟಂ-ನ-೧-ಕ್ರತುಕರ್ಮ - ಯಜ್ಞದಲ್ಲಿ ಮಾಡಬೇಕಾದ ಸತ್ಕರ್ಮದಹೆಸರು.

ಪೂರ್ತಂ(ಖಾತಾದಿಕರ್ಮಯತ್)

ಪೂರ್ತಂ-ನ-೧-ಖಾತಾದಿ ಕರ್ಮಯತ್-ಭಾವಿ, ಕೆರೆ, ಗುಡಿ, ಛತ್ರ, ಅರೆ ಹೊಟ್ಟಿಗೆ, [illegible]ಕಾರ್ಯಗಳಹೆಸರು.

ಅಮೃತಂವಿಘಸೋ(ಯಜ್ಞಶೆ
ಷಭೋಜನಶೆಷಯೋಃ।)೪೨೭॥

ಅಮೃತಂ-ನ-ವಿಘಸಃ-ಪು-ಈ೨ ಶ ಷದಿಂದ ಯಜ್ಞಶೇಷಕ್ಕೂ ಭೋಜನಶೇ ಷಕ್ಕೂ ಹೆಸರುಗಳು. ಅಂದರೆ ಅಮೃತವೆಂ ದರೆ ಹೋಮವಾಗಿ ಸಂಸ್ಕೃತಾಜ್ಯ ಸ್ಥಾಲಿ ಮುಂತಾದವುಗಳಲ್ಲಿ ಮಿಕ್ಕ ಆಜ್ಯ ಚರು ಪು ರೋಡಾಶಾದಿಗಳ ಹೆಸರು. ವಿಘಸವೆಂ ದರೆ, ದೇವರ ನೈವೇದ್ಯವಾಗಿ ಬ್ರಾಹ್ಮಣ ಭೋಜನವಾಗಿ ಮಿಕ್ಕ ಶುದ್ಧಾನ್ನಾದಿಗ ಹೆಸರು.

ತ್ಯಾಗೊವಿಹಾಪಿತಂದಾನಮು
ತ್ಸರ್ಜನವಿಸರ್ಜನೆ । ವಿಶ್ರಾಣ
ನಂವಿತರಣಂಸ್ಪರ್ಶನಂ ಪ್ರತಿಪಾ
ದನಂ। ಪ್ರಾದೇಶನಂನಿರ್ವಪಣ
ಮಪವರ್ಜನಮಂಹತಿಃ।

ತ್ಯಾಗಃ-ಪು-ವಿಹಾಪಿತಂ-ಪಾ--ವಿಹಾಪಿ ತಂ-ದಾನಂ-ಉತ್ಸರ್ಜನಂ- ವಿಸರ್ಜನಂ-ವಿ ಶ್ರಾಣನಂ-ವಿತರಣಂ-ಸ್ಪರ್ಶನಂ-ಪ್ರತಿಪಾದ ನಂ-ಪ್ರಾದೇಶನಂ-ನಿರ್ವಪಣಂ-ಅಪವರ್ಜನ ಪಾ-ಅಪಸರ್ಜನಂ-ನ-ಅಂಹತಿಃ-ಸ್ತ್ರೀ-೧೩ ಕೊಡುವದಕ್ಕೆ ಹೆಸರುಗಳು. ಸತ್ಪಾತ್ರದ ಲ್ಲಿ ಶಾಸ್ತ್ರೋಕ್ತಪ್ರಕಾರ ತಾನಾಗಿ ಕೊಡು ವಿಕೆ. ತನ್ನವಡಿವೆಯನ್ನು ಪುಣ್ಯಕ್ಕಾಗಿ ಪ ತ್ತೊಬ್ಬರಿಗೆ ಕೊಟ್ಟು ತನ್ನ ಸ್ವತ್ವಸಂಬಂ ಧವನ್ನು ಬಿಡುವಿಕೆ.

(ಮೃತಾರ್ಥಂತದಹರ್ದಾನಂ
ತ್ರಿಷುಸ್ಯಾದೌರ್ಧ್ವದೈಹಿಕಂ।

ಔರ್ಧ್ವದೈಹಿಕಂ-ಪಾ-ಔರ್ಧ್ವದೇಹಿಕ- ತ್ರಿ-೧-ಮೃತಾರ್ಥಂ-ಸತ್ತುಹೋದವರಿಗೆ ಸ ದ್ಗತಿ ಯುಂಟಾಗುವದಕ್ಕಾಗಿ, ತದಹರ್ದಾ ನಂ-ಸತ್ತದಿನದಹಗಲಿನಲ್ಲೇ ಮಾಡಲ್ಪಡುವ ಶಾಸ್ತ್ರೀಯವಾದ ಅನ್ನದಾನ, ವಸ್ತ್ರದಾನ, ಮುಂತಾದ್ದಕ್ಕೆ ಹೆಸರು. ತಿಂಗಳ ಮಾಸಿಕ ದಲ್ಲಿಯೂ ಸಂವತ್ಸರ ಶ್ರಾದ್ಧದಲ್ಲಿಯೂ ಮಾ ಡಲ್ಪಡುವ ದಾನರೂಪವಾದ ಪಿತೃಕರ್ಮ ಕ್ಕೆ ಹೆಸರು.

ಪಿತೃದಾನಂನಿವಾಪಃ(ಸ್ಯಾತ್)

ನಿವಾಪಃ-ಪು-೧-ಪಿತೃದಾನಂ-ಪಿತೃ-ಪಿತೃ ತ್ವವನ್ನು ಹೊಂದಿದವರು, ತೃಪ್ತಿಪಡುವದ ಕ್ಕೋಸ್ಕರ ಮಾಡಲ್ಪಡುವ ದಾನಂ,ತಿಲೋ

ಶ್ರಾದ್ಧಂತತ್ಕರ್ಮಶಾಸ್ತ್ರತಃ।

ಕದ ಪಿಂಡಪ್ರದಾನಗಳ ಹೆಸರು.

ಶ್ರಾದ್ಧಂ-ನ-೧-ಶಾಸ್ತ್ರತಃ- ಕರ್ಮಯುತ್ತಿ-ದೇಶಕಾಲ ಪಾತ್ರಮಂತ್ರ ತಂತ್ರ ಕರ್ತೃಭೋಕ್ತೃಸ್ಪೃಹವ್ಯಕವ್ಯ ದ್ರವ್ಯಶುದ್ಧಾದಿ ನಿಯಮಂಗಳಿಂದ ಶಾಸ್ತ್ರೋಕ್ತ ಪ್ರಕಾರವಾಗಿ ಇದೇಪಿತೃಗಳಿಗೆ ಸದ್ಗತಿ ಸಾಧಕವಹುದೆಂಬ ನಂಬಿಕೆಯೊಡನೆ ಅವಶ್ಯಕವಾಗಿ ವಿಶ್ವಾಸದಿಂದ ಧಾರಾಳವಾಗಿ ಮಾಡತಕ್ಕ ಅಗ್ನೌಕರಣ ಬ್ರಾಹ್ಮಣಭೋಜನ ಪಿಂಡ ಪ್ರದಾನಾದಿ ರೂಪವಾದ ಪೈತೃಕ ಕರ್ಮಕ್ಕೆ ಹೆಸರು ತಿಥಿಪ್ರಸ್ತಿ, ಶ್ರಾದ್ಧ ಪ್ರಯೋಜನ.

ಅನ್ವಾಹಾರ್ಯಂಮಾಸಿಕೇಂ

ಅನ್ವಾಹಾರ್ಯಂ- ಮಾಸಿಕಂ-ನ-೨-ತಿಂಗಳು ತಿಂಗಳಿಗೂ ಮಾಡತಕ್ಕ ಪಿಂಡಪಿತೃಯಜ್ಞಕ್ಕೆ ಹೆಸರು. ದರ್ಶ ಶ್ರಾದ್ಧಕ್ಕೆ ಹೆಸರು. ಮಾಸಿಕಶ್ರಾದ್ಧಕ್ಕೂ ಹೆಸರು.

(ಸೋಽಷ್ಟಮೋಽಹ್ನಃ) ಕುತಪೋಸ್ತ್ರಿಯಾಂ ॥೪೩೦॥

ಕುತಪಃ-ಪ್ಪು-೧-ಅಹ್ನಃ-ಅಷ್ಟಮೋಂಶಃ ಅಹಃ- ಪರಿಮಾಣದಲ್ಲಿ ೮ ನೇ ಭಾಗಕ್ಕೆಹೆಸರು. ಅಂದರೆಅಹಸ್ಸನ್ನು ೧೫ ಪಾಲುಮಾಡಿ ೭ ಭಾಗ ಕಳದಮೇಲೆ ೮ನೇ ಭಾಗವೇ ಕುತಪಕಾಲವೆಂದು ಕೆಲವರು ಹೇಳಿದರು. ಈಕಲ್ಪದಲ್ಲಿ ಅಹಸ್ಸು ೩೦ ಘಳಿಗೆ ಆಗಿದ್ದಗೆ ೧೪ ಘಳಿಗೆಮ್ಯಾಲೆ ೧೬ ಘಳಿಗೆ ವರಿಗೂ ಕುತಪ ಕಾಲವಾಯಿತು. ಆವೇಳೆಗೆಅಪರಾಹ್ಣವೇ ಬಂದಿರುವದಿಲ್ಲವಾಗಿ ಅಂಥಾಕಲ್ಪವು ಯುಕ್ತವಲ್ಲ, ಮತ್ತೇನಂದರೆ ೩೦ ರನ್ನು ೮ ಪಾಲುಮಾಡಿದರ ಪಾಲು೧ಕ್ಕೆ ೩ ಆಯಿತು ೭ಭಾಗಕ್ಕೆ ೨೬ ಕಳೆದಮೇಲೆ ಸಾಯಂಕಾಲ೩೦ರ ವರಿಗೂ ಕುತಪಕಾಲವಾಗಿರುತ್ತೆ, ಇದೇ ಪಿಂಡಪ್ರದಾನಕ್ಕೆಯೋಗ್ಯವಾದ್ದು, ಕೆಲವರು ೧೨ ಪಾಲಿನಲ್ಲಿ ೮ ನೇ-ಭಾಗವೆಂದು,ಅಗ ೧೩ ಮೇಲೆ ೧೫ ವರಿಗೂ ಕುತ

(ಅವಾಚಿನಮೂಕೌಥ

ಮೂಕಃ-೧-ಅವಾಚಿ-ಮಾತಿಲ್ಲದ ಮೂಗನ ಹೆಸರು.

ಮನೋ ಜವಸಃಪಿತೃ ಸಂನಿಭಃ।)

ಮನೋಜವಸಃ-ಪು- ಮನೋಜವಾಃ-ಸ- ಮನೋಜವಃ-೧-ಪಿತೃಸನ್ನಿಭಃ- ತಂದೆಯನ್ನು ಹೋಲಿದವನ ಹೆಸರು.

ಸತ್ಕೃತ್ಯಾಲಂಕೃತಾಂಕನ್ಯಾಂ ಯೋದದಾತಿಸಕೂಕುದಃ ।

ಕೂಕುದಃ-೧-ಯಃ-ಯಾವನು, ಸತ್ಕೃತ್ಯ-ಸತ್ಕರಿಸಿ, ಅಲಂಕೃತಾಂ-ಅಲಂಕರಿಸಲ್ಪಟ್ಟ, ಕನ್ಯಾಂ-ಕನ್ಯೆಯನ್ನು, ದದಾತಿ-ದಾನಮಾಡುತ್ತಾನೋ, ಸಃ-ಅವನಹೆಸರು.

ಲಕ್ಷ್ಮೀವಾನ್ ಲಕ್ಷ್ಮಣಶ್ಶ್ರೀಲಶ್ರೀಮಾನ್

ಲಕ್ಷ್ಮೀವಾನ್-ತ-ಲಕ್ಷ್ಮಣಃ- ಶ್ರೀಲಃ-ಶ್ರೀಮಾನ್-ತ-೪-ಸಂಪತ್ತುಳ್ಳವನ ಹೆಸರು.

ಸ್ನಿಗ್ಧಸ್ತುವತ್ಸಲಃ ।

ಸ್ನಿಗ್ಧಃ-ವತ್ಸಲಃ-೧-ಸ್ನೇಹವುಳ್ಳವನ ಹೆಸರು.

(ಸ್ತ್ರೀ)ದ್ವಯಾಳುಃ ಕಾರುಣಿಕಃಕೃಪಾಳುಸ್ಸುರತಸ್ಸಮಾಃ॥

ದಯಾಳುಃ-ಕಾರುಣಿಕಃ- ಕೃಪಾಳುಃ-ಸುರತಃ-೪- ದಯೆಯುಳ್ಳವನ ಹೆಸರು.

ಸ್ವತಂತ್ರೋಪಾವೃತಸ್ಸ್ವೈರೀ ಸ್ವಚ್ಛಂದೋನಿರವಗ್ರಹಃ।

ಸ್ವತಂತ್ರಃ- ಅಪಾವೃತಃ--ಸ್ವೈರೀ-ನ--ಸ್ವಚ್ಛಂದಃ- ನಿರವಗ್ರಹಃ-೫- ಸ್ವತಂತ್ರನ ಹೆಸರುಗಳು.

ಪರತಂತ್ರಃಪರಾಧೀನಃ ಪರವಾನ್ನಾಥವಾನಪಿ॥ ಅಧೀನೋನಿಘ್ನಆಯತ್ತಃಸ್ವಚ್ಛಂದೋಗೃಹ್ಯಕೋ (ಪ್ಯಸೌ।)

ಪರತಂತ್ರಃ-ಪರಾಧೀನಃ-ಪರವಾನ್-ತ-ನಾಥವಾನ್-ತ-ಅಧೀನಃ-ನಿಘ್ನಃ-ಆಯತ್ತಃ ಸ್ವಚ್ಛಂದಃ- ಗೃಹ್ಯಕಃ- ೯- ಪರಾಧೀನನ ಹೆಸರು.

ಖಲಪೂಃ(ಸ್ಸ್ಯಾದ್ಬಹುಕರೋ)

ಖಲಪೂಃ-ಊ- ಬಹುಕರಃ-೨- ಕಣವನ್ನು ಗುಡಿಸುವವನು.

ದೀರ್ಘಸೂತ್ರಶ್ಚಿರಕ್ರಿಯಃ।

ದೀರ್ಘಸೂತ್ರಃ-ಚಿರಕ್ರಿಯಃ-೨-ವಿಚಾರಿಸಿ ಮೆಲ್ಲಗೆ ಕಾರ್ಯವನ್ನು ಮಾಡುವವನ ಹೆಸರು.

ಜಾಲ್ಮೋಸಮೀಕ್ಷ್ಯಕಾರೀ (ಸ್ಯಾ),

ಜಾಲ್ಮಃ-ಅಸಮೀಕ್ಷ್ಯಕಾರೀ-ನ-೨-ವಿಚಾರಿಸಿ ನೋಡದೇ ಕಾರ್ಯವನ್ನು ಮಾಡುವವನ ಹೆಸರುಗಳು. ಆತುರಗಾರ,

| | |
|---|---|
| ತ್ವಾಂತೋ(ಮಂದಃಕ್ರಿಯಾಸು ಯಃ) | ಕುಂತಃ- ೧-ಕ್ರಿಯಾಸು-ಕಾರ್ಯಗಳಲ್ಲಿ, ಯಃ-ಯಾವನು, ಮಂದಃ- ಆಲಸ್ಯವುಳ್ಳವ ನೋ ಅವನ ಹೆಸರು. |
| ಕರ್ಮಕ್ಷಮೋಲಂಕರ್ಮೀಣಃ | ಕರ್ಮಕ್ಷಮಃ- ಅಲಂಕರ್ಮೀಣಃ-೨-ಅ ನಾಯಾಸದಿಂದ ಕಾರ್ಯಮಾಡುವವನ ಹೆಸ ರು. ಕಾರ್ಯಸಮರ್ಥನು. |
| ಕ್ರಿಯಾವಾನ್(ಕರ್ಮಸೂದ್ಯ ತಃ) | ಕ್ರಿಯಾವಾನ್-ತ-೧-ಕರ್ಮಸುಉದ್ಯ ತಃ-ಕಾರ್ಯದಲ್ಲಿ ಉದ್ಯೋಗಿಸಿದವನ ಹೆ ಸರು. |
| ಸಕಾರ್ಮಃಕರ್ಮಶೀಲೋಯಃ | ಕಾರ್ಮಃ-ಕರ್ಮಶೀಲಃ-೨-ಫಲನ್ನಪೇಕ್ಷಿಸ ದೆ, ಕಾರ್ಯವನ್ನು ಮಾಡುವ ಸ್ವಭಾವವು ಳ್ಳವನ ಹೆಸರುಗಳು. |
| ಕರ್ಮಶೂರಸ್ತು ಕರ್ಮಠಃ॥ | ಕರ್ಮಶೂರಃ-ಕರ್ಮಠಃ-೨- ಫಲವಂ ಟಾಗುವವರೆಗೂ ಕಾರ್ಯವನ್ನು ಮಾಡುವವ ನ ಹೆಸರುಗಳು. |
| (ಕರ್ಮಣ್ಯಾಭುಕ್ಕರ್ಮಕರಃ) | ಕರ್ಮಣ್ಯಾಃ-ಅಂದರೆ, ಕೂಲಿ, ಅದರಂ ನ ತೆಗದುಕೊಂಡು ಕೆಲಸ ಮಾಡುವವನು ಕರ್ಮಣ್ಯಾಭುಕ್- ಅವನಿಗೆ ಕರ್ಮಕರನೆಂ ದುಹೆಸರು. ಕೆಲವರು ಕರ್ಮಕರನೆಂದರೆ, ಕೂಲಿಗೆ ಕೆಲಸ ಮಾಡುವವನು, ಅವನಿಗೆ ಕರ್ಮಣ್ಯಾಭುಕ್ಕೆಂದು ಹೆಸರೆಂದರು, ಕರ್ಮ ಣ್ಯಾಭುಕ್-ಜ- ಕರ್ಮಕರಃ-೨. |
| ಕರ್ಮಕಾರಸ್ತು ತತ್ಕ್ರಿಯಃ। | ತತ್ಕ್ರಿಯಃ- ತತ್ಕ್ರಿಯನೆಂದರೆ ಕೂಲಿಯಿ ಲ್ಲದೆ ಕೆಲಸ ಮಾಡುವನು ಅಂಥವನು ಕರ್ಮ ಕಾರನೆಂನಲ್ಪಡುವನು. ಕರ್ಮಕಾರಃ. |
| ಅಪಸ್ನಾತೋಮೃತಸ್ನಾತ | ಅಪಸ್ನಾತಃ-ಮೃತಸ್ನಾತಃ -೨-ಮರಣ ನಿಮಿತ್ತವಾಗಿ ಸ್ನಾನ ಮಾಡಿದವನ ಹೆಸರು. ಸಂಸ್ಕಾರಕ್ಕೋಸ್ಕರ ಸ್ನಾನ ಮಾಡಿಸಲ್ಪ ಟ್ಟಶವದ ಹೆಸರೆಂದು ಕೆಲವರು. |
| ಆಮಿಷಾಶೀತುಶೌಷ್ಕಲಃ। | ಆಮಿಷಾಶೀ-ನ-ಶೌಷ್ಕಲಃ-ಮಾ-ಶಾಷ್ಕ [illegible]ವ ಹೆಸರು. |

ಬುಭುಕ್ಷಿತ (ಸ್ಸ್ಯಾ) ತ್ಕ್ಷುಧಿತೋಜಿಘತ್ಸುರಶನಾಯಿತಃ ।

ಬುಭುಕ್ಷಿತಃ-ಕ್ಷುಧಿತಃ-ಜಿಘತ್ಸುಃ - ಅಶನಾಯಿತಃ-೪- ಹಸಿವುಗೊಂಡವನ ಹೆಸರು. ಹಸ್ತು ಇರುವವನು.

ಪರಾನ್ನಃಪರಪಿಂಡಾದೋ

ಪರಾನ್ನಃ-ಪರಪಿಂಡಾದಃ -೨- ಪರಾನ್ನವನ್ನು ಭೋಜನ ಮಾಡುವವನ ಹೆಸರು.

ಭಕ್ಷಕೋಘಸ್ಮರೋದ್ಮರಃ ।

ಭಕ್ಷಕಃ-ಘಸ್ಮರಃ- ಅದ್ಮರಃ-೩- ಬಹಳ ತಿಂಡಿ ತಿಂಬುವವನ ಹೆಸರು.

ಆದ್ಯೂನ ( ಸ್ಯಾ ) ದೌದರಿಕೋ(ವಿಜಿಗೀಷಾವಿವರ್ಜಿತೆ)

ಆದ್ಯೂನಃ-ಔದರಿಕಃ-೨-ಜಿಗೀಷೆಯುಂತಾದ ಬೇರೆ ಉದ್ಯೋಗ ವಿಲ್ಲದೆ ಹೊಟ್ಟೆ ಹೊರಕೊಂಬುವನ ಹೆಸರು.

(ಉಭೌ)ವಾತ್ಮಂಭರಿಃಕುಕ್ಷಿಂಭರಿ( ಸ್ವೋದರಪೂರಕೇ)

ಆತ್ಮಂಭರಿಃ-ಕುಕ್ಷಿಂಭರಿಃ-ಈ -೨-ನ್ನು ಪೋಷ್ಯವರ್ಗವನ್ನು ಬಿಟ್ಟು ಸ್ವೋದರ ಪೂರಕ್ಕೆ ತನ್ನ ಹೊಟ್ಟೆ ಹೊರಕೊಂಬುವವನ ಹೆಸರು.

ಸರ್ವಾನ್ನೀನಸ್ತು ಸರ್ವಾನ್ನಭೋಜೀ

ಸರ್ವಾನ್ನೀನಃ- ಸರ್ವಾನ್ನ ಭೋಜೀನ್-೨-ನಿಯಮವಿಲ್ಲದೆ ಯಲ್ಲಾ ಸ್ಥಳಗಳಲ್ಲಿಯೂ, ಭೋಜನ ಮಾಡುವವನ ಹೆಸರುಗಳು.

ಗೃಧ್ನುಸ್ತುಗರ್ಧನಃ ॥ ಲುಬ್ಧೋಭಿಲಾಷುಕಸ್ತೃಷ್ಣ

ಗೃಧ್ನುಃ-ಗರ್ಧನಃ-ಲುಬ್ಧಃ-ಅಭಿಲಾಷುಕಃ-ತೃಷ್ಣಕ್-ಜ್-೫-ಆಶೆಯುಳ್ಳವನ ಹೆಸರುಗಳು.

(ಕ್ಸನೌ) ಲೋಲುಪಲೋಲುಭೌ ।

ಲೋಲುಪಃ-ಲೋಲುಭಃ-೨-ಶಾನೆ ಆಶೆಯುಳ್ಳವನ ಹೆಸರು.

ಸೋನ್ಮಾದಸ್ತೂನ್ಮದಿಷ್ಣು (ಸ್ಸ್ಯಾ) ದವಿನೀತಸ್ಸಮುದ್ಧತಃ॥೨೨॥

ಸೋನ್ಮಾದಃ-ಉನ್ಮದಿಷ್ಣುಃ-೨- ಭೂತಾವೇಶಾದಿಗಳಿಂದ ಮರಳುಳ್ಳವನಹೆಸರು.

ಅವಿನೀತಃ-ಸಮುದ್ಧತಃ-೨- ವಿನಯವಿಲ್ಲದವನ ಹೆಸರು.

ಮತ್ತೆ ಶೌಂಡೋತ್ಕಟಕ್ಷೀಬಾಃ

ಮತ್ತಃ-ಶೌಂಡಃ-ಉತ್ಕಟಃ-ಕ್ಷೀಬಃ-೪- ಮದ್ಯಪಾನಾದಿಗಳಿಂದ ಮೈಮರತವನ ಹೆಸರುಗಳು.



ಕಾಮುಕೇಕಮಿತಾನುಕಃ ।

ಕಾಮುಕಃ-ಕಮಿತಾ-ಋ-ಅನುಕಃ-

| | |
|---|---|
| ಕಮ್ರಃ ಕಾಮಯಿತಾಭೀಕಃ ಕಮನಃ ಕಾಮನೋಭಿಕಃ ॥೨೪॥ | ಕಮ್ರಃ-ಕಾಮಯಿತಾ--ಋು-ಅಭೀಕಃ-ಕಮನಃ-ಕಾಮನಃ -ಅಭಿಕಃ- ೬- ಕಾಮುಕನ ಹೆಸರು. ಕೋರಿಕೆ ಯುಳ್ಳವನು, ನಾಯಕನು. |
| ವಿಧೇಯೋ ವಿನಯಗ್ರಾಹೀ | ವಿಧೇಯಃ-ವಿನಯಗ್ರಾಹೀ-ನ್-೨--ವಿನಯವುಳ್ಳವನ ಹೆಸರುಗಳು. |
| ವಚನೇಸ್ಥಿತಆಶ್ರವಃ । | ವಚನೇಸ್ಥಿತಃ-ಆಶ್ರವಃ-೨-ಹೇಳಿದ ಹಾಗೆ ಮಾಡುವವನ ಹೆಸರು. ಇವುಸ್ಸೂ ವಿನಯವುಳ್ಳವನ ಹೆಸರುಗಳೆಂದು ಕೆಲವರು. |
| ವಶ್ಯಃ ಪ್ರಣೇಯೋ | ವಶ್ಯಃ-ಪ್ರಣೇಯಃ-೨- ಔಷಧಾದಿಗಳಿಂದ ವಶ್ಯನಾದವನ ಹೆಸರು. ಇವುಸ್ಸೂ ವಿನಯವುಳ್ಳವನ ಹೆಸರೆಂದು ಕೆಲವರು. |
| ನಿಭೃತ ವಿನೀತಪ್ರಶ್ರಿತಾಸ್ಸಮಾಃ ॥೨೫॥ | ನಿಭೃತಃ-ವಿನೀತಃ-ಪ್ರಶ್ರಿತಃ-ಪು-ಪ್ರಸ್ತುತಃ-೩-ಶಿಕ್ಷಿಸಲ್ಪಟ್ಟವನ ಹೆಸರು. |
| ಧೃಷ್ಟೇಧೃಷ್ಣುರ್ವಿಯಾತಶ್ಚ | ಧೃಷ್ಟಃ-ಧೃಷ್ಣುಃ-ವಿಯಾತಃ-೩- ದಿಟ್ಟತನವುಳ್ಳವನ ಹೆಸರು. |
| ಪ್ರಗಲ್ಭಃ ಪ್ರತಿಭಾನ್ವಿತೇ । (ಸ್ತ್ರ್ಯ) | ಪ್ರಗಲ್ಭಃ-ಪ್ರತಿಭಾನ್ವಿತಃ-೨--ಆಗಾಗ್ಯೆ ಹೊಸಹೊಸದಾಗಿ ಪ್ರಕಾಶಿಸುವ ಪ್ರಜ್ಞೆಯುಳ್ಳವನ ಹೆಸರು. |
| ಅಧೃಷ್ಟಸ್ತು ಶಾಲೀನೋ | ಅಧೃಷ್ಟಃ-ಶಾಲೀನಃ-೨-ದಿಟ್ಟತನ ಇಲ್ಲದವನ ಹೆಸರು. |
| ವಿಲಕ್ಷೋವಿಸ್ಮಯಾನ್ವಿತೇ ॥ | ವಿಲಕ್ಷಃ-ವಿಸ್ಮಯಾನ್ವಿತಃ-೨-ಆಶ್ಚರ್ಯದಿಂದ ಪ್ರಕೃತಾರ್ಥಜ್ಞಾನವಿಲ್ಲದವನ ಹೆಸರು. |
| ಅಧೀರೇಕಾತರ | ಅಧೀರಃ-ಕಾತರಃ-೨-ವ್ಯಸನಾದಿಗಳಿಂದ ವ್ಯಾಕುಲಪಟ್ಟಂಥಾವನ ಹೆಸರು, ಅಂಜದವನ ಹೆಸರು. |
| ಸ್ತ್ರಸ್ನುರ್ಭೀರುರ್ಭೀರುಕಭೀಲುಕಾಃ । | ತ್ರಸ್ನುಃ-ಭೀರುಃ-ಭೀರುಕಃ-ಭೀಲುಕಃ ೪-ಹೆದರುವವನ ಹೆಸರು. ಭಯಪಡುವ ಪಿರಿತಿ. |
| ಆಶಂಸುರಾಶಂಸಿತರಿ | ಆಶಂಸುಃ-ಆಶಂಸಿತಾ-ಋು-೨-ಪ್ರಿಯವನ್ನು ವಿನಸ್ಸು ಬಯಸುವವನ ಹೆಸರು. |

ಗೃಹಯಾಳುರ್ಗೃಹೀತರೀ। | ಗೃಹಯಾಳುಃ-ಗೃಹೀತಾ-ಏಮು- ೨- ತೆ ಕೊಳ್ಳುಂಬುವ ಸ್ವಭಾವವುಳ್ಳವನ ಹೆಸರು.

ಶ್ರದ್ಧಾಳುಶ್ಶ್ರದ್ಧಯಾಯುಕ್ತೇ | ಶ್ರದ್ಧಾಳುಃ-೧-ಶ್ರದ್ಧಯಾ-ನಂಬಿಕೆಯಿಂ ದ್ಯಯುಕ್ತೆ-ಕೂಡಿರುವವನಲ್ಲಿ ವರ್ತಿಸುವದು.

ಪತಯಾಳುಸ್ತು ಪಾತುಕೆ | ಪತಯಾಳುಃ-ಪಾತುಕಃ-೨- ಬೀಳೋ ಸ್ವಭಾವ ಉಳ್ಳವನ ಹೆಸರು.

ಲಜ್ಜಾಶೀಲೆಪತ್ರಪಿಷ್ಣು | ಲಜ್ಜಾಶೀಲಃ-ಅಪತ್ರಪಿಷ್ಣುಃ-೨- ನಾಚಿ ಕೆಪಡೋ ಸ್ವಭಾವವುಳ್ಳವನಹೆಸರುಗಳು.

ರ್ವಂದಾರು ರಭಿವಾದಕೆ । | ವಂದಾರುಃ-ಅಭಿವಾದಕಃ-೨-ಮುಗಿಯು ವಸ್ವಭಾವ ವುಳ್ಳವನು. ಕೈ ಮುಗಿಯುವ ವನು, ನಮಸ್ಕರಿಸುವವನು.

ಶರಾರು ರ್ಘಾತುಕೊಹಿಂಸ್ರಃ | ಶರಾರುಃ-ಘಾತುಕಃ-ಹಿಂಸ್ರಃ-೩--ಕೊ ಲ್ಲುವ ಸ್ವಭಾವ ಉಳ್ಳವನ ಹೆಸರುಗಳು.

ಸ್ಯಾ(ದ್ವರ್ಧಿಷ್ಣುಸ್ತುವರ್ಧನಃ | ವರ್ಧಿಷ್ಣುಃ-ವರ್ಧನಃ -೨- ವೃದ್ಧಿಹೊಂ ದುವ ಸ್ವಭಾವವುಳ್ಳವನ ಹೆಸರುಗಳು.

ಉತ್ಪತಿಷ್ಣುಸ್ತೂತ್ಪತಿತಾ | ಉತ್ಪತಿಷ್ಣುಃ-ಉತ್ಪತಿತಾ-ಏಮು-೨-ಹಾ ರುವ ಸ್ವಭಾವವುಳ್ಳವನ ಹೆಸರುಗಳು.

ಲಂಕರಿಷ್ಣುಸ್ತು ಮಂಡನಃ। | ಅಲಂಕರಿಷ್ಣುಃ-ಮಂಡನಃ-೨- ಶೃಂಗಾ ರಿಸುವ ಸ್ವಭಾವವುಳ್ಳವನ ಹೆಸರು.

ಭೂಷ್ಣುರ್ಭ ವಿಷ್ಣುರ್ಭವಿತಾ | ಭೂಷ್ಣುಃ-ಭವಿಷ್ಣುಃ-ಭವಿತಾ - ಏಮು- ೩-ಆಗಹೋಗುವಾತನ ಹೆಸರು. ಭಾರಿಭಾ ರಿಗೂ ಹುಟ್ಟುವ ಸ್ವಭಾವ ವುಳ್ಳ ಕೇಶ ನ ಖಾದಿಗಳ ಹೆಸರೆಂದು ಕೆಲವರನ್ನುವರು.

ವರ್ತಿಷ್ಣುರ್ವರ್ತನ(ಸ್ಸಮೌ) | ವರ್ತಿಷ್ಣುಃ-ವರ್ತನಃ -೨- ವರ್ತಿಸುವ ಸ್ವಭಾವ ವುಳ್ಳವನ ಹೆಸರು. ಕಾಲಾದಿಗಳಿ ಗೆ ಹೆಸರುಗಳೆಂದು ಕೆಲವರು.

ನಿರಾಕರಿಷ್ಣುಃಕ್ಷಿಪ್ನುಃ(ಸ್ಯಾ) | ನಿರಾಕರಿಷ್ಣುಃ-ಕ್ಷಿಪ್ನುಃ-೨-ತಿರಸ್ಕರಿಸು ವ ಸ್ವಭಾವ ವುಳ್ಳವನ ಹೆಸರುಗಳು.

ತ್ಸಾಂದ್ರ ಸ್ಸ್ನಿಗ್ಧಸ್ತುಮೆದು | ಸಾಂದ್ರಃ-ಸ್ನಿಗ್ಧಃ-ಮೇದುರಃ-೩ - ದ ಪ್ಪಾಗಿಯೂ ಗುಂಪಾಗಿಯೂ ಇರುವದರ ಹೆಸರು.

| | |
|---|---|
| ಜ್ಞಾತಾತು ವಿದುರೋವಿಂದು | ಜ್ಞಾತಾ-ಋು- ವಿದುರಃ-ವಿಂದುಃ-೩- ತಿಳಿಯುವ ಸ್ವಭಾವವುಳ್ಳವನ ಪೆಸರುಗಳು. |
| ರ್ವಿಕಾಸೀತು ವಿಕಸ್ವರಃ । | ವಿಕಾಸೀ-ನ್-ವಿಕಸ್ವರಃ-೨- ವಿಕಸಿಸುವಸ್ವಭಾವವುಳ್ಳದ್ದು, ಅರಳುವಂಥಾದ್ದು. |
| ವಿಸೃತ್ವರೋ ವಿಸ್ರ ಮರಃಪ್ರಸಾರೀಚವಿಸಾರಿಣಿ ॥ | ವಿಸೃತ್ವರಃ-ವಿಸ್ರಮರಃ-ಪ್ರಸಾರೀ-ನ್-ವಿಸಾರಿ-ನ್-೪-ನೆರೆಯುವ ಸ್ವಭಾವವುಳ್ಳನೀರ ಮೇಲಿನ ತೈಲ ಬಿಂದು ಮೊದಲಾದದರ ಪೆಸರು. ಹರಿಡಿಕೊಳ್ಳುವದು. |
| ಸಹಿಷ್ಣು ಸ್ಸಹನಃಕ್ಷಂತಾತಿತಿಕ್ಷುಃ ಕ್ಷಮಿತಾಕ್ಷಮೀ । | ಸಹಿಷ್ಣು ಃ-ಸಹನಃ-ಕ್ಷಂತಾ-ಋು - ತಿತಿಕ್ಷುಃ-ಕ್ಷಮಿತಾ-ಋು-ಕ್ಷಮೀ-ನ್-೬-ಸ್ವಭಾವದಿಂದ ಸೈರಣೆಯುಳ್ಳವನು. |
| ಕ್ರೋಧನೋ ಮರ್ಷಣಃ ಕೋಪೀ | ಕ್ರೋಧನಃ-ಅಮರ್ಷಣಃ-ಕೋಪೀ-ನ್-೩-ಸಹಜವಾದ ಸಿಟ್ಟು ವುಳ್ಳವನ ಪೆಸರುಗಳು. ಮುಂಗೋಪಿ. |
| ಚಂಡಸ್ತ್ವತ್ಯಂತಕೋಪನಃ। | ಚಂಡಃ-ಅತ್ಯಂತಕೋಪನಃ-೨-ಬಹಳ ಸಿಟ್ಟುಗಾರ. |
| ಜಾಗರೂಕೋ ಜಾಗರಿತಾ | ಜಾಗರೂಕಃ-ಜಾಗರಿತಾ-ಋು-೨- ಎಚ್ಚರಿಕೆಯುಳ್ಳವನು. |
| ಘೂರ್ಣಿತಃಪ್ರಚಲಾಯಿತಃ ॥ | ಘೂರ್ಣಿತಃ-ಪ್ರಚಲಾಯಿತಃ-೨- ತೂಕಡಿಕೆಯಿಂದ ತಲೆತಿರುಗಿ ಬೀಳುವವನ ಪೆಸರು. |
| ಸ್ವಪ್ನಕ್ಶಯಾಳುರ್ನಿದ್ರಾಳು | ಸ್ವಪ್ನ-ಕ್-ಜ್-ಶಯಾಳುಃ- ನಿದ್ರಾಳುಃ-೩-ನಿದ್ರೆಗೈಯ್ಯುವ ಸ್ವಭಾವವುಳ್ಳವನ ಪೆಸರುಗಳು. |
| ರ್ನಿದ್ರಾಣ ಶ್ಶಯಿತೌಸಮೌ॥ | ನಿದ್ರಾಣಃ-ಶಯಿತಃ-೨-ನಿದ್ದೆಹೋಗುವವನ ಹೆಸರು. |
| ಪರಾಙ್ಮುಖಃ ಪರಾಚೀನ (ಸ್ಸ್ಯಾ) | ಪರಾಙ್ಮುಖಃ-ಪರಾಚೀನಃ-೨-ಅಭಿಮುಖವಾಗದೆ ಹಿಂದೆ ತಿರುಗಿದವನ ಹೆಸರುಗಳು. |
| ದವಾಙವಾಙ್ಮುಖಃ । | ...ಅವಾಚೀನಃ-ಅಧೋಮುಖಃ-೩- ತಲೆಬೊಗ್ಗಿಸಿಕೊಂ... |

| | |
|---|---|
| ( ದೇವಾನಂಚತಿ ) ದೇವದ್ರ್ಯಙ್ | ದೇವದ್ರ್ಯಙ್-ಚ್-೧-ದೇವಾನ್-ಅಂಚತಿ-ದೇವತೆಗಳನ್ನು ಕುರಿತು ಹೋಗುವವನಿಗಾಗಲಿ ದೇವತೆಗಳನ್ನು ಪೂಜಿಸುವವನಿಗಾಗಲಿ ಹೆಸರು. |
| ವಿಷ್ವದ್ರ್ಯಙ್(ವಿಷ್ವಗಂಚತಿ) | ವಿಷ್ವದ್ರ್ಯಙ್-ಚ್-೧-ವಿಷ್ವಕ್- ಅಂಚತಿ-ಸಿಕ್ಕಿದಕಡೆಗೆಲ್ಲಾ ಹೋಗುವವನ ಹೆಸರು. |
| (ಯಸ್ಸಹಾಂ ಚತಿ) ಸಧ್ರ್ಯಙ್ | ಸಧ್ರ್ಯಙ್-ಚ್-೧-ಸಹ-ಅಂಚತಿ-ಒಬ್ಬರ ಸಂಗಡ ಹೋಗುವವನ ಹೆಸರು. |
| ಸ್ತಿರ್ಯಙ್(ಯಸ್ತಿರೋಂಚತಿ) | ತಿರ್ಯಙ್-ಚ್-೧-ತಿರಃ-ಅಂಚತಿ-ಅಡ್ಡವಾಗಿ ನಡಿಯುವವನ ಹೆಸರು. |
| ವದೋವದಾ ವದೋವಕ್ತಾ | ವದಃ-ವದಾವದಃ-ವಕ್ತಾ - ಋ-೩-ಮಾತ್ರು ಕಲಿತವನ ಹೆಸರು. |
| ವಾಗೀಶೋವಾಕ್ಪತಿಸ್ಸ(ಮೌ) | ವಾಗೀಶಃ- ವಾಕ್ಪತಿಃ-೨- ನಿರ್ದೋಷವಾಗಿ ಮಾತುಕಲಿತವನ ಹೆಸರುಗಳು. |
| ವಾಚೋ ಯುಕ್ತಿಪಟುರ್ವಾಗ್ಮೀವಾವದೂ ಕೋತಿವಕ್ತರಿ । | ವಾಚೋಯುಕ್ತಿಪಟುಃ-ವಾಗ್ಮೀ-ನ್-ವಾವದೂಕಃ-೩-ತಾನು ಮಾತನಾಡಲಿಚ್ಛೆಸಿದ ಅರ್ಥವನ್ನು ಚನ್ನಾಗಿ ನಿರೂಪಿಸಿ ನಿರ್ವಹಿಸಿ ಮಾತಾಡುವವನ ಹೆಸರುಗಳು. |
| (ಸ್ಯಾ) ಜ್ಜಲ್ಪಾಕಸ್ತು ವಾಚಾಲೋವಾಚಾಟೋ ಬಹುಗರ್ಹ್ಯವಾಕ್ ॥೩೬॥ | ಜಲ್ಪಾಕಃ-ವಾಚಾಲಃ-ವಾಚಾಟಃ-ಬಹುಗರ್ಹ್ಯವಾಕ್-ಚ್-೪--ದೋಷಯುಕ್ತವಾಗಿ ಬಹಳ ಮಾತುಗಳ ಆಡುವವನ ಹೆಸರುಗಳು. |
| ದುರ್ಮುಖೇ ಮುಖರಾಬದ್ಧಮುಖೌ | ದುರ್ಮುಖಃ-ಮುಖರಃ-ಅಬದ್ಧಮುಖಃ-೩-ಅಪ್ರಿಯವಾಗಿ ಮಾತನಾಡುವವನ ಹೆಸರು, ತಡೆಯಿಲ್ಲದ ನಿಷ್ಠೂರವಾದಿ. |
| ಶ್ಲಕ್ಷ್ಣಃ ಪ್ರಿಯಂವದೇ । | ಶ್ಲಕ್ಷ್ಣಃ-ಪು-ಶ್ಲಕ್ಷ್ಣಃ-ಪ್ರಿಯಂವದಃ-೨-ಪ್ರಿಯವನ್ನು ನುಡಿಯುವವನ ಹೆಸರುಗಳು. |
| ಲೋಹಲ(ಸ್ಸ್ಯಾ) ದಸ್ಫುಟವಾಗ್ಗರ್ಹ್ಯವಾದೀತು ಕದ್ವದಃ॥ | ಲೋಹಲಃ-ಅಸ್ಫುಟವಾಕ್-ಚ್-೨-ಸ್ಪಷ್ಟವಾಗದೇ ತೊದಲು ಮಾತನಾಡುವವನ ಹೆಸರುಗಳು. ದರ್ಗ್ಯವಾದೀ-ನ್-ಕದ್ವದಃ-೨-ನಿಂದಿಸ |

(ಸಮೌ)ಕುವಾದ ಕುಚರೌ

(ಸ್ಯಾ) ದಸೌಮ್ಯಸ್ವರೊ ಸ್ವರಃ ।

ರವಣಶ್ಶಬ್ದನೊ

ನಾಂದೀ ವಾದೀನಾಂದೀ ಕರ ಸ್ಸಮೌ) ॥೩೪॥

ಜಡೋಜ್ಞೊ

ನೆಡಮೂಕ ( ಸ್ತುವಕ್ತುಂ ಶ್ರೊತುಮಶಿಕ್ಷಿತೆ।

ತೂಷ್ಣೀಂಶೀಲಸ್ತುತೂಷ್ಣೀಕೊ

ನಗ್ನೊವಾಸಾದಿಗಂಬರಃ ॥

ನಿಷ್ಕಾಸಿತೊ ವಕೃಷ್ಟಸ್ಸ್ಯಾ

ದಪಧ್ವಸ್ತಸ್ತುಧಿಕ್ಕೃತಃ। ಆತ್ತಗಂಧೋಽಭಿಭೂತ (ಸ್ಸ್ಯಾ)

ದ್ರಾಪಿತಸ್ಸಾಧಿತ (ಸ್ಸಮೌ॥)

ತಕ್ಕ ಮಾತನಾಡುವವನ ಪೆಸರು.

ಕುವಾದಃ-ಪು-ಕುವಾದಃ-ಕುಚರಃ-೧ ಪರರ ದೋಷಗಳನ್ನು ನುಡಿಯುವವನ ಹೆಸರು.

ಅಸ್ವರಃ-೧-ಅಸೌಮ್ಯಸ್ವರಃ- ಕಿವಿಗಳಿಗೆ ಇಂಪುಯಿಲ್ಲದ ಸ್ವರವುಳ್ಳವನ ಪೆಸರು.

ರವಣಃ-ಶಬ್ದನಃ-೧-ಕೂಗುವ ಸ್ವಭಾವವುಳ್ಳವನ ಪೆಸರು.

ನಾಂದೀ-ವಾದೀ-ನ್-ನಾಂದೀಕರಃ-೧-ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು.

ಜಡಃ-ಅಜ್ಞಃ-೧- ತಿಳಿಯದ ಮೂಢನ ಪೆಸರುಗಳು.

ಅನೆಡಮೂಕಃ-೧- ವಕ್ತುಂ-ಮಾತನಾಡುವದಕ್ಕೂ, ಶ್ರೋತುಂ-ಕೇಳುವದಕ್ಕೂ ಅಶಿಕ್ಷಿತೆ-ಶಿಕ್ಷಿಸಲ್ಪಡದವನ ಪೆಸರು. ಅಂದರೆ ಕಿವುಡನಿಗೂ ಮೂಗನಿಗೂ ಹೋಲಿಕೆಯಾದವನು, ಏಡಮೂಕಃ- ಎಂಬಪಾಠವನ್ನಂಗೀಕರಿಸಿ ಕಿವುಡುತನ, ಮೂಗತನವುಳ್ಳವನ ಹೆಸರೆಂದು ಕೆಲವರು.

ತೂಷ್ಣೀಂಶೀಲಃ-ತೂಷ್ಣೀಕಃ-೧-ಸುಮ್ಮನಿರುವ ಸ್ವಭಾವವುಳ್ಳವನ ಪೆಸರುಗಳು.

ನಗ್ನಃ-ಅವಾಸಾಃ-ಸ-ದಿಗಂಬರಃ- ೩-ದಿಗಂಬರನ ಹೆಸರು. ಬೆತ್ತಲೆಯಾಗಿರುವವನು.

ನಿಷ್ಕಾಸಿತಃ- ಅವಕೃಷ್ಟಃ-೧- ಹೊರಡ ಹಾಕಲ್ಪಟ್ಟವನು.

ಅಪಧ್ವಸ್ತಃ-ಧಿಕ್ಕೃತಃ-ಆತ್ತಗಂಧಃ-ಪು-ಆತ ಗರ್ವಃ- ಅಭಿಭೂತಃ-ತಿರಸ್ಕರಿಸಲ್ಪಟ್ಟವನ ಪೆಸರು.

ದಾಪಿತಃ-ಸಾಧಿತಃ-

ಪ್ರತ್ಯಾದಿಷ್ಟೋನಿರಸ್ತಸ್ಸ್ಯಾ ತ್ಪ್ರತ್ಯಾಖ್ಯಾತೋ ನಿರಾಕೃತಃ।

ನಿಕೃತ (ಸ್ಸ್ಯಾ) ದ್ವಿಪ್ರಕೃತೋ

ವಿಪ್ರಲಬ್ಧಸ್ತು ವಂಚಿತಃ ॥

ಮನೋಹತಃ ಪ್ರತಿಹತಃಪ್ರತಿಬದ್ಧೋಹತ (ಶ್ಚ ಸಃ)

ಅಧಿಕ್ಷಿಪ್ತಪ್ರತಿಕ್ಷಿಪ್ತೌ

ಬದ್ಧಕೀಲಿತಸಂಯುತೌ ॥೪೦ ಆಪನ್ನ ಆಪತ್ಪ್ರಾಪ್ತ

(ಸ್ಸ್ಯಾ) ತ್ಕಾಂದಿಶೀಕೋಭಯದ್ರುತಃ।

ಆಕ್ಷಾರಿತಃಕ್ಷಾರಿತೋಽಭಿಶಸ್ತೆ

ಸಂಕಸುಕೋಸ್ಥಿರೆ ॥೪೩॥

ವ್ಯಸನಾರ್ತೋಪರಕ್ತೌದ್ವಾ

ವಿಹಸ್ತವ್ಯಾಕುಲೌ ಸಮೌ।

ವಿಕ್ಲಬೋವಿಹ್ವಲಃ

ಹಾಗೆ ಮಾಡಲ್ಪಟ್ಟವನು.

ಪ್ರತ್ಯಾದಿಷ್ಟಃ-ನಿರಸ್ತಃ-ಪ್ರತ್ಯಾಖ್ಯಾತಃ-ನಿರಾಕೃತಃ-೪-ನ್ಯಾಯದಿಂದ ಪರಿಹರಿಸಲ್ಪಟ್ಟವನ ಪೆಸರುಗಳು.

ನಿಕೃತಃ-ವಿಪ್ರಕೃತಃ-೨- ಪೀಡಿಸಲ್ಪಟ್ಟವನ ಪೆಸರು.

ವಿಪ್ರಲಬ್ಧಃ-ವಂಚಿತಃ-೨-ವಂಚಿಸಿಕೊಂಡವನ ಪೆಸರು.

ಮನೋಹತಃ-ಪ್ರತಿಹತಃ-ಪ್ರತಿಬದ್ಧಃ-ಹತಃ-೪-ಮನಸ್ಸಿನ ಉತ್ಸಾಹವು ತಪ್ಪಿದವನ ಪೆಸರು, ಮನಗೆಟ್ಟವನು.

ಅಧಿಕ್ಷಿಪ್ತಃ-ಪ್ರತಿಕ್ಷಿಪ್ತಃ-೨- ಆಕ್ಷೇಪಿಸಲ್ಪಟ್ಟವನ ಪೆಸಗು.

ಬದ್ಧಃ-ಕೀಲಿತಃ-ಸಂಯುತಃ-೩-ಕಟ್ಟಿಸಿಕೊಂಡವನು. ಆಪನ್ನಃ-ಆಪತ್ಪ್ರಾಪ್ತಃ-ಆಪತ್ತು ಹೊಂದಿದವನ ಹೆಸರು.

ಕಾಂದಿಶೀಕಃ-ಭಯದ್ರುತಃ-೨- ಭಯದಿಂದ ಓಡಿಹೋದವನ ಪೆಸರುಗಳು.

ಆಕ್ಷಾರಿತಃ-ಕ್ಷಾರಿತಃ--ಅಭಿಶಸ್ತಃ-೩-ಪರಸ್ತ್ರೀಗಮನ ಬ್ರಹ್ಮಹತ್ಯಾದಿ ದೋಷಗಳಿಂದ ದೂರಲ್ಪಟ್ಟವನ ಪೆಸರು.

ಸಂಕಸುಕಃ-ಅಸ್ಥಿರಃ-೨-ಯಾವದರಲ್ಲೂ ಸ್ಥಿರವಿಲ್ಲದವನ ಪೆಸರುಗಳು.

ವ್ಯಸನಾರ್ತಃ-ಉಪರಕ್ತಃ-೨-ದೈವಕೃತ ಮನುಷ್ಯಕೃತಗಳಾದ ಶರೀರ ಪೀಡೆಯುಳ್ಳವನ ಹೆಸರು ಜೂಜು ಮುಂತಾದ ವ್ಯಸನವುಳ್ಳವನ ಪೆಸರುಗಳು.

ವಿಹಸ್ತಃ-ವ್ಯಾಕುಲಃ-೨- ಶೋಕಾದಿಗಳಿಂದ ಹಿಂದು ಮುಂದು ತಿಳಿಯದವನ ಪೆಸರು.



ವಿಕ್ಲಬಃ-ವಿಹ್ವಲಃ-೨--ಭಯಾದಿಗಳಿಂದ

ತನ್ನ ಅವಯವಗಳನ್ನು ಧರಿಸಲು ಶಕ್ತಿಯಿಲ್ಲದವನ ಪೆಸರು.

(ಸ್ಯಾತ್ತು) ವಿವಶೋ (ರಿಷ್ಟದುಷ್ಟಧೀಃ ॥೪೪॥)

ವಿವಶಃ-೧-ಇದು-ಅರಿಷ್ಟದುಷ್ಟಧೀಃ- ಅರಿಷ್ಟ-ಆಸನ್ನ ಮರಣದಿಂದ,ದುಷ್ಟಧೀಃ-ದೂಷಿತವಾದ ಬುದ್ಧಿಯುಳ್ಳವನ ಪೆಸರು.

ಕಶ್ಯಃ ಕಶಾರ್ಹೆ

ಕಶ್ಯಃ-ಕಶಾರ್ಹಃ-೨-ಅಪರಾಧದಿಂದ ಕಶಾಕೋಲಿನಪೆಟ್ಟುಗಳಿಗೆ ತಕ್ಕವನಪೆಸರು.

( ಸ್ಸನ್ನದ್ಧೆ) ತ್ವಾತತಾಯಿನಾ (ವಧೋದ್ಯತೆ। )

ಆತತಾಯಿನ್-೧-ಇದು ವಧೋದ್ಯತೆಸಾಯುಕೊಲ್ಲುವದಕ್ಕೋಸ್ಕರ ಯತ್ನವುಳ್ಳ,ಸನ್ನದ್ಧೆ-ಸಿದ್ಧನಾಗಿರುವನಲ್ಲಿ ವರ್ತಿಸುವದು.

ದ್ವೇಷ್ಯಸ್ತ್ವಕ್ಷಿಗತೋ

ದ್ವೇಷ್ಯಃ-ಅಕ್ಷಿಗತಃ-೨-ದ್ವೇಷಿಸತಕ್ಕವನಪೆಸರು.

ವಧ್ಯಶ್ಶೀರ್ಷಚ್ಛೇದ್ಯ (ಇಮೌಸಮೌ) ॥೪೫॥

ವಧ್ಯಃ-ಶೀರ್ಷಚ್ಛೇದ್ಯಃ-೨- ಸಾಯುಕೊಲ್ಲತಕ್ಕವನ ಹೆಸರು.

ವಿಷ್ಯೋ(ವಿಷೇಣಯೊವಧ್ಯ)

ವಿಷ್ಯಃ-೧-ವಿಷೇಣ-ವಿಷದಿಂದ ಯಃ ಯಾವನುವಧ್ಯಃ- ಕೊಲ್ಲತಕ್ಕವನೋ ಅವನ ಪೆಸರು.

ಮುಸಲ್ಯೋ(ಮುಸಲೇನಯಃ)

ಮುಸಲ್ಯಃ-೧- ಮುಸಲೇನಯಃ-ವಧ್ಯಃ-ವನಿಕೆಯಿಂದ ಸಾಯು ಕೊಲ್ಲಲ್ಪಡತಕ್ಕವನ ಪೆಸರು.

ಶಿಪಿದಾನೊಕೃಷ್ಣ ಕರ್ಮಾ

ಶಿಪಿದಾನಃ-ಅಕೃಷ್ಣಕರ್ಮಾ-ನ್-೨-ಪಳ್ಳೆ ಆಚಾರವುಳ್ಳವನ ಪೆಸರು. ಇಲ್ಲಿ ಶಿಪಿದಾನಃ-ಕೃಷ್ಣಕರ್ಮಾ ಎಂಬ ಪಾಠದಲ್ಲಿ ದುರಾಚಾರವುಳ್ಳವನ ಪೆಸರು.

ಚಪಲ ಶ್ಚಿಕುರಸ್ಸಮೌ ॥

ಚಪಲಃ-ಚಿಕುರಃ-೨-ದೋಷವನ್ನು ವಿಚಾರಿಸದೆ ವಧೆಬಂಧನಾದಿಗಳ ಮಾಡುವವನ ಪೆಸರು.

ದೋಷೈಕದೃಕ್ಪುರೋಭಾಗೀ

ದೋಷೈಕದೃಕ್-ಶ್- ಪುರೋಭಾಗೀ-ನ್-೨-ದೋಷವನ್ನೇ ಹುಡುಕುವವನಪೆಸರು.

ನಿಕೃತಸ್ತ್ವ ನೃಜುಶ್ಶಠಃ

ನಿಕೃತಃ-ಅನೃಜುಃ-ಶಠಃ-೩- ಕುತ್ಸಿತನ ಪೆಸರು.

ಕರ್ಣೇಜಪಸ್ಸೂಚಕಃ(ಸ್ಯಾ
ತ್ಪಿಶುನೋ
ದುರ್ಜನಃಖಲಃ ॥೪೭॥

ನೃಶಂಸೋಘಾತುಕಃ ಕ್ರೂ
ರಃಪಾಪೋ

ಧೂರ್ತಸ್ತುವಂಚಕಃ ।

ಅಜ್ಞೋಮೂಢ ಯಥಾಜಾತ
ಮೂರ್ಖವೈಧೆಯಬಾಲಿಶಾಃ।

ಕದರ್ಯ್ಯೆಕೃಪಣಕ್ಷುದ್ರಕಿಂಪ
ಚಾನಮಿತಂಪಚಃ ।

ನಿಸ್ವಸ್ತುದುರ್ವಿಧೋದೀನೋ
ದರಿದ್ರೋದುರ್ಗತೋ (ಪಿಸಃ) ॥
ವನೀಪಕೋ ಯಾಚನಕೋ
ಮಾರ್ಗಣೋಯಾಚಕಾರ್ಥಿನೌ

ಅಹಂಯು ( ಸ್ಸ್ಯಾ) ದಹಂ
ಕಾರೀ
ಶುಭಂಯುಸ್ತುಶುಭಾನ್ವಿತಃ।

ದಿವ್ಯೋಪಪಾದುಕಾ (ದೇವಾ)

( ನೃಗವಾದ್ಯಾ ) ಜರಾಯು
ಜಾಃ ।

ಸ್ವೇದಜಾಃ(ಕ್ರಿಮಿದಂಶಾದ್ಯಾಃ)

ಕರ್ಣೇಜಪಃ-ಸೂಚಕಃ- ಪಿಶುನಃ-೩-ಛಾಡಿ ಹೇಳುವವನು, ಕ್ಷುದ್ರಗಾರ.

ದುರ್ಜನಃ-ಖಲಃ-ಪು-೨- ದುಷ್ಟಾತ್ಮನ ಹೆಸರುಗಳು.

ನೃಶಂಸಃ-ಘಾತುಕಃ--ಕ್ರೂರಃ-ಪಾಪಃ-೪-ಪರರಿಗೆ ಬಾಧೆಮಾಡುವ ಸ್ವಭಾವವುಳ್ಳವನ ಹೆಸರುಗಳು.

ಧೂರ್ತಃ-ವಂಚಕಃ-ಪು-೨-ಮೋಸಮಾಡುವವನು.

ಅಜ್ಞಃ-ಮೂಢಃ-ಯಥಾಜಾತಃ- ಮೂರ್ಖಃ-ವೈಧೇಯಃ-ಬಾಲಿಶಃ-ಪು-೬- ತಿಳುವಳಿಕೆ ಯಿಲ್ಲದವನ ಹೆಸರುಗಳು.

ಕದರ್ಯಃ-ಕೃಪಣಃ- ಕ್ಷುದ್ರಃ-ಕಿಂಪಚಾನಃ-ಮಿತಂಪಚಃ-ಪು-೫-ಲೋಭಿಯ ಹೆಸರುಗಳು.

ನಿಸ್ವಃ-ದುರ್ವಿಧಃ-ದೀನಃ-ದರಿದ್ರಃ- ದುರ್ಗತಃ-ಪು-೫-ದರಿದ್ರನಹೆಸರು, ಬಡವನು.

ವನೀಪಕಃ-ಯಾಚನಕಃ-ಮಾರ್ಗಣಃ--ಯಾಚಕಃ-ಅರ್ಥೀ-ನ್-ಪು-೫- ಕೇಳುವವನ ಹೆಸರು, ಬೇಡುವವನು.

ಅಹಂಯುಃ-ಅಹಂಕಾರೀ-ನ್-ಪು-೨-ಅಹಂಕಾರ ವುಳ್ಳವನ ಹೆಸರುಗಳು.

ಶುಭಂಯುಃ-ಶುಭಾನ್ವಿತಃ-ಪು-೨-ಶುಭವುಳ್ಳವನು.

ದಿವ್ಯೋಪಪಾದುಕಃ-೧-ದೇವಾಃ - ಸ್ವರ್ಗದಲ್ಲಿರುವ ಮಾತೃಪಿತೃಸಂಬಂಧವಿಲ್ಲದೇ ಹುಟ್ಟಿದ ದೇವತೆಗಳ ಹೆಸರು.

ಜರಾಯುಜಃ -೧- ಪು-ನೃಗವಾದ್ಯಾಃ- ಮಾಸುಚೀಲದಲ್ಲಿ ಹುಟ್ಟಿದ ಮನುಷ್ಯಪಶುವು ಮೊದಲಾದವುಗಳು.

ಸ್ವೇದಜಃ-೧-ಕ್ರಿಮಿದಂಶಾದ್ಯಾಃ-ಬೆವರಿ

ನಿಂದ ಹುಟ್ಟಿದ ಹುಳುವುಗಳು, ನೊಣಗಳು ಮೊದಲಾದವುಗಳ ಹೆಸರು.

(ಪಕ್ಷಿಸರ್ಪಾದಯೊಂಡಜಾಃ)

ಅಂಡಜಾಃ-೧-ಪಕ್ಷಿಸರ್ಪಾದಯಃ-ಮೊಟ್ಟೆಯಿಂದ ಹುಟ್ಟುವ ಹಕ್ಕಿ, ಹಾವು, ಮುಂತಾದವುಗಳ ಹೆಸರು.

ಉದ್ಭಿದ(ಸ್ತರುಗುಲ್ಮಾದ್ಯಾ)

ಉದ್ಭಿತ್-ದ್-ಪು-೧-ತರುಗುಲ್ಮಾದ್ಯಾಃ-ನೆಲವನ್ನು ಭೇದಿಸಿಕೊಂಡು ಮೊಳಕೆ ಯೇಳುವ ಹುಲ್ಲು, ಗಿಡ, ಮರ, ಬಳ್ಳಿ ಮುಂತಾದ್ದರ ಹೆಸರುಗಳು.

ಉದ್ಭಿದುದ್ಭಿಜ್ಜಮುದ್ಭಿದಂ।

ಉದ್ಭಿತ್-ದ್-ಉದ್ಭಿಜ್ಜಂ-ಉದ್ಭಿದಂ-ನ-೨ ಆತರುಗುಲ್ಮಾದಿಗಳಿಗೇನೇ ಹೆಸರುಗಳು.

ಸುಂದರಂರುಚಿರಂಚಾರುಸುಷಮಂಸಾಧುಶೋಭನಂ ॥೫೩॥ ಕಾಂತಂಮನೋಹರಂ ರುಚ್ಯಂ ಮನೋಜ್ಞಂ ಮಂಜುಮಂಜುಳಂ।

ಸುಂದರಂ-ರುಚಿರಂ-ಚಾರು-ಸುಷಮಂ-ಸಾಧು-ಶೋಭನಂ-ಕಾಂತಂ - ಮನೋಹರಂ-ರುಚ್ಯಂ-ಮನೋಜ್ಞಂ-ಮಂಜು - ಮಂಜುಳಂ-ನ-೧೦-ಸೊಗಸಾದದ್ದು, ಚನ್ನಾಗಿರುವಂಥಾದ್ದು.

ತದಾಸೇಚನಕಂ(ತೃಪ್ತೇರ್ನಾಸ್ತ್ಯಂತೋ ಯಸ್ಯದರ್ಶನಾತ್॥)

ಆಸೇಚನಕಂ-೧-ಯಸ್ಯದರ್ಶನಾತ್ ತೃಪ್ತೇರಂತೋನಾಸ್ತಿ ತತ್-ಯಾವದರನ್ನು ನೋಡುವದರಿಂದ ನೋಡಬೇಕೆಂಬ ಹಾರೈಕೆ ತೀರಿ ಮನಸ್ಸಿಗೆ ಸಂಪೂರ್ಣ ತೃಪ್ತಿಯುಂಟಾಗುವದಿಲ್ಲವೋ ಅಂಥಾದ್ದು ಅಂದರೆ, ಬಹಳ ಚಲುವಾದದ್ದು.

ಅಭೀಷ್ಟೇಭೀಪ್ಸಿತಂಹೃದ್ಯಂ ದಯಿತಂವಲ್ಲಭಂಪ್ರಿಯಂ।

ಅಭೀಷ್ಟಂ-ಅಭೀಪ್ಸಿತಂ-ಹೃದ್ಯಂ- ದಯಿತಂ-ವಲ್ಲಭಂ-ಪ್ರಿಯಂ-ನ-೬-ಮನಸ್ಸಿಗೆ ಬೇಕಾದದ್ದು, ಇಷ್ಟವಾದದ್ದು.

ನಿಕೃಷ್ಟಪ್ರತಿಕೃಷ್ಟಾರ್ವರೇಫಯಾಪ್ಯಾವಮಾಧಮಾಃ ॥೫೪॥ ಕುಪೂಯಕುತ್ಸಿತಾವದ್ಯ ಖೇಟಗರ್ಹ್ಯಾಣಕಾಸ್ಸಮಾಃ।

ನಿಕೃಷ್ಟಃ-ಪ್ರತಿಕೃಷ್ಟಃ-ಅರ್ವಾ-ನ್-ರೇಫಃ-ಪಾ-ಲೇಫಃ-ಯಾಪ್ಯಃ-ಅವಮಃ- ಅಧಮಃ-ಕುಪೂಯಃ-ಕುತ್ಸಿತಃ-ಅವದ್ಯಃ-ಖೇಟಃ-ಗರ್ಹ್ಯಃ-[illegible]ಚಾರಗುಣಾದಿಗಳಿಂದ ಕಡಮೆಯಾದಂಥಾ ಅಧಮನ ಹೆಸರುಗಳು.

ಮಲೀಮಸಂತುಮಲಿನಂ ಕಚ್ಚರಂಮಲದೂಷಿತಂ ॥೫೫॥

ಮಲೀಮಸಂ-ಮಲಿನಂ-ಕಚ್ಚರಂ- ಮಲದೂಷಿತಂ-೪-ನ- ಮಾಸಿದ್ದು, ಕೊಳೆಯಾದದ್ದು.

ಪೂತಂಪವಿತ್ರಂಮೇಧ್ಯಂಚ

ಪೂತಂ-ಪವಿತ್ರಂ-ಮೇಧ್ಯಂ-ನ-೩ - ಪವಿತ್ರವಾದಂಥಾದ್ದು, ಶುದ್ಧವಾದದ್ದು, ದೋಷವಿಲ್ಲದ್ದು.

ವೀಧ್ರಂತು(ವಿಮಲಾರ್ಥಕಂ।)

ವೀಧ್ರಂ-ನ-೧-ವಿಮಲಾರ್ಥಕಂ- ಸ್ವಭಾವದಿಂದ ನಿಷ್ಕಲ್ಮಷಗಳಾದ ಸ್ಫಟಿಕಾದಿ ವಸ್ತುಗಳ ಹೆಸರು.

ನಿರ್ಣಿಕ್ತಂಶೋಧಿತಂಮೃಷ್ಟಂನಿಶ್ಶೋಧ್ಯಮನವಸ್ಕರಂ॥

ನಿರ್ಣಿಕ್ತಂ-ಶೋಧಿತಂ-ಮೃಷ್ಟಂ-ನಿಶ್ಶೋಧ್ಯಂ-ಅನವಸ್ಕರಂ- ನ- ೫- ಕಲ್ಮಷವಿಲ್ಲದ ಹಾಗೆ ಶುದ್ಧ ಗೊಳಿಸಲ್ಪಟ್ಟದ್ದು.

ಅಸಾರಂಫಲ್ಗು

ಅಸಾರಂ-ಫಲ್ಗು-ನ-೨-ಸಾರವಿಲ್ಲದೆ ಹಗರಣಾವಾದಂಥಾ ಬಲ್ಲಜ ಮುಂತಾದ್ದು.

ಶೂನ್ಯಂತುವಶಿಕಂತುಚ್ಛರಿಕ್ತಕೇ।

ಶೂನ್ಯಂ-ವಶಿಕಂ- ತುಚ್ಛಂ-ರಿಕ್ತಕಂ-ನ-೪-ಬರಿದಾದ ಮನೆ ಮಡಿಕೆ ಮುಂತಾದ್ದು ವಳಗೆ ಏನೂಯಿಲ್ಲದ್ದು.

(ಕ್ಲೀಬೆ)ಪ್ರಧಾನಂಪ್ರಮುಖಪ್ರವೇಕಾನುತ್ತಮೋತ್ತಮಾಃ । ಮುಖ್ಯವರ್ಯವರೇಣ್ಯಾಶ್ಚಪ್ರಬರ್ಹೋನವರಾರ್ಧ್ಯವತ್। ಪರಾರ್ಧ್ಯಾಗ್ರಪ್ರಾಗ್ರಹರ ಪ್ರಾಗ್ರ್ಯಾಗ್ರ್ಯಾಗ್ರೀಯಮಗ್ರಿಯಂ ॥೫೮॥

ಪ್ರಧಾನಂ-ನಿಯತನಪುಂಸಕವು,ಪ್ರಮುಖಃ-ಪ್ರವೇಕಃ-ಅನುತ್ತಮಃ - ಉತ್ತಮಃ-ಮುಖ್ಯಃ-ವರ್ಯಃ-ವರೇಣ್ಯಃ-ಪ್ರಬರ್ಹಃ-ಅನವರಾರ್ಧ್ಯಃ-ಪು-ಪರಾರ್ಧ್ಯಂ-ಅಗ್ರಂ-ಪ್ರಾಗ್ರಹರಂ- ಪ್ರಾಗ್ರ್ಯಂ-ಅಗ್ರ್ಯಂ-ಅಗ್ರೀಯಂ-ಅಗ್ರಿಯಂ-ನ-೧೭-ಮುಖ್ಯವಾಗಿಯೂ, ಉತ್ತಮವಾಗಿಯೂ, ಇತರರಿಂದ ಅಪೇಕ್ಷಿಸಲ್ಪಡತಕ್ಕದ್ದಾಗಿಯೂ ಇರುವ ಶ್ರೇಷ್ಠವಾದಂಥಾದ್ದರ ಹೆಸರುಗಳು.

ಶ್ರೇಯಾನ್ ಶ್ರೇಷ್ಠಃ ಪುಷ್ಕಲ(ಸ್ಸ್ಯಾ)ತ್ಸತ್ತಮಶ್ಚಾತಿಶೋಭನೇ।

ಶ್ರೇಯಾನ್--ಸ-ಶ್ರೇಷ್ಠಃ-ಪುಷ್ಕಲಃ-ಸತ್ತಮಃ-ಅತಿಶೋಭನಃ-ಪು-೫-ಬಹಳಶ್ರೇಷ್ಠನಾದವನ ಹೆಸರುಗಳು, ಈ೨೨,ಉತ್ತಮಪರ್ಯಾಯನಾಮಗಳೆಂದು ಕೆಲವರನ್ನುವರು.

ಸ್ಯು ಉತ್ತ... ...ಪ್ರ... ...ಪುಂಗವ... ...ಕುಂಜ,

ಗವರ್ಷಭಕುಂಜರಾಃ। ಸಿಂಹ ಶಾ ದೂರ್ಲಲನಾಗಾದ್ಯಾಃಪುಂಸಿಶ್ರೇಷ್ಠಾರ್ಥಗೋಚರಾಃ ।

ರಃ-ಸಿಂಹಃ-ಶಾರ್ದೂಲಃ-ನಾಗಃ-ಪ್ರು-ಈ ೭ ನ್ನು, ಆದಿಶಬ್ದದಿಂದ, ಚಂದ್ರಾದಿ ಶಬ್ದಗಳು ನ್ನೂ, ಉತ್ತರಪದೆ ಶ್ರೇಷ್ಠಾದಿಗೋಚರಾಸ್ಸಂತಃ-ಪುಂಸಿಸ್ಯುಃ-ಉತ್ತರ ಪದಗಳಾಗಿ ತನಿಗೆ ವಿಶೇಷ್ಯವಾದ ಪದಾರ್ಥವನ್ನು ಶ್ರೇಷ್ಠವನ್ನಾಗಿ ಹೇಳುತ್ತಾ ಪುಲ್ಲಿಂಗಗಳಾಗುತ್ತವೆ, ಉದಾಹರಣಾ*ನರವ್ಯಾಘ್ರಃ-ಮುನಿಪುಂಗವಃ-ಪುರುಷರ್ಷಭಃ-ಗಜಕುಂಜರಃ-ರಾಜಸಿಂಹಃ-ರಾಜಚಂದ್ರಃ - ಇತ್ಯಾದಿಗಳು ಶ್ರೇಷ್ಠಾರ್ಥಗಳು.

ಅಪ್ರಾಗ್ರ್ಯಂ (ದ್ವಯಹೀನೆ ದ್ವೇ)ಅಪ್ರಧಾನೋಪಸರ್ಜನೇ।

ಅಪ್ರಾಗ್ರ್ಯಂ-ಅಪ್ರಧಾನಂ- ಉಪಸರ್ಜನಂ-೩-ಪ್ರಧಾನವಲ್ಲದೇ ಇರುವಂಥಾ ಅನುಖ್ಯದ ಹೆಸರುಗಳು. ಅಪ್ರಧಾನ- ಉಪಸರ್ಜನ-ಈ ೨ ಶಬ್ದಗಳಿಗೆ ಸ್ತ್ರೀಲಿಂಗ, ಪುಲ್ಲಿಂಗಗಳಿಲ್ಲವು, ಅಂದರೆ ನಿತ್ಯ ನಪುಂಸಕವೆನ್ನುವಿಕೆ.

ವಿಶಂಕಟಂಪೃಥುಬೃಹದ್ವಿ ಶಾಲಂಪೃಥುಲಂಮಹತ್ । ರುಂದ್ರೋರುವಿಪುಲಂ

ವಿಶಂಕಟಂ-ಪೃಥು-ಬೃಹತ್-ತ್-ವಿಶಾಲಂ ಪೃಥುಲಂ- ಮಹತ್-ರುಂದ್ರಂ-ಉರು- ವಿಪುಲಂ-ನ- ೯- ವಿಶಾಲವಾದದ್ದು, ಅಗಲವಾದದ್ದು-ದೊಡ್ಡದು.

ಪೀನಪೀವ್ನೀತುಸ್ಥೂಲಪೀವರೇ।

ಪೀನಂ-ಪೀವ-ನ್-ಸ್ಥೂಲಂ-ಪೀವರಂ-ನ- ೪-ಬಲಿತದ್ದು.

ಸ್ತೋಕಾಲ್ಪಕ್ಷುಲ್ಲಕಾ ಸೂಕ್ಷ್ಮಂಶ್ಲಕ್ಷ್ಣಂದಭ್ರಂಕೃಶಂತನು।

ಸ್ತೋಕಃ - ಅಲ್ಪಃ -ಕ್ಷುಲ್ಲಕಃ-ಸೂಕ್ಷ್ಮಂಶ್ಲಕ್ಷ್ಣಂ-ದಭ್ರಂ-ಕೃಶಂ-ತನು-ನ-೧೦- ಸಣ್ಣದು.

(ಸ್ತ್ರಿಯಾಂ) ಮಾತ್ರಾತ್ರುಟೀ ಪುಂಸಿ) ಲವಲೇಶಕಣಾಣವಃ।

ಮಾತ್ರಾ-ತ್ರುಟಿಃ(ನಿಯತ ಸ್ತ್ರೀಲಿಂಗವು) ಲವಃ-ಲೇಶಃ,ಕಣಃ, (ಅಣುಃ) ನಿಯತ ಪುಲ್ಲಿಂಗ-ಈ-೬-ಅಲ್ಪವಾದ್ದು - ಕೊಂಚ, ತುಸ, ಶಟಕು, ಸ್ವಲ್ಪವಾದದ್ದು.

ಅತ್ಯಲ್ಪೇಲ್ಪಿಷ್ಠಮಲ್ಪೀಯಃ ಕನೀಯೋಣೀಯಃ (ದ್ವಯಂ)

ಅಲ್ಪಿಷ್ಠಂ-ಅಲ್ಪೀಯಃ-ನ- ಕಣೀಯಃ- ... ಅತ್ಯಲ್ಪವಾದ ... ಕಣೆ

ಷ್ಠಂ-ಅಣಿಷ್ಠಂ-ಈ೨ ಅಂತೂ-೬-ನ-ಬಹಳಕೊಂಚವಾಗಿರುವದು.

ಪ್ರಭೂತಂ ಪ್ರಚುರಂ ಪ್ರಾಜ್ಯಮದಭ್ರಂ ಬಹುಳಂ ಬಹು॥ ಪುರುಭೂಃ ಪುರುಹಭೂಯಿಷ್ಠಂ ಸ್ಫಿರಂಭೂಯಶ್ಚ ಭೂರಿಚ।

ಪ್ರಭೂತಂ-ಪ್ರಚುರಂ-ಪ್ರಾಜ್ಯಂ- ಅದಭ್ರಂ-ಬಹುಳಂ-ಬಹು,ಪುರುಭೂಃ-ಪಾ-ಪುರುಹೂಃ- ಪುರುಹಂ-ಪುರು- ಭೂಯಿಷ್ಠಂ-ಸ್ಫಿರಂ-ಭೂಯಃ-ಸ-ಭೂರಿ-ನ-೧೨-ಅಧಿಕವಾದದ್ದರ ಹೆಸರುಗಳು. ಬಹಳವಾದದ್ದು,ಹೆಚ್ಚಾದದ್ದು.

ಪರಶ್ಶತಾದ್ಯಾ (ಸ್ತೇ ಯೇಷಾಂ ಪರಾಸಂಖ್ಯಾ ಶತಾದಿಕಾತ್।)

ಪರಶ್ಶತಂ-ಪರಸ್ಸಹಸ್ರಂ-ಇತ್ಯಾದಿಗಳು-ನ-ಯೇಷಾಂಸಂಖ್ಯಾ ಶತಾದಿಕಾತ್-ಪರಾತೆ) ಯಾವ ಪದಾರ್ಥಗಳ ಲೆಕ್ಕವು ನೂರಕ್ಕಿಂತಲೂ ಹೆಚ್ಚಾಗುತ್ತೋ ಅಂಥಾವುಗಳ ಹೆಸರು.

ಗಣನೀಯೆ ಗಣೇಯಂ

ಗಣನೀಯಂ-ಗಣೇಯಂ-ಪಾ-ಗಣೆಯಂ-೨-ಲೆಕ್ಕವಿಡತಕ್ಕವುಗಳು. ಎಣಿಸತಕ್ಕವುಗಳ ಹೆಸರುಗಳು.

ಸಂಖ್ಯಾತೇಗಣಿತಂ(ಮಥ)

ಗಣಿತಂ-ನ-೧-ಎಣಿಕೆಯಾದದ್ದು.

ಸಮಂಸರ್ವಂ। ವಿಶ್ವಮಶೇಷಂಕೃತ್ಸ್ನಂಸಮಸ್ತನಿಖಿಲಾಖಿಲಾನಿನಿಶ್ಶೇಷಂ ॥೬೫॥ ಸಮಗ್ರಸಕಲಾಖಂಡ ಪೂರ್ಣಾರ್ಣಾದೀನ್ಯ ವ್ಯಮಾನಕೇ।

ಸಮಂ - ಸರ್ವಂ-ವಿಶ್ವಂ-ಅಶೇಷಂ- ಕೃತ್ಸ್ನಂ-ಸಮಸ್ತಂ-ನಿಖಿಲಂ- ಅಖಿಲಂ- ನಿಶ್ಶೇಷಂ-ಸಮಗ್ರಂ-ಸಕಲಂ-ಅಖಂಡಂ-ಪೂರ್ಣಂ-ಅನೂನಕಂ-ನ-೧೪- ಆದಿಪದದಿಂದ ಸಂಪೂರ್ಣಂ-ಪುಷ್ಕಲಂ-ಅವಿಕಲಂ- ಅಭಿನ್ನಂ-ಇತ್ಯಾದಿಶಬ್ದಗಳು, ಕಡಮೆ ಇಲ್ಲದೇ ಯಿರುವದಕ್ಕೆಹೆಸರುಗಳು. ಅಂದರೆ, ಎಲ್ಲವೂ ಸಂಪೂರ್ಣವಾಗಿ ಎಂದರ್ಥವು.

ಘನಂನಿರಂತರಂಸಾಂದ್ರಂ

ಘನಂ-ನಿರಂತರಂ-ಸಾಂದ್ರಂ-ನ-೩-ಒಂದಕ್ಕೊಂದು ಸೇರಿಕೊಂಡು ಒತ್ತಾಗಿರುವಂಥಾದ್ದು ಎಡೆಬಿಡದದ್ದು.

ಪೇಲವಂವಿರಳಂತನು ॥೬೬॥

ಪೇಲವಂ-ವಿರಳಂ-ತನು-ನ-೩-ಎಡೆಬಿಟ್ಟದ್ದು. ವಿರಳವಾದದ್ದು, ತೆಳ್ಳಗಿರುವದು.

ಸಮೀಪೇನಿಕಟಾಸನ್ನ ಸನ್ನಿ

ಸಮೀಪಂ-ನಿಕಟಂ- ಆಸನ್ನಂ- ಸನ್ನಿಕೃ

ಕೃಷ್ಟಸನೀಡವತ್। ಸದೇಶಾಭ್ಯಾಶಸವಿಧಸಮರ್ಯಾದಸವೇಶವತ್॥ ಉಪಕಂಠಾಂತಿಕಾಭ್ಯರ್ಣಾಭ್ಯಗ್ರಾಅಪ್ಯಭಿತೊವ್ಯಯಂ।

ಷ್ಟಂ-ಸನೀಡಂ-ಸದೇಶಂ-ಅಭ್ಯಾಶಂ-ಪಾ-ಅಭ್ಯಾಸಂ-ಸವಿಧಂ-ಸಮರ್ಯಾದಂ-ಸವೇಶಂ-ನ-ಉಪಕಂಠಃ- ಅಂತಿಕಃ- ಅಭ್ಯರ್ಣಃ-ಅಭ್ಯಗ್ರಃ-ಅಭಿತಃ-ಸ-೧೨- ಹತ್ತಿರದ ಹೆಸರುಗಳು. ಬಳಿಸಮೀಪ (ಅಭಿತಃ) ಇದು-ಅವ್ಯಯವು.

ಸಂಸಕ್ತೆತ್ವವ್ಯವಹಿತ ಮಪದಾಂತರ (ಮಿತ್ಯಪಿ)

ಸಂಸಕ್ತಂ-ಅವ್ಯವಹಿತಂ-ಅಪದಾಂತರಂ ೩-ನ-ಬೆರತುಕೊಂಡಂಥಾದ್ದು, ಕೂಡಿಕೊಂಡಂಥಾದ್ದು, ಸೇರಿ ಕೊಂಡಿರುವದು.

ನೆದಿಷ್ಠಮಂತಿಕತಮಂ

ನೇದಿಷ್ಠಂ- ಅಂತಿಕತಮಂ-೨- ಬಹಳಹತ್ತಿರವಾದದ್ದು, ಕೇವಲ ಸಮೀಪವಾದದ್ದು.

(ಸ್ಯಾ)ದ್ದೂರಂ ವಿಪ್ರಕೃಷ್ಟಕಂ।

ದೂರಂ- ವಿಪ್ರಕೃಷ್ಟಕಂ-೨- ದೂರವಾದದ್ದು, ಹತ್ತರವಲ್ಲದ್ದು.

ದವೀಯಂಚದವಿಷ್ಠಂಚ ಸುದೂರಂ

ದವೀಯಃ-ಸ-ದವಿಷ್ಠಂ-ಸುದೂರಂ-ನ-೩-ಬಹಳ ದೂರವಾದದ್ದು.

ದೀರ್ಘಮಾಯತಂ॥

ದೀರ್ಘಂ- ಆಯತಂ-ನ-೨- ಉದ್ದವಾದದ್ದು, ಕೋಲಾದ್ದು, ನೀಳವಾದದ್ದು.

ವರ್ತುಲಂನಿಸ್ತಲಂವೃತ್ತಂ

ವರ್ತುಲಂ-ನಿಸ್ತಲಂ-ವೃತ್ತಂ-ನ-೩-ಗುಂಡಾದದ್ದು, ದುಂಡಾದ್ದು, ಉರುಟಾದ್ದು.

ಬಂಧುರಂತೂನ್ನತಾನತಂ।

ಬಂಧುರಂ-ಉನ್ನತಾನತಂ-ನ-೨- ಉದ್ದವಾಗಿ ಬೆಳೆದು ಬೊಗ್ಗಿದಂಥಾದ್ದು.

ಉಚ್ಚ ಪ್ರಾಂಶೂನ್ನತೊ ದಗ್ರೊಚ್ಛ್ರಿತಾಸ್ತುಂಗೆ (ಥ)

ಉಚ್ಚಃ-ಪ್ರಾಂಶುಃ-ಉನ್ನತಃ-ಉದಗ್ರಃ-ಉಚ್ಛ್ರಿತಃ-ತುಂಗಃ-ಪು-೬-ಎತ್ತರವಾದದ್ದು, ಬಹಳ ಮೇಲಕ್ಕೆಬೆಳೆದದ್ದು.

ವಾಮನೆ ॥೭೦॥ ನ್ಯಙ್ನೀಚ ಖರ್ವಹ್ರಸ್ವಾಸ್ಸ್ಯು

ವಾಮನಃ-ನ್ಯಕ್-ಚ-ನೀಚಃ-ಖರ್ವಃ-ಹ್ರಸ್ವಃ-ಪು-೫-ತಗಾದಗುಜ್ಜು ಗಿಡ್ಡು, ಕುರುಚು, ಕುಳ್ಳ.

ರವಾಗ್ರೆವನತಾನತಂ।

ಅವಾಗ್ರಂ- ಅವನತಂ- ಆನತಂ- ನ-೩-ಬೊಗ್ಗಿದಂಥಾದ್ದು.

ಅರಾಳಂವೃಜಿನಂಜಿಂಹಮೂರ್ಮಿಮತ್ಕುಂಚಿತಂನತಂ। ಆವಿ

ಅರಾಳಂ-ವೃಜಿನಂ-ಜಿಂಹಂ-ಊರ್ಮಿಮತ್-ಕುಂಚಿತಂ - ನತಂ-ಆವಿದ್ಧಂ-ಕುಟಿಲಂ- ಭುಗ್ನ

ದ್ಧಂಕುಟಿಲಂಭುಗ್ನಂವೆಲ್ಲಿತಂ ವಕ (ಮಿತ್ಯಪಿ)

ಗ್ನಂ-ವೇಲ್ಲಿತಂ-ವಕ್ರಂ-ನ-೧೧-ಸೊಟ್ಟೆಯಾಗಿರುವದರ ಪೆಸರುಗಳು.

ಋುಜಾವಜಿಂಹಪ್ರಗುಣೌ

ಋುಜುಃ-ಅಜಿಹ್ಮಃ-ಪ್ರಗುಣಃ-ಪು-೩-ನೆಟ್ಟಗಿರುವದರ ಪೆಸರು.

ವ್ಯಸ್ತೇತ್ವಪ್ರಗುಣಾಕುಲೌ॥

ವ್ಯಸ್ತಃ-ಅಪ್ರಗುಣಃ-ಆಕುಲಃ-ಪು-೩-ಕೆದರಿದ್ದು, ಬಿಚ್ಚಿಸಿ ಹೋದದ್ದು, ಚದರಿ ಹೋದದ್ದು, ಕೆದರಿ ಕೊಂಡಿರುವದು.

ಶಾಶ್ವತಸ್ತುಧ್ರುವೋನಿತ್ಯಸದಾತನಸನಾತನಾಃ।

ಶಾಶ್ವತಃ-ಧ್ರುವಃ-ನಿತ್ಯಃ-ಸದಾತನಃ- ಸನಾತನಃ-ಪು-೫-ಎಂದಿಗೂನಾಶ ವಿಲ್ಲದದರ ಪೆಸರುಗಳು.

ಸ್ಥಾಸ್ನುಃಸ್ಥಿರತರಃಸ್ಥೇಯಾ

ಸ್ಥಾಸ್ನುಃ-ಸ್ಥಿರತರಃ-ಸ್ಥೇಯಾನ್-ನ-ಪು-೩-ಬಹುಕಾಲದವರಿಗೂ ಚಲನೆ ಇಲ್ಲದೇ ಸ್ಥಿರವಾಗಿರುವಂಥಾವನು.

(ನೇಕರೂಪತಯಾತುಯಃ। ಕಾಲವ್ಯಾಪೀ)ಸಕೂಟಸ್ಥಃ

ಕೂಟಸ್ಥಃ-ಪು -೧- ಏಕರೂಪತಯಾ ಯಃ-ಕಾಲವ್ಯಾಪೀ-ಯಾವಾಗಲೂ ವಂದೇ ಬಗೆಯಾಗಿರುವ ಆತ್ಮಾದಿಗಳ ಹೆಸರು.

ಸ್ಥಾವರೋಜಂಗಮೇತರಃ।

ಸ್ಥಾವರಃ-೧-ಜಂಗಮೇತರಃ-ಚರಿಸುವಂಥಾ ಜಂಗಮ ವಲ್ಲದೇ ಇರುವ ಗಿರಿವೃಕ್ಷಾದಿಸ್ಥಾವರಗಳ ಪೆಸರು.

ಚರಿಷ್ಣುಜಂಗಮಚರಂ ತ್ರಸಮಿಂಗಂಚರಾಚರಂ ।

ಚರಿಷ್ಣು-ಜಂಗಮ-ಚರಂ-ತ್ರಸಂ - ಇಂಗಂ-ಚರಾಚರಂ-೬ - ತಿರುಗುವಂತಾ ಮನುಷ್ಯಾದಿ ಜಂಗಮ ದ್ರವ್ಯಗಳ ಹೆಸರು.

ಚಲನಂಕಂಪನಂಕಂಪ್ರಂ

ಚಲನಂ-ಕಂಪನಂ-ಕಂಪ್ರಂ-೩-ಕದಲಾಡುವಂಥಾ ಸ್ವಭಾವವುಳ್ಳ ಅಶ್ವತ್ಥದಳಾದಿಗಳ ಪೆಸರುಗಳು.

ಚಲಂಲೋಲಂಚಲಾಚಲಂ। ಚಂಚಲಂತರಳಂಚೈವ ಪಾರಿಪ್ಲವಪರಿಪ್ಲವೇ ॥೭೫॥

ಚಲಂ-ಲೋಲಂ-ಚಲಾಚಲಂ-ಚಂಚಲಂ-ತರಳಂ-ಪಾರಿಪ್ಲವಂ-ಪರಿಪ್ಲವಂ-ನ-೭-ಕದಲಾಡುತ್ತಿರುವಂಥಾ ಚಂಚಲವಾದ್ದಕ್ಕೆ ಹೆಸರುಗಳು.

ಅತಿರಿಕ್ತಸ್ಸಮಧಿಕೋ

ಅತಿರಿಕ್ತಃ-ಸಮಧಿಕಃ-ಪು-೨-ಬಹಳ ಅಧಿಕವಾಗಿರುವದ್ದರ ಹೆಸರುಗಳು.

ದೃಢಸಂಧಿಸ್ತು ಸಂಹತಃ ।

ದೃಢಸಂಧಿಃ-ಸಂಹತಃ-ಪು - ದೃಢವಾದ ಕೀಲು ಉಳ್ಳದ್ದು. ಚನ್ನಾಗಿ ತಗಲಿಕೊಂ ರುವದು. ಗಟ್ಟಿಯಾಗಿ ಬೆಸಗೆ ಗೊಂಡಿರು ವದು.

ಕರ್ಕಶಂಕಠಿನಂಕ್ರೂರಂ ಕ ಠೋರಂನಿಷ್ಠುರಂದೃಢಂ ॥೭೬॥ ಜಠರಂಮೂರ್ತಿಮನ್ಮೂರ್ತಂ

ಕರ್ಕಶಂ-ಪು-ಕರ್ಕಟಂ-ಕಠಿನಂ-ಕ್ರೂರಂ-ಕಠೋರಂ-ನಿಷ್ಠುರಂ-ದೃಢಂ-ಜಠರಂ--ಮೂರ್ತಿಮತ್-ಮೂರ್ತಂ-ನ-೯- ಬಿರುಸಾಗಿರುವದು. ಮುಟ್ಟಿದರೆ ಘಟ್ಟಿಯಾಗಿರು ವದು.

ಪ್ರವೃದ್ಧಂಪ್ರೌಢಮೇಧಿತಂ।

ಪ್ರವೃದ್ಧಂ-ಪ್ರೌಢಂ- ಏಧಿತಂ-ನ -೩- ಬೆ ಳೆದಂಥಾದ್ದು.

ಪುರಾಣಪ್ರತನಪ್ರತ್ನಪುರಾ ತನಚಿರಂತನಾಃ ॥೭೭॥

ಪುರಾಣಃ-ಪ್ರತನಃ-ಪ್ರತ್ನಃ-ಪುರಾತನಃ-ಚಿರಂತನಃ-ಪು -೫- ಹಳೇದು. ಬಹುಕಾ ಲದ್ದು.

ಪ್ರತ್ಯಗ್ರೋಭಿನವೋನವ್ಯೋನ ವೀನೋನೂತನೋನವಃ । ನೂತ್ನಶ್ಚ

ಪ್ರತ್ಯಗ್ರಃ-ಅಭಿನವಃ-ನವ್ಯಃ-ನವೀನಃ- ನೂತನಃ-ನವಃ - ನೂತ್ನಃ-ಪು-೭-ಹೊಸದು, ಹೊಸ್ತು.

ಸುಕುಮಾರಂತುಕೋಮಲಂ ಮೃದುಳಂಮೃದು॥

ಸುಕುಮಾರಃ- ಕೋಮಲಂ-ಮೃದುಳಂ-ಮೃದು-ನ-೪-ಮೆತ್ತಗಿರುವದು, ಮೃದುವಾ ಗಿರುವದು.

ಅನ್ವಗನ್ವಕ್ಷಮನುಗೇ ನುಪ ದಂಕ್ಲೀಬಮನ್ವಯಂ।

ಅನ್ವಕ್-ಅ-ಅನ್ವಕ್ಷಂ-ಅನುಗಂ- ಅನುಪದಂ-೪-ನ-ಅನ್ವಯು-ಹಿಂದೆ ಸಂಗಡಹೋ ಗುವಂಥಾದ್ದು, ಕೂಡ್ಲೆ ಇರುವದು.

ಪ್ರತ್ಯಕ್ಷಂ(ಸ್ಯಾ )ದೈಂದ್ರಿಯಕ

ಪ್ರತ್ಯಕ್ಷಂ-ಐಂದ್ರಿಯಕಂ-ನ-೨- ಚಕ್ಷುರಾದಿಬಹಿರಿಂದ್ರಿಯಗಳಿಂದುಂಟಾಗುವ ರೂಪಾದಿಸಾಕ್ಷಾತ್ಕಾರಗಳಿಗೂಅಂತಃಕರಣದಿಂದುಂಟಾಗುವ ಸುಖಾದಿ ಸಾಕ್ಷಾತ್ಕಾರಗಳಿಗೂ ಹೆಸರು, ವಿಷಯೇಂದ್ರಿಯ ಸನ್ನಿಕರ್ಷಜನ್ಯವಾದ ಪ್ರತ್ಯಕ್ಷಾನುಭವಾತ್ಮಕಾಂತಃಕರಣವೃತ್ತಿ ಎಂಬ ಭ್ರಮಪ್ರಮಾಸಾಧಾರಣವಾದ ಅರುಹು, ಅಂಥಾ ತಿಳುವಳಿಕೆ

ಯೊಳು ಗೋಚರಿಪ ವಿಷಯು, ಇವುಗಳಿಗೆ ಹೆಸರು.

ಮಪ್ರತ್ಯಕ್ಷಮತೀಂದ್ರಿಯಂ।

ಅಪ್ರತ್ಯಕ್ಷಂ-ಪಾ- ಅತ್ಯಧ್ಯಕ್ಷಂ-ಅತೀಂದ್ರಿಯಂ-೨-ಇಂದ್ರಿಯ ಗಳಿಗೆ ಗೋಚರವಾಗದೆಯಿರುವ ಅನುಮೇಯಾದಿಗಳ ಹೆಸರು. ಸಾಕ್ಷಾತ್ತಾಗಿ ತಿಳಿಯಬಾರದೇ ಇರುವದು.

ಏಕತಾನೊನನ್ಯವೃತ್ತಿರೆಕಾಗ್ರ್ಯಕಾಯನಾ (ವಪಿ) ಅಪ್ಯೇಕಸರ್ಗ ಏಕಾಗ್ರ್ಯೋ ಪ್ಯೇಕಾಯನಗತೊ (ಪಿಚ॥)

ಏಕತಾನಃ-ಅನನ್ಯವೃತ್ತಿಃ-ಏಕಾಗ್ರಃ-ಏಕಾಯನಃ- ಏಕಸರ್ಗಃ-ಐಕಾಗ್ರಃ- ಏಕಾಯನಗತಃ-೭-ಏಕಾಗ್ರಚಿತ್ತನಹೆಸರು. ಒಂದೇ ವಿಷಯದಲ್ಲಿ ವೃತ್ತ್ಯಂತರವಿಲ್ಲದೇ ಸ್ಥಿರವಾದ ಪರಿಭಾವನೆಯುಳ್ಳ ಯೋಗಿ, ಕಾಮಿ ಮುಂತಾದವರು.

(ಪುಂಸ್ಯಾ) ದಿಃಪೂರ್ವಪೌರಸ್ತ್ಯಪ್ರಥಮಾದ್ಯಾ

ಆದಿಃ-ನಿಯತ ಪುಲ್ಲಿಂಗವು-ಪೂರ್ವಃ-ಪೌರಸ್ತ್ಯಃ-ಪ್ರಥಮಃ-ಆದ್ಯಃ-ಪು-೫- ಮೊದಲನೇದರಹೆಸರು.

ಅಥಾಸ್ತ್ರಿಯಾಂ । ಅಂತೋಜಘನ್ಯಂಚರಮ ಮಂತ್ಯಪಾಶ್ಚಾತ್ಯಂಪಶ್ಚಿಮಾಃ॥

ಅಂತಃ-ಸ್ತ್ರೀ-ಜಘನ್ಯಂ-ಚರಮಂ-ನ- ಅಂತ್ಯಃ- ಪಾಶ್ಚಾತ್ಯಃ-ಪಶ್ಚಿಮಃ-೬- ಕಡೇದು, ತುದಿಯಾದ್ದು.

ಮೋಘಂನಿರರ್ಥಕಂ

ಮೋಘಂ-ನಿರರ್ಥಕಂ-ನ-೨-ಪ್ರಯೋಜನವಿಲ್ಲದ್ದು.

ಸ್ಪಷ್ಟಂಸ್ಫುಟಂ ಪ್ರವ್ಯಕ್ತಮುಲ್ಬಣಂ।

ಸ್ಪಷ್ಟಂ-ಸ್ಫುಟಂ-ಪ್ರವ್ಯಕ್ತಂ-ಉಲ್ಬಣಂ ೪- ಪ್ರಕಟವಾದದ್ದು.

ಸಾಧಾರಣಂ ತುಸಾಮಾನ್ಯ

ಸಾಧಾರಣಂ-ಸಾಮಾನ್ಯಂ -೨- ಅನೇಕರಿಗೆ ಸರಿಯಾದ್ದು, ಸಾಧಾರಣವಾದದ್ದು,ಬಹಳ ಜನಗಳ ಏಕವಿಧವಾದ ಅನುಭವಾದಿಗಳಿಗೆ ವಿಷಯವಾದದ್ದು.

ಮೇಕಾಕೀತ್ವೇಕಏಕಕಃ ॥

ಏಕಾಕೀ-ನ್- ಏಕಃ-ಏಕಕಃ-೩-ಸಹಾಯವಿಲ್ಲದೆ ತಾನೊಬ್ಬನೇ ಆದವನು, ಒಂಟಿಗನು.

( ಭಿನ್ನಾರ್ಥಕಾ) ಅನ್ಯತರಏಕತ್ವಾನ್ಯೇತರಾವಪಿ

ಅನ್ಯತರಃ-ಏಕಃ-ತ್ವಃ-ಅನ್ಯಃ-ಇತರಃ-೫-ಭಿನ್ನಾರ್ಥಕಾಃ - ಪ್ರಕೃತಾರ್ಥಕ್ಕಿಂತ

ಲೂ ಬೇರೆಯಾಗಿರುವಂಥಾದ್ದರ ಹೆಸರುಗಳು. ಇವು ಸರ್ವನಾಮಗಳು.

ಉಚ್ಚಾವಚಂ ನೈಕಭೆದ

ಉಚ್ಚಾವಚಂ-ನೈಕಭೇದಂ-೨-ಅನೇಕ ಪ್ರಕಾರವಾಗಿರುವಂಥಾ ಜಗದಿಂದ್ರಜಾಲ ಸ್ವಪ್ನ ಚಿತ್ರಾದಿ ನಾನಾ ಪ್ರಪಂಚ ವಿಕಾರಗಳ ಹೆಸರುಗಳು, ಹಲವುಬಗೆಯಾದದ್ದು

ಮುಚ್ಚಂಡಮ ವಿಲಂಬಿತಂ ॥

ಉಚ್ಚಂಡಂ-ಅವಿಲಂಬಿತಂ-೨-ತ್ವರೆಯುಳ್ಳವನ ಹೆಸರುಗಳು. ನಾವಕಾಶವಿಲ್ಲದ್ದು.

ಅರುಂತುದಸ್ತು ಮರ್ಮಸ್ಪೃ

ಅರುಂತುದಃ-ಮರ್ಮಸ್ಪೃಕ್-೨-ಮರ್ಮವನ್ನು ಭೇದಿಸಿ, ಹೃದಯವ್ಯಥೆಯನ್ನುಂಟುಮಾಡುವ ಹಂಗಿಸೆ ಮುಂತಾದ ಮಾತುಗಳ ಹೆಸರುಗಳು. ಗುಟ್ಟನ್ನು ಎತ್ತಿ ಆಡುವಿಕೆ ಮೊದಲಾದದ್ದು,ತಿವಿನುಡಿಗಾರ.

ಗಬಾಧಂತು ನಿರರ್ಗಳಂ ।

ಅಬಾಧಂ-ನಿರರ್ಗಳಂ-೨-ತಡೆಯಿಲ್ಲದ್ದು ಅಡ್ಡಿಯಿಲ್ಲದ್ದು.

ಪ್ರಸವ್ಯಂ ಪ್ರತಿಕೂಲಂಸ್ಯಾ
ದಪಸವ್ಯ ಮಪಷ್ಠುಚ ॥೮೪॥

ಪ್ರಸವ್ಯಂ-ಪ್ರತಿಕೂಲಂ-ಅಪಸವ್ಯಂ-ಅಪಷ್ಠು-೪-ಪ್ರತಿಕೂಲವಾದದ್ದು, ತಿರುಗಿಬಿದ್ದದ್ದು, ಸರಿಯಿಲ್ಲದ್ದು.

ವಾಮಂ ( ಶರೀರೆ ) ಸವ್ಯಂ
(ಸ್ಯಾ)

ಸವ್ಯಂ-ನ-೧-ಶರೀರೆವಾಮಂ- ಮೈಯೊಳಗೆ ಎಡಗಡೆಗೆ ಹೆಸರು. ಎಡದ ಪಾರ್ಶ್ವ, ವಾಮಭಾಗ.

ದಪಸವ್ಯಂತು ದಕ್ಷಿಣಂ ।

ಅಪಸವ್ಯಂ-ನ-೧-ಶರೀರೆದಕ್ಷಿಣಂ- ಮೈಯ್ಯ ಬಲಕಡೆಗೆ ಹೆಸರು, ಬಲಭಾಗ.

ಸಂಕಟಂ(ನಾತು)ಸಂಬಾಧಃ

ಸಂಕಟಂ-ಸಂಬಾಧಃ-೨-ಇಕ್ಕಟ್ಟಾದ ಸ್ಥಳ, ಅವಕಾಶವಿಲ್ಲದೇ ಇರುವದು.

ಕಲಿಲಂ ಗಹನಂ(ಸಮೆ॥ )

ಕಲಿಲಂ-ಗಹನಂ-೨-ಹೋಗುವದಕ್ಕೂ ಅರಿವುದಕ್ಕೂ, ಮಾಡುವದಕ್ಕೂ ಅಶಕ್ಯವಾಗಿರುವದಕ್ಕೆ ಹೆಸರು.

ಸಂಕೀರ್ಣೆ ಸಂಕುಲಾಕೀರ್ಣೆ

ಸಂಕೀರ್ಣಂ-ಸಂಕುಲಂ-ಆಕೀರ್ಣಂ-೩-ಒಂದಕ್ಕೊಂದು ಬೆರತುಕೊಂಡಿರುವದರ ಹೆಸರುಗಳು.

| | |
|---|---|
| ಮುಂಡಿತಂ ಪರಿವಾಪಿತಂ । | ಮುಂಡಿತಂ-ಪರಿವಾಪಿತಂ-೨-ಬೋಳಿಸಲ್ಪಟ್ಟದ್ದು. |
| ಗ್ರಥಿತಂಗ್ರಂಥಿತಂದೃಬ್ಧಂ | ಗ್ರಥಿತಂ-ಗ್ರಂಥಿತಂ-ದೃಬ್ಧಂ-೩-ಕಟ್ಟಲ್ಪಟ್ಟ ಅಥವಾ ಪೋಣಿಸಲ್ಪಟ್ಟ ಪುಷ್ಪಮಾಲಾದಿಗಳ ಹೆಸರುಗಳು. (ಗ್ರಥಿತಂಗುಂಭಿತಂದೃಬ್ಧಂ)ಎಂತಲೂ ಪಾಠವಿದೆ. |
| ವಿಸೃತಂ ವಿಸ್ತೃತಂತತಂ ॥ | ವಿಸೃತಂ-ವಿಸ್ತೃತಂ-ತತಂ-೩- ವ್ಯಾಪಿಸಿ ಇರುವವರ ಹೆಸರುಗಳು. |
| ಅಂತರ್ಗತಂವಿಸ್ಮೃತಂ(ಸ್ಮೃತ) | ಅಂತರ್ಗತಂ-ವಿಸ್ಮೃತಂ-೨-ಮರೆಯಲ್ಪಟ್ಟದ್ದು, ಮರತು ಹೋದದ್ದು, ಜ್ಞಾಪಕ ತಪ್ಪಿ ಹೋದದ್ದು. |
| ಪ್ರಾಪ್ತೆಪ್ರಣಿಹಿತೆ (ಸಮೆ) | ಪ್ರಾಪ್ತಂ-ಪ್ರಣಿಹಿತಂ-೨-ಹೊಂದಲ್ಪಟ್ಟದ್ದು. |
| ವೆಲ್ಲಿತಪ್ರೇಂಖಿತಾಧೂತ ಚಲಿತಾಕಂಪಿತಾಧುತೆ॥ | ವೆಲ್ಲಿತಃ-ಪ್ರೇಂಖಿತಃ-ಅವಧೂತಃ-ಚಲಿತಃ-ಆಕಂಪಿತಃ- ಧುತಃ-೬- ಕದಲಿಸಲ್ಪಟ್ಟಂಥಾದ್ದು, ಅಲ್ಲಾಡಿಸಲ್ಪಟ್ಟದ್ದು. |
| ನುತ್ತನುನ್ನಾಸ್ತನಿಷ್ಠ್ಯೂತ ವಿದ್ಧಕ್ಷಿಪ್ತೇರಿತಾ (ಸ್ಸಮಾಃ) | ನುತ್ತಃ-ನುನ್ನಃ-ಅಸ್ತಃ-ನಿಷ್ಠ್ಯೂತಃ-ವಿದ್ಧಃ-ಕ್ಷಿಪ್ತಃ-ಈರಿತಃ-೭- ನೂಕಲ್ಪಟ್ಟದ್ದು ತಳ್ಳಲ್ಪಟ್ಟದ್ದು. |
| ಪರಿಕ್ಷಿಪ್ತಂತುನಿವೃತಂ | ಪರಿಕ್ಷಿಪ್ತಂ- ನಿವೃತಂ-೨- ಸುತ್ತಿಕೊಳ್ಳಲ್ಪಟ್ಟದ್ದು. |
| ಮೂಷಿತಂಮುಷಿತಾರ್ಥಕಂ॥ | ಮೂಷಿತಂ-ಮುಷಿತಂ-೨-ಕದಿಯಲ್ಪಟ್ಟದ್ದು. |
| ಪ್ರವೃದ್ಧಪ್ರಸೃತೆ | ಪ್ರವೃದ್ಧಂ-ಪ್ರಸೃತಂ-೨-ಕಡೆಗೂ ಬೆಳೆದಿರುವದು. |
| ನ್ಯಸ್ತನಿಸೃಷ್ಟ ಗುಣಿತಾಹತೆ । | ನ್ಯಸ್ತಂ-ನಿಸೃಷ್ಟಂ-೨-ಇರಿಸಲ್ಪಟ್ಟದ್ದು. ಗುಣಿತಂ-ಆಹತಂ-೨-ಗುಣಿಸಲ್ಪಟ್ಟದ್ದು. ಹೆಚ್ಚಿಸಲ್ಪಟ್ಟದ್ದು, ಹೊಡಿಯಲ್ಪಟ್ಟದ್ದು. |
| ನಿದಿಗ್ಧೋಪಚಿತೊ | ನಿದಿಗ್ಧಃ-ಉಪಚಿತಃ-೨-ಆಲೆ ತೆಹಚ್ಚಿದಧಾನ್ಯಾದಿಗಳ ಹೆಸರುಗಳು, ವೃದ್ಧಿಯಾದದ್ದು. |
| ಗೂಢಗುಪ್ತೆ | ಗೂಢಂ-ಗುಪ್ತಂ-೨-ಬಚ್ಚಿಡಲ್ಪಟ್ಟದ್ದು. |

ಗುಂಠಿತರೂಷಿತೇ ॥೪೯॥

ಗುಂಠಿತಂ-ರೂಷಿತಂ-೨- ಧೂಳಿ ಮುಂತಾದವುಗಳಿಂದ ಮುಚ್ಚಲ್ಪಟ್ಟದ್ದು.

ದ್ರುತಾವದೀರ್ಣೇ

ದ್ರುತಂ-ಅವದೀರ್ಣಂ-೨-ಕರಗಿಸಲ್ಪಟ್ಟದ್ದು.

ಉದ್ಗೂರ್ಣೋದ್ಯತೇ

ಉದ್ಗೂರ್ಣಂ-ಉದ್ಯತಂ-೨- ಉದ್ದವಾಗಿ ಮೇಲಕ್ಕೆ ಎತ್ತಲ್ಪಟ್ಟದ್ದರ ಹೆಸರುಗಳು.

ಕಾಚಿತಶಿಕ್ಯಿತೇ ।

ಕಾಚಿತಂ-ಶಿಕ್ಯಿತಂ-೨-ಉಟ್ಟಿಯಲ್ಲಿಡಲ್ಪಟ್ಟದ್ದು, ಚಿಕ್ಕದರಲ್ಲಿ ಇಡಲ್ಪಟ್ಟದ್ದು, (ಕಾರಿತಶಿಕ್ಷಿತೇ) ಎಂಬುವ ಪಾಠದಲ್ಲಿ ಲೌಕಿಕ ವೈದಿಕ ಕರ್ಮಗಳಲ್ಲಿ ಕೃತಾಭ್ಯಾಸವೆಂದರ್ಥವು.

ಘ್ರಾಣಘ್ರಾತೇ

ಘ್ರಾಣಂ-ಘ್ರಾತಂ-೨- ಮೂಸಿನೋಡಲ್ಪಟ್ಟದ್ದು.

ದಿಗ್ಧಲಿಪ್ತೇ

ದಿಗ್ಧಂ-ಲಿಪ್ತಂ-೨-ಬಳಿಯಲ್ಪಟ್ಟದ್ದು.

ಸಮುದಕ್ತೋದ್ಧೃತೇ(ಸಮೇ)॥

ಸಮುದಕ್ತಂ-ಉದ್ಧೃತಂ-೨- ಮೇಲಕ್ಕೆ ಕೆಳಗಿನಿಂದ ಎತ್ತಲ್ಪಟ್ಟದ್ದು.

ವೇಷ್ಟಿತಂ(ಸ್ಯಾ) ದ್ವಲಯಿತಂ ಸಂವೀತಂ ರುದ್ಧಮಾವೃತಂ ॥

ವೇಷ್ಟಿತಂ-ವಲಯಿತಂ-ಸಂವೀತಂ-ರುದ್ಧಂ-ಆವೃತಂ-೫-ಈಚಿನವರಿಗೆ ಅಡ್ಡವಾಗಿರುವಂತೆ ಸುತ್ತಿಕೊಳ್ಳಲ್ಪಟ್ಟದ್ದು.

ರುಗ್ಣಭುಗ್ನೇಥ

ರುಗ್ಣಂ-ಭುಗ್ನಂ-೨-ಮುರಿದುಹೋದದ್ದು.

ನಿಶಿತ ಕ್ಷ್ಣುತಶಾತಾನಿತೇಜಿತೇ।

ನಿಶಿತಂ-ಕ್ಷ್ಣುತಂ-ಶಾತಂ-ತೇಜಿತಂ-೪- ಹದವಿಡಲ್ಪಟ್ಟದ್ದು, ಅಂದರೆ ಸಂಪೂರ್ಣವಾಗಿ ಹಂಚಿನ ಅವಸ್ಥೆಗೆ ಬಂದಿರುವದು.

(ಸ್ಯಾದ್ವಿನಾಶೋನ್ಮುಖಂ) ಪಕ್ವಂ ।

ಪಕ್ವಂ-೧-ವಿನಾಶೋನ್ಮುಖಂ-ನಾಶಕ್ಕೆ ಆಯುತ್ತಪಟ್ಟದ್ದು.

ಹ್ರೀಣಹ್ರೀತೌತುಲಜ್ಜಿತೇ ।

ಹ್ರೀಣಃ-ಹ್ರೀತಃ-ಲಜ್ಜಿತಃ-೩-ನಾಚಿಕೆಗೊಂಡವನು.

ವೃತ್ತೇತುವೃತ್ತವಾವೃತೌ

ವೃತಃ-ವೃತ್ತಃ-ವಾವೃತ್ತಃ-೩-ಅಂಗೀಕರಿಸಲ್ಪಟ್ಟವನು, ಸನಿಗೆ ಯಿವನಾಗಬೇಕೆಂದು ವರಿಸಲ್ಪಟ್ಟವನು.



ಸಂಯೋಜಿತ ಉಪಾಹಿತೇ॥ ಸಂಯೋಜಿತಂ-ಉಪಾಹಿತಂ-೨-ಕೂಡಿ

ಸಲ್ಪಟ್ಟದ್ದು, ಬೆಸೆಯಲ್ಪಟ್ಟದ್ದು.

ಪ್ರಾಪ್ಯಂಗಮ್ಯಂ ಸಮಾಸಾದ್ಯಂ

ಪ್ರಾಪ್ಯಂ-ಗಮ್ಯಂ- ಸಮಾಸಾದ್ಯಂ-೩-ಹೊಂದತಕ್ಕದ್ದು, ತೆಗದುಕೊಳ್ಳತಕ್ಕದ್ದು. ಪಡೆಯತಕ್ಕದ್ದು.

ಸ್ಯನ್ನಂ ರೀಣಂ ಸ್ರುತಂಸ್ನುತಂ।

ಸ್ಯನ್ನಂ-ರೀಣಂ-ಸ್ರುತಂ-ಸ್ನುತಂ-೪-ಸೋರಿಹೋದುದು. ಜನಿದುಹೋದುದು.

ಸಂಗೂಢಃ (ಸ್ತ್ರ್ಯ) ಸ್ಸಂಕಲಿತೊ

ಸಂಗೂಢಃ-ಸಂಕಲಿತಃ-೨- ಹುದುಗಲ್ಪಟ್ಟದ್ದು.೧ ಸೇರಿಸಲ್ಪಟ್ಟದ್ದು, ಬೆರಸಲ್ಪಟ್ಟದ್ದು, ತಗೆಲುಹಾಕಲ್ಪಟ್ಟದ್ದು.

ಪಗೀತಃ ಖ್ಯಾತಗರ್ಹಣಃ ॥

ಅಪಗೀತಃ-ಖ್ಯಾತಗರ್ಹಣಃ - ೨-ಪ್ರಸಿದ್ಧನಾದ ನಿಂದೆಯುಳ್ಳವನು.

ವಿವಿಧಃ (ಸ್ತ್ರ್ಯ) ದ್ಬಹುವಿಧೊ ನಾನಾರೂಪಃ ಪೃಥಗ್ವಿಧಃ ।

ವಿವಿಧಃ-ಬಹುವಿಧಃ-ನಾನಾರೂಪಃ-ಪೃಥಗ್ವಿಧಃ-೪-ಬೇರೆ ಬೇರೆ ರೂಪವುಳ್ಳದ್ದು, ನಾನಾವಿಧವಾಗಿರುವಂಥಾದ್ದು.

ಅವರೀಣೊಧಿಕ್ಕೃತಃ(ಸ್ತ್ರ್ಯ)

ಅವರೀಣಃ-ಧಿಕ್ಕೃತಃ-೨- ಧಿಕ್ಕರಿಸಲ್ಪಟ್ಟವನು. ಜಾದಾಡಲ್ಪಟ್ಟವನು.

ಅವಧ್ವಸ್ತೊವಚೂರ್ಣಿತಃ॥

ಅವಧ್ವಸ್ತಃ-ಅವಚೂರ್ಣಿತಃ-೨-ಪುಡಿಯಾಗುವಹಾಗೆ ಕುಟ್ಟಲ್ಪಟ್ಟದ್ದು, ಹಿಟ್ಟುಮಾಡಲ್ಪಟ್ಟದರ ಹೆಸರುಗಳು.

(ಅನಾಯಾಸಕೃತಂ)ಫಾಂಟಂ

ಫಾಂಟಂ-೧-ಅನಾಯಸಕೃತಂ- ಆಯಾಸವಿಲ್ಲದೆ ಮಾಡಲ್ಪಟ್ಟ ಕಷಾಯಾದಿಗಳ ಹೆಸರು.

ಸ್ವನಿತಂಧ್ವನಿತಂ (ಸಮೆ) ॥

ಸ್ವನಿತಂ-ಧ್ವನಿತಂ-೨-ಕೂಗುತ್ತಿರುವಂಥಾದ್ದು, ಮೊರೆಯುತ್ತಿರುವಂಥಾದ್ದು.

ಬದ್ಧೆ ಸಂದಾನಿತಂಮೂತಮುದ್ದಿತಂ ಸಂದಿತಂಸಿತಂ ॥

ಬದ್ಧಂ-ಸಂದಾನಿತಂ-ಮೂತಂ-ಉದ್ದಿತಂ-ಸಂದಿತಂ-ಸಿತಂ-೬-ಕಟ್ಟಲ್ಪಟ್ಟದರ ಹೆಸರು.

ನಿಷ್ಪಕ್ವಂಕ್ವಥಿತಂ

ನಿಷ್ಪಕ್ವಂ-ಕ್ವಥಿತಂ-೨-ಎಂಟನೇಭಾಗ ಉಳಿಯುವಂತೆ ಕಾಯಿಸಲ್ಪಟ್ಟದ್ದು, ಅಷ್ಟಮಾಂಶಾವಶಿಷ್ಟವಾದ ಕಷಾಯಾದಿಗಳ ಹೆಸರುಗಳು.

(ಪಾಕೆ ಕ್ಷೀರಾಜ್ಯಹವಿಷಾಂ)

ಶೃತಂ-೧- ಕ್ಷೀರಾಜ್ಯಹವಿಷಾಂಪಾಕೆ,

| | |
|---|---|
| ಶ್ರೃತಂ । | ಹಾಲು, ತುಪ್ಪ, ಅನ್ನ, ಮುಂತಾದವುಗಳೆನ್ನು ಬೆಂಕೀ ಕೆಂಡದವ್ಯಾಲಿಟ್ಟು ಹದವಾಗಿ ಕುದಿಸುವದಕ್ಕೆ ಹೆಸರು. |
| ನಿರ್ವಾಣೊ (ಮುನಿವಹ್ನ್ಯಾದೌ) | ನಿರ್ವಾಣಃ-೧-ಮುನಿವಹ್ನ್ಯಾದೌ-ಶಾಂತ ನ್ಯಾಪಾರನಾದ ಯೋಗಿಗೂ, ಆರಿಹೋದ ಬೆಂಕೆ, ಮೊದಲಾದ್ದಕ್ಕೂ ಹೆಸರು. |
| ನಿರ್ವಾತ(ಸ್ತುಗತೆನಿಲೆ)॥೭೬॥ | ನಿರ್ವಾತಃ-೧-ಗತೇಅನಿಲೆ- ನಿಂತುಹೋದ ಗಾಳಿಯ ಹೆಸರು. |
| ಪಕ್ವಂ ಪರಿಣತಂ | ಪಕ್ವಂ-ಪರಿಣತಂ-೨-ಕಾಲವಶದಿಂದ ಪಕ್ವವಾಗಿ ಹಣ್ಣುಬಾರಿದಂಥಾದ್ದು. |
| ಗೂನಂ ಹನ್ನೆ | ಗೂನಂ-ಹನ್ನಂ-೨-ಬಿಡಲ್ಪಟ್ಟ ಮಲದ ಹೆಸರು. ಸಗಣಿ ತೊಪ್ಪೆ ಮುಂತಾದ್ದು. |
| ಮೀಢಂತು ಮೂತ್ರಿತೆ । | ಮೀಢಂ-ಮೂತ್ರಿತಂ-೨-ಬಿಡಲ್ಪಟ್ಟ ಮೂತ್ರದ ಹೆಸರುಗಳು. ಗಂಜಳಮುಂತಾದ್ದು. |
| ಪುಷ್ಟೆತುಪುಷಿತಂ | ಪುಷ್ಟಂ-ಪುಷಿತಂ-೨-ಸಲಹಲ್ಪಟ್ಟ ಹಕ್ಕಿ ಮುಂತಾದವುಗಳು. ಪೊರೆಯಲ್ಪಟ್ಟದ್ದು. |
| ಸೋಢೆಕ್ಷಾಂತ | ಸೋಢಂ-ಕ್ಷಾಂತಂ-೧-ಸೈರಿಸಿ ಕೊಳ್ಳಲ್ಪಟ್ಟ ಬೊಯಿಲುಹೊಡತ ಮುಂತಾದವುಗಳೆ ಹೆಸರು. |
| ಮುದ್ವಾಂತ ಮುದ್ಗತೆ ॥ | ಉದ್ವಾಂತಂ- ಉದ್ಗತಂ-೨- ಒಂದರಿಂದ ಈಚೆಗೆ ಹೊರಟದ್ದು ಒಂದನ್ನು ಪಡಕೊಂಡು ಹೊರಹೊರಟದ್ದು, ಒಳಗಿನಿಂದ ಮೇಲಕ್ಕೆ ಬರುವಿಕೆ. |
| ದಾಂತಸ್ತು ದಮಿತೆ | ದಾಂತಃ-ದಮಿತಃ-ಇಂದ್ರಿಯ ನಿಗ್ರಹವುಳ್ಳವನಿಗೂ ನಿಗ್ರಹಿಸಲ್ಪಟ್ಟ ಇಂದ್ರಿಯಕ್ಕೂ ಹೆಸರು. |
| ಶಾಂತಶ್ಯಮಿತೆ | ಶಾಂತಃ-ಶಮಿತಃ-೨-ಕಾಮಕ್ರೋಧಾದಿಗಳಿಲ್ಲದೇ ಮನಸ್ಸನ್ನು ನಿಗ್ರಹಿಸಿದವನಿಗೂ ನಿಗ್ರಹಿಸುವ ಮನಸ್ಸಿಗೂ ಹೆಸರು. |
| ಪ್ರಾರ್ಥಿತೆರ್ಥಿತ । | ಪ್ರಾರ್ಥಿತಃ-ಅರ್ಥಿತಃ-೨-ಅಪೇಕ್ಷಿಸಲ್ಪಟ್ಟದ್ದು ಆಕಾಂಕ್ಷಿಸಲ್ಪಟ್ಟ ವಿಷಯವನ್ನು, |

ಜ್ಞಪ್ತಸ್ತು ಜ್ಞಾಪಿತೇ

ಜ್ಞಪ್ತಃ- ಜ್ಞಾಪಿತಃ-೨- ಅರುಹುಳ್ಳವನಿಗೂ ಅರುಹಲ್ಪಟ್ಟವನಿಗೂ ಹೆಸರುಗಳು. ಜ್ಞಪಿತೇ-ಈ ಪಾಠದಲ್ಲಿ, ಹಿಂಸೆಮಾಡಲ್ಪಟ್ಟವನಿಗೂ ಹಿಂಸೆಯುಳ್ಳವನಿಗೂ ಹೆಸರುಗಳು.

ಛನ್ನಶ್ಛಾದಿತೇ

ಛನ್ನಃ-ಛಾದಿತಃ-೨-ಹೊದಿಸಲ್ಪಟ್ಟದ್ದು ಮುಚ್ಚಲ್ಪಟ್ಟದು.

ಪೂಜಿತೇಂಚಿತಃ ॥೯೪॥

ಪೂಜಿತಃ-ಅಂಚಿತಃ-೨-ಪೂಜಿಸಲ್ಪಟ್ಟದ್ದು.

ಪೂರ್ಣಸ್ತು ಪೂರಿತೇ

ಪೂರ್ಣಃ-ಪೂರಿತಃ-೨-ತುಂಬಲ್ಪಟ್ಟದ್ದು ತುಂಬಿಸಲ್ಪಟ್ಟದ್ದು.

ಕ್ಲಿಷ್ಟಃ ಕ್ಲಿಶಿತೇ

ಕ್ಲಿಷ್ಟಃ-ಕ್ಲಿಶಿತಃ-೨-ದುಃಖಗಳಿಂದ ಪೀಡಿಸಲ್ಪಟ್ಟವನು.

ವಸಿತೇಸಿತಃ

ಅವಸಿತಃ-ಸಿತಃ-೨-ಮುಗಿದುಹೋದದ್ದು ಕಡೆಗಂಡದ್ದು ಆಗಿಹೋದದ್ದು.

ಪ್ರುಷ್ಟಪ್ಲುಷ್ಟೋಷಿತಾ ದಗ್ಧೇ

ಪ್ರುಷ್ಟಃ-ಪ್ಲುಷ್ಟಃ-ಉಷಿತಃ-ದಗ್ಧಃ-೪-ಸುಡಲ್ಪಟ್ಟದ್ದು.

ತಷ್ಟತ್ವಷ್ಟೌ ತನೂಕೃತೇ ॥

ತಷ್ಟಃ- ತ್ವಷ್ಟಃ-ತನೂಕೃತಃ-೩- ಕೆತ್ತಿ ತೋಪಡಾಹಿಡಿದು, ಪರದು, ಕೆರದು, ಉಜ್ಜಿ ಕೊಸ್ತು ಹಿಂದಿ ಔಕಿ ಪತ್ತಿ ಹಿಸಿಕಿ ಇತ್ಯಾದಿಕಾರು ಕೃತ್ಯಗಳಿಂದ ಸಣ್ಣಾಗೆಮಾಡಲ್ಪಟ್ಟಸಾಮಾನು.

ವೇಧಿತಚ್ಛಿದ್ರಿತೌ ವಿದ್ಧೇ

ವೇಧಿತಃ-ಛಿದ್ರಿತಃ- ವಿದ್ಧಃ-೩- ತೊಳಿಯುಡಲ್ಪಟ್ಟದ್ದು, ತೂತು ಕೊರೆಯಲ್ಪಟ್ಟದ್ದು.

ವಿನ್ನವಿತ್ತೌ ವಿಚಾರಿತೇ ।

ವಿನ್ನಃ-ವಿತ್ತಃ-ವಿಚಾರಿತಃ-೩- ವಿಚಾರಿಸಲ್ಪಟ್ಟದ್ದು, ಪ್ರಸಿದ್ಧವಾಗಿ ಕೇಳಿ ತಿಳಕೊಳ್ಳಲ್ಪಟ್ಟದ್ದು.

ನಿಷ್ಪ್ರಭೇ ವಿಗತಾರೋಕೌ

ನಿಷ್ಪ್ರಭಃ- ವಿಗತಃ- ಅರೋಕಃ-೩-ಕಳೆಕುಂದಿ ಕಾಂತಿಯಿಲ್ಲದೇ ಯಿರುವದು, ವಿಗತಾಲೋಕವೆಂತಲೂ ಪಾಠವಿದೆ.

ವಿಲೀನೇ ವಿದ್ರುತದ್ರುತೌ ।

ವಿಲೀನಃ-ವಿದ್ರುತಃ-ದ್ರುತಃ-೩- ಗಟ್ಟಿಕಟ್ಟಿ ... ಕರಗಲ್ಪಟ್ಟವನು.

ಸಿದ್ಧೇನಿರ್ವೃತ್ತ ನಿಷ್ಪನ್ನೌ

ಸಿದ್ಧಃ-ನಿರ್ವೃತ್ತಃ-ನಿಷ್ಪನ್ನಃ-೩-ನೆರವೇರಿಸಲ್ಪಟ್ಟಿರುವದು. ಆಯುತ್ತವಾಗಿ ವದಗಿಯಿರುವದು.

ದಾರಿತೆಭಿನ್ನಭೇದಿತೌ।

ದಾರಿತಃ-ಭಿನ್ನಃ-ಭೇದಿತಃ - ೩-ಶೀಳುವದಕ್ಕೆ ಯೋಗ್ಯವಾಗಿರುವದು, ಕಡಿಯಲ್ಪಟ್ಟದ್ದು, ಶಿಗುಳಲ್ಪಟ್ಟದ್ದು.

ಊತಂಸ್ಯೂತಮುತಂ (ಚೇತಿ ತ್ರಿತಯಂತಂತುಸಂತತೆ)

ಊತಂ-ಸ್ಯೂತಂ-ಉತಂ-ಈ ೩ ನ್ನು, ತಂತುಸಂತತೆ-ದಾರದಿಂದ ಹೊಲಿಯಲ್ಪಟ್ಟದ್ದು. ನೂಲು ಹೊಕ್ಕಿರುವದು.

ಸ್ಯಾದರ್ಹಿತೆನಮಸ್ಯಿತನಮಸಿತ ಮಪಚಾಯಿತಾರ್ಚಿತಾಪಚಿತಂ।

ಅರ್ಹಿತಂ-ನಮಸ್ಯಿತಂ-ಅಪಚಾಯಿತಂ-ಅರ್ಚಿತಂ-ಅಪಚಿತಂ-೬-ಪೂಜಿಸಲ್ಪಟ್ಟದ್ದು ನಮಸ್ಕರಿಸಲ್ಪಟ್ಟದ್ದು.

ವರಿವಸಿತೆವರಿವಸ್ಯಿತ ಮುಪಾಸಿತಂಚೋಪಚರಿತಂಚ ।

ವರಿವಸಿತಂ-ವರಿವಸ್ಯಿತಂ - ಉಪಾಸಿತಂ-ಉಪಚರಿತಂ -೪- ಸೇವಿಸಲ್ಪಟ್ಟಂಥಾದ್ದು.

ಸಂತಾಪಿತಸಂತಪ್ತೌ ಧೂಪಾಯಿತಧೂಪಿತೌಚದೂನಶ್ಚ ।

ಸಂತಾಪಿತಃ-ಸಂತಪ್ತಃ-ಧೂಪಾಯಿತಃ-ಧೂಪಿತಃ-ದೂನಃ-೫-ಬಿಸಿಲು ಸೆಕೆ ಮುಂತಾದವುಗಳಲ್ಲಿ ಹೊಗೆ ಹೊರಡುವಂತೆ ಪಣಗಿಸಿ ಕಾಯಿಸಲ್ಪಟ್ಟಂಥಾದ್ದು.

ಹೃಷ್ಟೋಮತ್ತಸ್ತೃಪ್ತಃ ಪ್ರಹ್ಲನ್ನಃಪ್ರಮುದಿತಃಪ್ರೀತಃ।

ಹೃಷ್ಟಃ-ಮತ್ತಃ-ತೃಪ್ತಃ-ಪ್ರಹ್ಲನಃ-ಪ್ರಮುದಿತಃ-ಪ್ರೀತಃ-೬-ಸಂತೋಷಪಟ್ಟವನು.

ಛಿನ್ನಂಛಾತಂಲೂನಂಕೃತ್ತಂ ದಾತಂದಿತಂಛಿತಂವೃಕ್ಣಂ।

ಛಿನ್ನಃ-ಛಾತಃ-ಲೂನಂ-ಕೃತ್ತಂ-ದಾತಂ-ದಿತಂ-ಛಿತಂ-ವೃಕ್ಣಂ-೮-ಕುಯ್ಯಲ್ಪಟ್ಟದ್ದು, ಕತ್ತರಿಸಲ್ಪಟ್ಟದ್ದು.

ಸ್ರಸ್ತಂಧ್ವಸ್ತಂ ಭ್ರಷ್ಟಂಸ್ಕನ್ನಂಪನ್ನಂಚ್ಯುತಂಗಳಿತಂ ॥

ಸ್ರಸ್ತಂ-ಧ್ವಸ್ತಂ-ಭ್ರಷ್ಟಂ-ಸ್ಕನ್ನಂ-ಪನ್ನಂ-ಚ್ಯುತಂ-ಗಳಿತಂ-೭-ಜಾರಿಬಿದ್ದದ್ದು, ಕೆಳಬೀಳೊಂಬುವದು, ತಪ್ಪಿಹೋಗಿರುವದು.

ಲಬ್ಧಂಪ್ರಾಪ್ತಂ ವಿನ್ನಂಭಾವಿತಮಾಸಾದಿತಂಚಭೂತಂಚ ।

ಲಬ್ಧಂ-ಪ್ರಾಪ್ತಂ-ವಿನ್ನಂ-ಭಾವಿತಂ-ಆಸಾದಿತಂ-ಭೂತಂ-೬- ಹೊಂದಲ್ಪಟ್ಟಿರುವದು, ಪಡೆಯಲ್ಪಟ್ಟಿರುವದು, ಆಗಿಬಂದಿರುವದು.

ಅನ್ವೇಷಿತಂಗವೇಷಿತಮನ್ವಿಷ್ಟಂಮಾರ್ಗಿತಂಮೃಗಿತಂ ।

ಅನ್ವೇಷಿತಂ-ಗವೇಷಿತಂ-ಅನ್ವಿಷ್ಟಂ-ಮಾರ್ಗಿತಂ-ಮೃಗಿತಂ-೫-ಹುಡುಕಲ್ಪಟ್ಟಿರುವದು.

ಆರ್ದ್ರಂಸಾರ್ದ್ರಂಕ್ಲಿನ್ನಂತಿಮಿತಂಸ್ತಿಮಿತಂಸಮುನ್ನಮುತ್ತಂಚ ।

ಆರ್ದ್ರಂ-ಸಾರ್ದ್ರಂ-ಕ್ಲಿನ್ನಂ- ತಿಮಿತಂ-ಸ್ತಿಮಿತಂ-ಸಮುನ್ನಂ-ಉತ್ತಂ-೭-ನೀರಿನಲ್ಲಿ ನೆನೆದದ್ದು, ನೆಂದುರಸವೇರಿರುವದು.

ತ್ರಾತಂತ್ರಾಣಂರಕ್ಷಿತಮವಿತಂಗೋಪಾಯಿತಂಗುಪ್ತಂ ॥

ತ್ರಾತಂ-ತ್ರಾಣಂ-ರಕ್ಷಿತಂ-ಅವಿತಂ-ಗೋಪಾಯಿತಂ-ಗುಪ್ತಂ-೬-ಪೊರೆಯಲ್ಪಟ್ಟದ್ದು.

ಅವಗಣಿತಮವಮತಾವಜ್ಞಾತೇಅವಮಾನಿ ತಂಚಪರಿಭೂತೇ ।

ಅವಗಣಿತಂ-ಅವಮತಂ-ಅವಜ್ಞಾತಂ-ಅವಮಾನಿತಂ-ಪರಿಭೂತಂ-೫- ತಿರಸ್ಕರಿಸಲ್ಪಟ್ಟದ್ದು, ಅವಮಾನಮಾಡಲ್ಪಟ್ಟದ್ದು.

ತ್ಯಕ್ತಂಹೀನಂವಿಧುತಂಸಮುಜ್ಝಿತಂಧೂತಮುತ್ಸೃಷ್ಟಂ ॥

ತ್ಯಕ್ತಂ-ಹೀನಂ-ವಿಧುತಂ-ಸಮುಜ್ಝಿತಂ-ಧೂತಂ-ಉತ್ಸೃಷ್ಟಂ-೬-ಬಿಡಲ್ಪಟ್ಟದ್ದು.

ಉಕ್ತಂಭಾಷಿತಮುದಿತಂ ಜಲ್ಪಿತಮಾಖ್ಯಾತಮಭಿಹಿತಂಲಪಿತಂ

ಉಕ್ತಂ-ಭಾಷಿತಂ-ಉದಿತಂ-ಜಲ್ಪಿತಂ-ಆಖ್ಯಾತಂ- ಅಭಿಹಿತಂ-ಲಪಿತಂ-೭- ಹೇಳಲ್ಪಟ್ಟದ್ದು, ನುಡಿಯಲ್ಪಟ್ಟದ್ದು.

ಬುದ್ಧಂಬುಧಿತಂಮನಿತಂವಿದಿತಂಪ್ರತಿಪನ್ನಮವಸಿತಾವಗತೇ ॥

ಬುದ್ಧಂ-ಬುಧಿತಂ- ಮನಿತಂ-ವಿದಿತಂ-ಪ್ರತಿಪನ್ನಂ- ಅವಸಿತಂ-ಅವಗತಂ- ೭- ತಿಳಿಯಲ್ಪಟ್ಟದ್ದು, ಅರಿಕೆಯಾಗಲ್ಪಡುವದು.

ಊರೀಕೃತಮುರರೀಕೃತಮಂಗೀಕೃತ ಮಾಶ್ರುತಂಪ್ರತಿಜ್ಞಾತಂ । ಸಂಗೀರ್ಣಂವಿದಿತಂಸಂಶ್ರುತಂಸಮಾಹಿತ ಮುಪಶ್ರುತೋಪಗತಂ ॥೧೯॥

ಊರೀಕೃತಂ-ಪಾ-ಉರೀಕೃತಂ-ಉರರೀಕೃತಂ-ಅಂಗೀಕೃತಂ-ಆಶ್ರುತಂ- ಪ್ರತಿಜ್ಞಾತಂ-ಸಂಗೀರ್ಣಂ-ವಿದಿತಂ - ಸಂಶ್ರುತಂ - ಸಮಾಹಿತಂ-ಉಪಶ್ರುತಂ-ಉಪಗತಂ-೧೧-ಅಂಗೀಕರಿಸಲ್ಪಟ್ಟದ್ದು. ಒಪ್ಪಿಕೊಳ್ಳಲ್ಪಟ್ಟದ್ದು, ಪ್ರತಿಜ್ಞೆಮಾಡಿ ನುಡಿಯಲ್ಪಟ್ಟದ್ದು.

ಈಡಿತಶಸ್ತಪಣಾಯಿತಪನಾಯಿತಪ್ರಣುತಪಣಿತಪನಿತಾನಿ । ಅಪಗೀರ್ಣ್ಣವರ್ಣಿತಾಭಿಷ್ಟುತೇಳಿತಾನಿಸ್ತುತಾರ್ಥಾನಿ ॥

ಈಡಿತಂ-ಶಸ್ತಂ-ಪಣಾಯಿತಂ-ಪನಾಯಿತಂ-ಪ್ರಣುತಂ-ಪಣಿತಂ-ಪನಿತಂ - ಅಪಗೀರ್ಣಂ-ವರ್ಣಿತಂ-ಅಭಿಷ್ಟುತಂ- ಈಳಿತಂ-ಸ್ತುತಂ-೧೨-ಹೊಗಳಲ್ಪಟ್ಟದ್ದು, ಕೊಂಡಾಡಲ್ಪಟ್ಟದ್ದು, ಬಣ್ಣಿಸಲ್ಪಟ್ಟದ್ದು.

ಭಕ್ಷಿತಚರ್ವಿತಲಿಪ್ತಪ್ರತ್ಯವಸಿತಗಳಿತ ಗಿಳಿತ ಖಾದಿತಪ್ಸಾತಂ ಅಭ್ಯವಹೃತಾನ್ನ ಜಗ್ಧ ಗ್ರಸ್ತಗ್ಲಸ್ತಾಶಿತಂಭುಕ್ತೇ ॥

ಭಕ್ಷಿತಂ-ಚರ್ವಿತಂ-ಲಿಪ್ತಂ-ಪಾ-ಲೀಢಂ-ಪ್ರತ್ಯವಸಿತಂ-ಗಿಳಿತಂ-ಗಳಿತಂ-ಖಾದಿತಂ--ಪ್ಸಾತಂ-ಅಭ್ಯವಹೃತಂ-ಅನ್ನಂ-ಜಗ್ಧಂ- ಗ್ರಸ್ತಂ-ಗ್ಲಸ್ತಂ-ಅಶಿತಂ-ಭುಕ್ತಂ-೧೪-ಭುಜಿಸಲ್ಪಟ್ಟ

ಕ್ಷೇಪಿಷ್ಠಕ್ಷೋದಿಷ್ಠ ಪ್ರೇಷ್ಠವರಿಷ್ಠಸ್ಥವಿಷ್ಠಬಂಹಿಷ್ಠಾಃ । ಕ್ಷಿಪ್ರಕ್ಷುದ್ರಾಭೀಪ್ಸಿತಪೃಥುಪೀವರಬಹುಪ್ರಕರ್ಷಾರ್ಥಾಃ ॥

ದ್ದು-ಉಣ್ಣಲ್ಪಟ್ಟದ್ದು, ತಿನ್ನಲ್ಪಟ್ಟದ್ದು, ಅಗಿಯಲ್ಪಟ್ಟದ್ದು, ನುಂಗಲ್ಪಟ್ಟದ್ದು ಮೆದ್ದದ್ದು-

ಕ್ಷೇಪಿಷ್ಠಾದಿಶಬ್ದಗಳು-೬-ಕ್ರಮವಾಗಿಕ್ಷಿಪ್ರಾದಿಗಳಾರರ ಅತಿಶಯಗಳಿಗೆ ಹೆಸರುಗಳು ಅಂದರೆ ಕೇವಲ ವೇಗವುಳ್ಳದ್ದು. ಕ್ಷೇಪಿಷ್ಠನು- ಕೇವಲ ಕ್ಷುದ್ರವಾದದ್ದು. ಕ್ಷೋದಿಷ್ಠನು-ಬಹಳಪ್ರಿಯವಾದದ್ದು, ಪ್ರೇಷ್ಠನು - ಅತ್ಯಂತಶ್ರೇಷ್ಠವಾದದ್ದು, ವರಿಷ್ಠನು-ಹೆಚ್ಚಾಗಿಬಲಿತದ್ದು. ಸ್ಥವಿಷ್ಠನು-ಕೇವಲ ಅಧಿಕವಾದದ್ದು, ಬಹಿಷ್ಠನು-ಎಂದರ್ಥವಾಗುತ್ತೆ.

ಸಾಧಿಷ್ಠದ್ರಾಘಿಷ್ಠಸ್ಫೇಷ್ಠಗರಿಷ್ಠಹ್ರಸಿಷ್ಠಬೃಂದಿಷ್ಠಾಃ। ಬಾಢವ್ಯಾಯತಬಹುಗುರುವಾಮನಬೃಂದಾರಕಾತಿಶಯೇ ॥೧೧೩॥

ಸಾಧಿಷ್ಠಾದಿಶಬ್ದಗಳು-೬-- ಕ್ರಮವಾಗಿ ಬಾಢಾದಿಗಳಾರರಕ್ಕೂ ಹೆಸರುಗಳು, ಅಂದರೆ ಕೇವಲವಳ್ಳೇದುಸಾಧಿಷ್ಠನು-ಬಹುಳನೀಳವಾದ್ದು, ದ್ರಾಘಿಷ್ಠನು-ಅತ್ಯಂತಾಧಿಕವಾದ್ದದ್ದು, ಸ್ಫೇಷ್ಠನು- ಬಹುಭಾರವಾದುದು, ಗರಿಷ್ಠನು-ಬಹಳ ಗಿಡ್ಡಾದುದು, ಹ್ರಸಿಷ್ಠನು-ಬಹಳ ಮನೋಹರವಾದುದು, ಬೃಂದಿಷ್ಠನು- ಎಂದರ್ಥವಾಗುತ್ತೆ.

ಇತಿವಿಶೇಷ್ಯನಿಘ್ನವರ್ಗಃ.

—*—

ವಿಶೇಷ್ಯನಿಘ್ನ-ವಿಶೇಷ್ಯದಿಂದಹೊಡಿಯಲ್ಪಟ್ಟ, ಅಂದರೆ ವಿಶೇಷ್ಯಾಧೀನವಾಗಿ ವಿಶೇಷಣಗಳಾದಂಥಾ ಪದಗಳ, ವರ್ಗಃ-ಸಮೂಹವು, ಇತಿ-ಈಮೇರೆ ಮುಗಿದುದು.

—:*:—

ಅವತರಣಿಕೆ * ಗ್ರಂಥಕರ್ತನು, ಈ ಸಂಕೀರ್ಣವರ್ಗದಲ್ಲಿರುವ ಪದಗಳಿಗೆ ಮುನ್ನು ಹೇಳ್ದ ಪದರೂಪಭೇದದಿಂದಲೇ ಲಿಂಗನಿರ್ಣಯ ವಾಗುವದಿಲ್ಲವಾದ್ದರಿಂದ ಪ್ರಕೃತಿ ಪ್ರತ್ಯಯಾದಿ ಬೇರೆ ಕಾರಣಗಳಿಂದಲೂ ಲಿಂಗವನ್ನು ಅನುಮೇಯಿಸಬೇಕೆಂದು ಹೇಳುತ್ತಾನೆ.

ಮೂ ॥ ಪ್ರಕೃತಿಪ್ರತ್ಯಯಾರ್ಥಾದ್ಯೈಸ್ಸಂಕೀರ್ಣೇ ಲಿಂಗಮುನ್ನಯೇತ್॥

ಟೀಕೆ॥ ಸಂಕೀರ್ಣೇ-ಸಂಕೀರ್ಣವರ್ಗದಲ್ಲಿ, ಪ್ರಕೃತಿಪ್ರತ್ಯಯಾರ್ಥಾದ್ಯೈಃ- ಸಾಮಾರ್ಥಪ್ರತ್ಯಯಾರ್ಥ ರೂಪಭೇದ ಸಾಹಚರ್ಯಗಳಿಂದ, ಲಿಂಗ-ಸ್ತ್ರೀಪುನ್ನಪುಂಸಕಲಿಂಗವನ್ನು, ಉನ್ನಯೇತ್ [illegible]ಗಂದರೆ*

ಉದಾಹರಣ * ಸಾಮರ್ಥ್ಯದಿಂದ, ಅಪರಸ್ವರಾಃ--ಪುರುಷಾಃ-ಅಪರಸ್ವರಾಃ-ಸ್ತ್ರಿಯಃ-ಅಪರಸ್ವರಾಣಿಕುಲಾನಿ--ಈಮೇರೆ ಊಹಿಸತಕ್ಕದ್ದು * ಪ್ರತ್ಯಯಾರ್ಥದಿಂದ, ಶಾಂತಿಃ, ದಾಂತಿಃ, ಇವು (ಸ್ತ್ರಿಯಾಂಕ್ತಿನ್) ಎಂಬುವಸೂತ್ರದಿಂದ ಸ್ತ್ರೀಲಿಂಗ ಬೋಧಕವಾದ, ತಿಪ್ರತ್ಯಯಾಂತಗಳಾದ್ದರಿಂದ ಸ್ತ್ರೀಲಿಂಗಗಳೆಂದು ಊಹಿಸಬೇಕು. * ರೂಪಭೇದ ಸಾಹಚರ್ಯಗಳಿಂದ ಊಹಿಸಿ ಲಿಂಗನಿರ್ಣಯಮಾಡತಕ್ಕ ಕ್ರಮವು ಪೂರ್ವದಲ್ಲಿಯೇ ಹೇಳಲ್ಪಟ್ಟದೆ.

| | |
|---|---|
| ಕರ್ಮಕ್ರಿಯಾ | ಕರ್ಮನ್-ನ-ಪ-ಪು-ಕ್ರಿಯಾ-ಸ್ತ್ರೀ-೧ ಮಾಡುವದು, ಕೆಲಸದಹೆಸರುಗಳು. |
| ತತ್ಸಾತತ್ಯೇಗಮೇsಸ್ವರಪರಸ್ವರಾಃ ॥೧೧೪॥ | ಅಪರಸ್ವರಃ-ತ್ರಿ-೧-ತತ್ಸಾತತ್ಯೇಗಮ್ಯೇ-ಎಡಬಿಡದೆ ತಿರುಗುವದು ಮುಂತಾದ ಕೆಲಸದ ಸಾರ್ವಕಾಲಿಕ ಸಂಬಂಧವುಳ್ಳ ಸಾರ್ಥಾದಿಗಳ ಹೆಸರು. |
| ಸಾಕಲ್ಯಾಸಂಗವಚನೇಪಾರಾಯಣಪರಾಯಣೇ । | ಪಾರಾಯಣಂ-ನ-ಪರಾಯಣಂ-ಪಾ-ತುರಾಯಣಂ-ತ್ರಿ-ಈ-೧ನ್ನು, ಸಾಕಲ್ಯಾಸಂಗವಚನೆ-ಕ್ರಮವಾಗಿ ಎಲ್ಲವೂ ಓದುವದಕ್ಕೂ, ಒಂದುವಸ್ತುವಿನಲ್ಲಿ ಆಸಕ್ತಿಯುಳ್ಳವನಿಗೂ ಹೆಸರುಗಳು. |
| ಯದೃಚ್ಛಾಸ್ವೈರಿತಾ | ಯದೃಚ್ಛಾ-ಸ್ವೈರಿತಾ-ಸ್ತ್ರೀ-೧- ಮನಸ್ಸು ಬಂದಹಾಗೆಲ್ಲಾ ಬಿಡಿಬೀಕ್ಕಲಾಗಿರುವದಕ್ಕೆ ಹೆಸರುಗಳು. |
| ಹೇತುಶೂನ್ಯಾತ್ವಾಸ್ಯಾ ವಿಲಕ್ಷಣಂ ॥೧೧೫॥ | ವಿಲಕ್ಷಣಂ-ನ-೧- ಹೇತುಶೂನ್ಯಾಆಸ್ಯಾ-ಕಾರಣವಿಲ್ಲದೆ ಒಂದುಕಡೆ ಯಾವದಾದರೂ ಇರುವದಕ್ಕೆಹೆಸರು. |
| ಶಮಥಸ್ತುಶಮಶ್ಶಾಂತಿ | ಶಮಥಃ-ಶಮಃ-ಪು-ಶಾಂತಿಃ-ಸ್ತ್ರೀ-೩-ಕಾಮಕ್ರೋಧಾದಿಗಳಡಗಿ ಸಮಾಧಾನವೃತ್ತಿಯಾಗಿರುವಿಕೆ. |
| ರ್ದಾಂತಿಸ್ತುದಮಥೋದಮಃ। | ದಾಂತಿಃ-ಸ್ತ್ರೀ-ದಮಥಃ-ದಮಃ-ಪು-೩-ಬ್ರಹ್ಮಚರ್ಯಾದಿ ಕ್ಲೇಶಗಳನ್ನು ಸಹಿಸಿ ಇಂದ್ರಿಯ ನಿಗ್ರಹಮಾಡುವದಕ್ಕೆ ಹೆಸರು. |
| ಅಪದಾನಂ(ಶರ್ಮವೃತ್ತಂ | ಅಪದಾನಂ-ನ-೧-ವೃತ್ತಂಕರ್ಮ-ಪೂರ್ವದಲ್ಲಿ ನಡದಂಥಾ ಪರಿಶುದ್ಧಕ್ರಿಯೆ. |

| | |
|---|---|
| ಕಾಮ್ಯದಾನಂ)ಪ್ರವಾರಣಂ। | ಪ್ರವಾರಣಂ-ಪಾ-ಪ್ರಧಾರಣಂ-ನ-೧-ಕಾಮ್ಯದಾನಂ-ಫಲಾಪೇಕ್ಷೆಯಿಂದ ಕೊಡುವದಕ್ಕೆಪೆಸರು. |
| (ವಶಕ್ರಿಯಾ) ಸಂವನನಂ | ಸಂವನನಂ-ಪಾ-ಸಂವದನಂ-ನ-೧- ವಶಕ್ರಿಯಾ-ಮಣಿಮಂತ್ರೌಷಧಾದಿಗಳಿಂದ ಇತರನನ್ನು ಸ್ವಾಧೀನವಾಗಿ ಮಾಡಿಕೊಳ್ಳುವದಕ್ಕೆಪೆಸರು, |
| ಮೂಲಕರ್ಮ ತು ಕಾರ್ಮಣಂ। | ಮೂಲಕರ್ಮ-ನ-ಕಾರ್ಮಣಂ-ನ-೨-ಮೂಲಿಕೆಬಧ್ನಿಕೆ ಮಂತಾದವುಗಳಿಂದ ಸ್ತಂಭನ ವಶೀಕರಣಾದಿ ಪ್ರಯೋಗಗಳನ್ನು ಮಾಡುವದಕ್ಕೆ ಪೆಸರುಗಳು. |
| ವಿಧೂನನಂ ವಿಧುವನಂ | ವಿಧೂನನಂ-ವಿಧುವನಂ-ನ- ೨- ಕೊಡಹುವದು, ಝಾಡಿಸುವದು, ಕೊಡಪುವದು, ಕೊಡವಿಕೊಳ್ಳುವದು. |
| ತರ್ಪಣಂಪ್ರೀಣನಾವನೇ ॥ | ತರ್ಪಣಂ-ಪ್ರೀಣನಂ-ಅವನಂ-ನ-೩-ತೃಪ್ತಿ ಹೊಂದಿಸುವಿಕೆ, ಆಶಾಪೂರ್ತಿ ಮಾಡುವಿಕೆ. |
| ಪರ್ಯಾಪ್ತಿಃ(ಸ್ತ್ರೀ) ಪರಿತ್ರಾಣಂಹಸ್ತವಾರಣಮಿತ್ಯಪಿ ।) | ಪರ್ಯಾಪ್ತಿಃ-ಸ್ತ್ರೀ-ಪರಿತ್ರಾಣಂ-ಹಸ್ತವಾರಣಂ-ಪಾ-ಹಸ್ತಧಾರಣಂ-ನ-೩- ಕೊಲ್ಲುವದಕ್ಕೆ ಉದ್ಯುಕ್ತನಾದವನನ್ನು ಅಡ್ಡಹಾಕಿ ಹಿಡಕೊಂಡು ಕೊಲ್ಲಲ್ಪಡಬೇಕಾಗಿದ್ದವನನ್ನು ಕೊಲೆಗೆಸಿಕ್ಕದಹಾಗೆ ಭಯವಿಲ್ಲದೆ ರಕ್ಷಿಸುವದಕ್ಕೆ ಪೆಸರುಗಳು. |
| ಸೇವನಂ ಸೀವನಂಸ್ಯೂತಿ | ಸೇವನಂ-ಸೀವನಂ-ನ-ಸ್ಯೂತಿಃ-ಸ್ತ್ರೀ -೩ ಬಾಹ್ಯವಿಷಯಾನುಭವಕ್ಕೆಪೆಸರು, ಅಂದರೆ ಉಡುವದು, ತೊಡುವದು, ಕುಡಿವದು ಮುಂತಾದ್ದಕ್ಕೆ ಪೆಸರುಗಳು. |
| ರ್ವಿದರಃಸ್ಫುಟನಂಭಿದಾ॥ | ವಿದರಃ-ಪು-ಸ್ಫುಟನಂ-ನ- ಭಿದಾ-ಸ್ತ್ರೀ-೩-ಒಡದು ಹೋಗುವದಕ್ಕೂ ಒಡಕಿಗೂ ಒಡಗುಟ್ಟುವದಕ್ಕೂ ಪೆಸರುಗಳು. |
| ಆಕ್ರೋಶನ ಮಭಿಷಂಗ | ಆಕ್ರೋಶನಂ-ನ-ಅಭೀಷಂಗಃ-ಪು-೨- ಖತಿಗೊಂಡು ಶಪಿಸುವಿಕೆ, ಕೋಪದನುಡಿ, |

| | |
|---|---|
| | ಬೊಯಿಲು, ಬೊಯ್ಯುವಿಕೆ. |
| ಸ್ಸಂವೆದೊವೆದನಾ (ನಸಾ) | ಸಂವೇದಃ-ಪು-ವೇದನಾ-ಸ್ತ್ರೀ-ಸುಖದುಃಖಾದಿ ವಿಷಯುಕವಾದ ಮಾನಸಿಕಾನುಭವದ ಪೆಸರುಗಳು, ವಳಅನುಭವ. |
| ಸಂಮೂರ್ಛನ ಮಭಿವ್ಯಾಪ್ತಿ | ಸಂಮೂರ್ಛನಂ-ನ-ಅಭಿವ್ಯಾಪ್ತಿಃ-ಸ್ತ್ರೀ-೧- ಸರ್ವತ್ರವ್ಯಾಪಿಸುವಿಕೆ, ಎಲ್ಲಕಡೆಯಲ್ಲಿಯೂ ಹರವಿಕೊಳ್ಳೋಣದರಪೆಸರುಗಳು. |
| ರ್ಯಾಚತ್ನಾ ಭಿಕ್ಷಾರ್ಥನಾರ್ದನಾ ॥೧೧೯॥ | ಯಾಚನ್ನಾ-ಭಿಕ್ಷಾ-ಅರ್ಥನಾ-ಅರ್ದನಾ-ಸ್ತ್ರೀ-೪-ಬೇಡುವಿಕೆ, ಕೇಳುವಿಕೆ, ತಿರಿದಾಡುವಿಕೆ. |
| ವರ್ಧನಂಛೇದನೇ | ವರ್ಧನಂ-ಛೇದನಂ-ನ-೨-ಕಡಿಯುವಿಕೆ, ಕೊಯ್ಯುವಿಕೆ. |
| (ಥದ್ವೆ)ಆನಂದನಸಭಾಜನೇ। ಆಪೃಚ್ಛನ | ಆನಂದನಂ-ಪಾ-ಅಮಂತ್ರಣಂ-ಸಭಾಜನಂ-ಅಪೃಚ್ಛನಂ-ನ-೩-ಇಷ್ಟಮಿತ್ರಬಂಧ್ವಾದಿಗಳನ್ನು ಹೊಸತಾಗಿ ಕಂಡಾಗ ಅಪ್ಪಿಕರೆತಂದು ಯೋಗಕ್ಷೇಮಂಗಳಂ ಕೇಳಿ ಉಪಚಾರಗಳಿಂದ ಸನ್ಮಾನಗೊಳಿಸಿ ಸುಖಪಡಿಸುವಿಕೆ. |
| ಮಥಾಮ್ನಾಯು ಸ್ಸಂಪ್ರದಾಯಃ | ಆಮ್ನಾಯಃ-ಸಂಪ್ರದಾಯಃ-ಪು-೨-ಶಿಷ್ಯಪರಂಪರಾಗತವಾದ ವೇದಗಳ ಉಪದೇಶ ಪದ್ಧತಿವಿಡಿದ ಆಚಾರಕ್ಕೆ ಹೆಸರುಗಳು. |
| ಕ್ಷಯುಕ್ಷಿಯಾ ॥೧೨೦ | ಕ್ಷಯಃ-ಪು-ಕ್ಷಿಯಾ-ಸ್ತ್ರೀ-೨- ದಿನದಿನಕ್ಕೆ ಕಡಮೆಯಾಗುತ್ತಾ ನಾಶವಾಗಿ ಕೆಟ್ಟುಹೋಗುವಿಕೆ. |
| ಗ್ರಹೊಗ್ರಾಹೆ | ಗ್ರಹಃ-ಗ್ರಾಹಃ-ಪು-೨-ತೆಗೆದುಕೊಳ್ಳುವದು, ಹಿಡುಕೊಳ್ಳುವದು, ತಿಳುಕೊಳ್ಳುವದು, ತಕ್ಕೊಂಬೋಣ. |
| ವಶಃಕಾಂತಾ | ವಶಃ-ಪು-ಕಾಂತಿಃ-ಸ್ತ್ರೀ-೨- ಮನಸ್ಸಿನಲ್ಲಿ ನೆನಹುಂಟಾಗುವಿಕೆ, ತನ್ನೊಳಗೆ ತೋರಿಕೊಳ್ಳುವಿಕೆ, ಬುದ್ಧಿಯಲ್ಲಿ ಸ್ಫುರಿಸುವಿಕೆ ಇಚ್ಛೆ ಪ್ರೀತಿವಿಶೇಷ. |

ರಕ್ಷಣಸ್ತ್ರಾಣೇ | ರಕ್ಷಣಃ-ಪು-ತ್ರಾಣಃ-೨- ರಕ್ಷಿಸುವದು - ಪೊರೆವದು, ಪಾಲಿಸುವದು, ಸಲಹುವಿಕೆ.

ರಣಃಕ್ವಣೇ । | ರಣಃ-ಕ್ವಣಃ-ಪು-೨- ಮೊರೆಯುವಿಕೆ, ಕೂಗುವಿಕೆ.

ವ್ಯಧೋವೇಧೇ | ವ್ಯಧಃ-ವೇಧಃ-ಪು-೨-ಬಿಜ್ಜ ಮಾತೋ ನ್ನು, ತೂತುಕೊರೆಯುವಿಕೆ, ಚುಚ್ಚು ವಿಕೆ.

ಪಚಾಪಾಕೇ | ಪಚಾ-ಸ್ತ್ರೀ-ಪಾಕಃ-ಪು-೨-ಆಡೋ ನ್ನು, ಅಡಿಗೆ ಮಾಡುವಿಕೆ, ಅಡಿಗೆ.

ಹವೋಹೂತೌ | ಹವಃ-ಪು-ಹೂತಿಃ-ಸ್ತ್ರೀ-೨-ಕರೇಕಳು ಸುವಿಕೆ, ಕರೆಯುವಿಕೆ.

ವರೋವೃತೌ ॥೧೨೧॥ | ವರಃ-ಪು-ವೃತಿಃ-ಸ್ತ್ರೀ-೨- ವರಿಸುವಿಕೆ, ನನಗೆಯಿದು ಇರಲಿಯೆಂದು ಒಪ್ಪಿ ಅಂಗೀಕ ರಿಸುವಿಕೆ.

ಓಷಃಪ್ಲೋಷೇ | ಓಷಃ-ಪ್ಲೋಷಃ-ಪಾ-ಪ್ರೋಷಃ- ಪು-೩- ಸುಡುವದಕ್ಕೂ, ಸುಟುವಿಕೆಗೂ,ಬಾಡಿಸು ವಕ್ಕೂ ಹೆಸರುಗಳು.

ನಯೋನಾಯೋ | ನಯಃ- ನಾಯಃ-ಪು-೨- ನ್ಯಾಯನೀ ತಿಯನ್ನು ಹೇಳಿ ಹೊಂದಿಕೆಮಾಡುವಿಕೆ, ಹೊಂದಿಸುವಿಕೆ.

ಜ್ಯಾನಿರ್ಜೀರ್ಣೌ | ಜ್ಯಾನಿಃ-ಜೀರ್ಣಿಃ-ಸ್ತ್ರೀ-೨- ಮುದಿತನ, ಮುದುಕತನ, ಮುಪ್ಪು, ಶಿಥಿಲವಾಗುವಿಕೆ.

ಭ್ರಮೋಭ್ರಮೌ ॥ | ಭ್ರಮಃ-ಪು--ಭ್ರಮಿಃ-ಪಾ- ಭ್ರಮಾ- ಸ್ತ್ರೀ-೨-ತಿರುಗುವಿಕೆ, ಸುತ್ತುವಿಕೆ.

ಸ್ಫಾತಿರ್ವೃದ್ಧೌ | ಸ್ಫಾತಿಃ-ವೃದ್ಧಿಃ-ಸ್ತ್ರೀ-೨- ಬೆಳೆಯುವಿಕೆ ಹೆಚ್ಚುವಿಕೆ.

ಪ್ರಥಾಖ್ಯಾತೌ | ಪ್ರಥಾ-ಖ್ಯಾತಿಃ-ಸ್ತ್ರೀ-೨-ಪ್ರಸಿದ್ಧಿಯ ಹೆಸರುಗಳು, ಬಹುಮಂದಿಗೆ ತಿಳಿಯುವಿಕೆ,ಹೆ ಸರುವಾಸಿ.

ಸ್ಪೃಷ್ಟಿಃ ಪೃಕ್ತೌ | ಸ್ಪೃಷ್ಟಿಃ-ಪಾ-ಪೃಷ್ಟಿಃ-ಪೃಕ್ತಿಃ-ಸ್ತ್ರೀ- ೩-ಮುಟ್ಟುವಿಕೆ, ಸೋಂಕುವಿಕೆ.

ಸ್ನವಸ್ಸ್ರವೇ ॥೧೨೨॥ | ಸ್ನವಃ-ಸ್ರವಃ-ಪು-೨-ಸುರಿವದು- ಸುರಿ

| | |
|---|---|
| | ಯುವಿಕೆ, ಸೋರಾಟ. |
| ವಿಧಾಸಮೃದ್ಧೌ | ವಿಧಾ-ಷಾ-ವೀಧಾ-ಸಮೃದ್ಧಿಃ-ಸ್ತ್ರೀ-೨-ಸಮೃದ್ಧಿಯಹೆಸರುಗಳು, ತುಂಬಿರುವಬಗೆ, ಸಾಕಾದಷ್ಟು ಯಿರುವಿಕೆ. |
| ಸ್ಫುರಣಂಸ್ಫುರಣೆ | ಸ್ಫುರಣಂ-ಸ್ಫುರಣಂ-ನ-೨-ಅದುರುವದು, ಅಳ್ಳಾಡುವದು,ಮಣುಕುವದು, ಕದಲುವದು. |
| ಪ್ರಮಿತೌಪ್ರಮಾ । | ಪ್ರಮಿತಿಃ-ಪ್ರಮಾ-ಸ್ತ್ರೀ-೨-ನಿಜವಾಗಿತಿಳಿಯುವಿಕೆ, ಯಥಾರ್ಥಜ್ಞಾನ,ಪ್ರಮಾಣಜನ್ಯಜ್ಞಾನ-ಯಥಾರ್ಥಾನುಭವ. |
| ಪ್ರಸೂತಿಃಪ್ರಸವೆ | ಪ್ರಸೂತಿಃ- ಸ್ತ್ರೀ-ಪ್ರಸವಃ-ಪು-೨- ಹೆರುವಿಕೆ,ಹಡೆಯುವಿಕೆ, ಈದುವಿಕೆ. |
| ಶ್ಚ್ಯೋತೆಪ್ರಾಘಾರಃ | ಶ್ಚ್ಯೋತಃ-ಪ್ರಾಘಾರಃ-ಪು-೨- ಸೋರಿಹೋಗುವಿಕೆ, ಸೋರುವಿಕೆ, ಜನಿಯುವಿಕೆ, ಜಾರಿಹೋಗುವಿಕೆ, ತುಳುಕುವಿಕೆ. |
| ಕ್ಲಮಥಃಕ್ಲಮೆ ॥೧೨೩॥ | ಕ್ಲಮಥಃ-ಕ್ಲಮಃ-ಪು-೨- ಬಡಲುವಿಕೆ, ಬಳಲೋಣವು. |
| ಉತ್ಕರ್ಷೋತಿಶಯೆ | ಉತ್ಕರ್ಷಃ-ಅತಿಶಯಃ-ಪು-೨- ದೊಡ್ಡತನವು,ಹೆಚ್ಚಾಗಿರುವಿಕೆ, ಮೇಲಾಗಿರುವಿಕೆ. |
| ಸಂಧಿಃಶ್ಲೇಷೆ | ಸಂಧಿಃ-ಶ್ಲೇಷಃ-ಪು-ಸಂಬಂಧಿಸೋಣವು-ಕೂಡಿಬೆರತಂತೆಸೇರುವಿಕೆ. |
| ವಿಷಯಆಶ್ರಯೆ । | ವಿಷಯಃ-ಷಾ-ವಿಶಯಃ-ಆಶ್ರಯಃ-ಆಶಯಃ-ಪು-೨- ಗೊತ್ತಾಗಿರುವ ಸ್ಥಳದ ಹೆಸರುಗಳು, ವಿಪ್ರತಿಪತ್ತಿ ಸ್ಥಾನಕ್ಕೊಹೆಸರು, ಉಪಭೋಗ್ಯವಾಗಿ ಅವಲಂಬಿಸತಕ್ಕದೇಶಮುಂತಾದ್ದಕ್ಕೂ ಹೆಸರುಗಳು. |
| ಕ್ಷಿಪಾಯಾಂಕ್ಷೇಪಣಂ | ಕ್ಷಿಪಾ-ಸ್ತ್ರೀ-ಕ್ಷೇಪಣಂ-ನ-೨-ಪ್ರೇರೇಪಿಸುವಿಕೆ, ಹಾಕುವಿಕೆ, ನೂಕುವಿಕೆ. |
| ಗೀರ್ಣಿರ್ಗಿರೌ | ಗೀರ್ಣಿಃ-ಗಿರಿಃ-ಸ್ತ್ರೀ-೨-ನುಂಗುವಿಕೆ. |
| ಗುರಣಮುದ್ಯಮೆ ॥೧೨೪॥ | ಗುರಣಂ-ಷಾ-ಗೋರಣಂ-ನ-ಉದ್ಯಮಃ-ಪು-೨-ಉದ್ಯೋಗದ ಹೆಸರುಗಳು. |
| ಉನ್ನಾಯ ಉನ್ನಯೆ | ಉನ್ನಾಯಃ-ಉನ್ನಯಃ-ಪು-೨-ಮೇಲ |

| | |
|---|---|
| | ಕ್ಕೆ ಯೆತ್ತುವದಕ್ಕೂ ಊಹಿಸುವದಕ್ಕೂ ಪೆಸರುಗಳು. |
| ಶ್ರಾಯಶ್ಶ್ರಯಣೌ | ಶ್ರಾಯಃ-ಪು-ಶ್ರಯಣಂ-ನ-೨-ಆಶ್ರಯಿಸುವಿಕೆ. ಅವಲಂಬಿಸುವಿಕೆ,ಅನುಸರಿಸಿ ಯಿರುವಿಕೆ. |
| ಜಯನೇಜಯಃ । | ಜಯನಂ-ನ-ಜಯಃ-ಪು-೨-ಗೆಲುವಿಕೆ. |
| ನಿಗಾದೋ ನಿಗದೇ | ನಿಗಾದಃ-ನಿಗದಃ-ಪು-೨-ಸ್ಪಷ್ಟವಾಗಿನುಡಿಯುವಿಕೆ, ವ್ಯಕ್ತವಾಗಿ ಪೇಳುವಿಕೆ. |
| ಮಾದೋಮದ | ಮಾದಃ- ಮದಃ-ಪು-೨-ಗರ್ವವು, ಅಹಂಕಾರವು. |
| ಉದ್ವೇಗಉದ್ಭ್ರಮಃ ॥೧೨೫॥ | ಉದ್ವೇಗಃ-ಉದ್ಭ್ರಮಃ-ಪು-೨- ಊರ್ಧ್ವಭಾಗವನ್ನು ಕದಲಾಡಿಸುವಿಕೆ. ಮೇಲಣಗತಿವಿಶೇಷ ಬುದ್ಧಿಕ್ಲೃಪ್ತ್ಯ. |
| ವಿಮರ್ದನಂ ಪರಿಮಳೇ | ವಿಮರ್ದನಂ-ನ-ಪರಿಮಳಃ-ಪು-೨-ಕುಂಕುಮಾದಿಗಂಧ ದ್ರವ್ಯಗಳನ್ನು ಇಡೀಕುಟ್ಟುವಿಕೆ, ಇಡಿಯಲ್ಪಟ್ಟದ ಸುಗಂಧಕ್ಕೂ ಹೆಸರುಗಳು. |
| ಭ್ಯುಪಪತ್ತಿರನುಗ್ರಹಃ । | ಅಭ್ಯುಪಪತ್ತಿಃ-ಸ್ತ್ರೀ-ಅನುಗ್ರಃ-ಪು-೨ದಾನಾದ್ಯುಪಕಾರ ರೂಪವಾದ ಪ್ರಸಾದಕ್ರಿಯಾವಿಶೇಷದ ಪೆಸರುಗಳು. |
| ನಿಗ್ರಹ(ಸ್ತದ್ವಿರುದ್ಧಸ್ಸ್ಯಾ) | ನಿಗ್ರಹಃ-ಪು-೧- ತದ್ವಿರುದ್ಧಃ- ಆಯನುಗ್ರಹಕ್ಕೆ ವಿರುದ್ಧವಾದದ್ದು- ಅಂದರೆ- ಅಡ್ಡಿಮಾಡುವಿಕೆ, ಕಸುಕೊಳ್ಳುವಿಕೆ, ಮುಂತಾದ್ದು ದುಃಖಜನಕ ನಿಗ್ರಹವಾದ ಅಪಕಾರಕ್ಕೆ ಪೆಸರು. |
| ದಭಿಯೋಗಸ್ತ್ವಭಿಗ್ರಹಃ ॥ | ಅಭಿಯೋಗಃ- ಅಭಿಗ್ರಹಃ-ಪು-೨-ಯುದ್ಧಾದಿಗಳಲ್ಲಿ ಹಗೆಯವರಿಗೆ ಎದುರಾಗಿ ಕಲಹಕ್ಕೆ ಅಣಿಮಾಡಿಕೊಂಡು ಧೈರ್ಯದಿಂದ ಉಪಾಯ ಪ್ರಯತ್ನಾದಿಗಳನ್ನುಮಾಡುವಿಕೆ. |
| ಮುಷ್ಟಿಬಂಧಸ್ತು ಸಂಗ್ರಾಹೋ | ಮುಷ್ಟಿಬಂಧಃ- ಸಂಗ್ರಾಹಃ- ಪು-೨-ಗಟ್ಟಿಯಾಗಿ ಹಿಡಿಯನ್ನು ಹಿಡಿಕೊಳ್ಳುವದ |

| | |
|---|---|
| | ಕ್ಕೆ ಪೆಸರು. ಹಿಡಿಪಟ್ಟು ಹಿಡಿಯೋಣವು, ಹಿಡಿ. |
| ಡಿಂಬೆ ಡಮರವಿಪ್ಲವೌ। | ಡಿಂಬಃ-ಡಮರಃ-ವಿಪ್ಲವಃ-ಪು-೩- ಕೊಳ್ಳೇ ಮೊದಲಾದದೇಶೋಪದ್ರವವು,ಲೂಟಿ, ರಾಜೀಕದ ಕಷ್ಟ. |
| ಬಂಧನಂ ಪ್ರಸಿತಿ ಶ್ಚಾರ | ಬಂಧನಂ-ನ-ಪ್ರಸಿತಿಃ-ಸ್ತ್ರೀ-ಚಾರಃ-ಪಾಸ್ತಾರಃ-ಪು-೩-ಕಟ್ಟುವಿಕೆ, ಕಟ್ಟು, ತಡೆ. |
| ಸ್ಸ್ಪರ್ಶಃಸ್ಪ್ರಷ್ಟೋಪತಪ್ತರಿ॥ | ಸ್ಪರ್ಶಃ- ಸ್ಪ್ರಷ್ಟಾ- ಋ--ಉಪತಪ್ತಾ-ಋ-ಪು-೩-ಕಂದಿ ಬಳಲುವರಹಾಗೆ ಮಾಡುವ ರೋಗಾದಿಗಳ ಹೆಸರು. ಬೇನೆತಗುಲುವಿಕೆ. |
| ನಿಕಾರೊವಿಪ್ರಕಾರ(ಸ್ಸ್ಯಾ) | ನಿಕಾರಃ-ವಿಪ್ರಕಾರಃ-ಪು-೨-ಅಪನಿಂದೆಯನ್ನು ಹೊರಿಸಿ ಅಪಕಾರ ಮಾಡುವಿಕೆ. |
| ದಾಕಾರಸ್ತ್ವಿಂಗಇಂಗಿತಂ॥ | ಆಕಾರಃ-ಇಂಗಃ-ಪು-ಇಂಗಿತಂ-ನ- ೩--ಅಭಿಪ್ರಾಯವನ್ನು ಪ್ರಕಟಗೊಳಿಸುವಚೇಷ್ಟೆಯ ಹೆಸರುಗಳು. |
| ಪರಿಣಾಮೊ( ವಿಕಾರೆ ) | ಪರಿಣಾಮಃ-ಪು-೧-ವಿಕಾರೆ-ಹಾಲುಆಗಿದದ್ದು ಉಪಾಧಿಯಿಂದ ಮುಸರಾದಹಾಗೂ ಮಣ್ಣಾಗಿದ್ದದ್ದು ಮಡಿಕೆ ಯಾದಹಾಗೂ, ಬೀಜವೃಕ್ಷವಾದಹಾಗೂ ಒಂದುಬಗೆಯಾಗಿದ್ದದ್ದು ಮತ್ತೊಂದು ಬಗೆಯಾಗುವ ವಿಕಾರ ವಿಶೇಷದ ಪೆಸರು. |
| ದ್ವೆಸಮೆವಿಕೃತಿವಿಕ್ರಿಯೆ । | ವಿಕೃತಿಃ-ವಿಕ್ರಿಯಾ-ಸ್ತ್ರೀ-೨-ಪರಿಣಾಮರೂಪವಾಗಲಿ, ವಿವರ್ತರೂಪವಾಗಲಿಸೋಪಾಧಿಕ ಪ್ರಕೃತಿಯಿಂದ ಹುಟ್ಟುವ ವಿಕಾರಗಳೆಲ್ಲಕ್ಕೂ ಕಾರ್ಯ ಪ್ರಪಂಚಮಾತ್ರಕ್ಕೂ ಪೆಸರು. |
| ಅಪಹಾರ ಸ್ತ್ವಪಚಯ | ಅಪಹಾರಃ-ಅಪಚಯಃ-ಪು-೨- ಹಾನಿಯ ಪೆಸರು, ಕೊಯಿಲು, ಕಸುಗೊಳ್ಳುವಿಕೆ, ತರಗಪೆ ಬರುವಿಕೆ. |
| ಸ್ಸಮಾಹಾರಸ್ಸಮುಚ್ಚಯಃ। | ಸಮಾಹಾರಃ-ಸಮುಚ್ಚಯಃ-ಪು-೨-ಕೆ |

| | |
|---|---|
| | ದರಿಹೋಗಿ ಬೇರೆ ಬೇರೆ ಇರುವ ವಸ್ತುಗಳನ್ನೆಲ್ಲ ಜೊತೆಗೂಳಿಸುವಿಕೆ. |
| ಪ್ರತ್ಯಾಹಾರಉಪಾದಾನಂ | ಪ್ರತ್ಯಾಹಾರಃ-ಪು-ಉಪಾದಾನಂ-ನ-೨ ರೂಪರಸಾದಿ ವಿಷಯಗಳ ದೆಸೆಯಿಂದ ಕಣ್ಣು ಕಿವಿ ಮೊದಲಾದ ಇಂದ್ರಿಯಗಳನ್ನು ಹಿಂದಿರುಗಿಸಿ ನಿಗ್ರಹಿಸುವಿಕೆ. ಆಶೆಯನ್ನು ಬಿಡದೆ ಬಿಗಿದು ಹಿಡಿಯುವಿಕೆ. |
| ವಿಹಾರಸ್ತು ಪರಿಕ್ರಮಃ ॥ | ವಿಹಾರಃ-ಪರಿಕ್ರಮಃ-ಪು-೨- ಸುಖವಾಗಿ ಅಲ್ಲಲ್ಲಿ ತಿರುಗಾಡುವಿಕೆ. |
| ಅಭಿಹಾರೋಭಿ ಗ್ರಹಣಂ | ಅಭಿಹಾರಃ-ಪು-ಅಭಿಗ್ರಹಣಂ-ನ-೨-ಎದುರಾಗಿಯೇ ಕದ್ದುಕೊಳ್ಳುವಿಕೆ. |
| ನಿರ್ಹಾರೋಭ್ಯವಕರ್ಷಣಂ। | ನಿರ್ಹಾರಃ-ಪು-ಅಭ್ಯವಕರ್ಷಣಂ- ನ--೨-ಈಚೆಗೆ ತೆಗೆದು ಹಾಕುವಿಕೆ. ಮೇಲಕ್ಕೆಯುಳಿದುಹಾಕುವಿಕೆ -ಪಿಡಿದು ಸೆಳೆದೆತ್ತಿ ಬಿಸಾಡುವಿಕೆ. |
| ಅನುಹಾರೋನುಕಾರ(ಸ್ಸ್ಯಾ) | ಅನುಹಾರಃ-ಅನುಕಾರಃ-ಪು -೨- ಸರಿಹೋಲುವಿಕೆ, ಅದರಹಾಗೆ ಯಿರುವಿಕೆ. ಅದರಂತೆ ಆಗಿರುವಿಕೆ. |
| ದರ್ಥಸ್ಯಾಪಗಮೇವ್ಯಯಃ। | ವ್ಯಯಃ-ಪು-೧-ಅರ್ಥಸ್ಯ ಅಪಗಮೇ-ಮುಂದೆ ಪ್ರಯೋಜನಕ್ಕೆ ಇಲ್ಲದೇ ವ್ಯಯವಾಗಿ ಹೋಗುವಿಕೆ. ನಾಶವು, ಖರ್ಚು. |
| ಪ್ರವಾಹಸ್ತು ಪ್ರವೃತ್ತಿಸ್ಸ್ಯಾ। | ಪ್ರವಾಹಃ-ಪು-೧-ಪ್ರವೃತ್ತಿಃ-ಸ್ತ್ರೀ -೧- ಅವಿಚ್ಛಿನ್ನವಾಗಿ ಹರಿಯುವ ನೀರು ಮುಂತಾದವುಗಳ ಪರಂಪರೆ, ಪ್ರಸರಿಸುತ್ತಾ ಇರುವದು. |
| ತ್ಪ್ರವಹೋ(ಗಮನಂಬಹಿಃ।) | ಪ್ರವಹಃ-ಪು-೧-ಬಹಿಃಗಮನಂ- ಗೃಹಾದಿಗಳಿಂದ ಈಚೆಗೆ ಬರುವಿಕೆ. ಹೊರಕ್ಕೆ ಹೊರಡುವಿಕೆ. |
| ವಿಯಾಮೋ ವಿಯಮೋಯಾಮೋಯಮಸ್ಸಂಯಾಮ ಸಂಯಮೌ ॥೧೩೧॥ | ವಿಯಾಮಃ-ವಿಯಮಃ-ಪು-೨- ಪರಪೀಡಾದಿಗಳನ್ನು ನಾಶ ಮಾಡುವಿಕೆ. ಯಾಮಃ-ಯಮಃ-ಪು-೨-ನಾಶ ಮಾಡುವದು; |

ಸಂಯಾಮಃ-ಸಂಯಮಃ-೨- ಚೆಂನಾಗಿಸಾ ಕುನೂಡಿ ನಿಲ್ಲಿಸಿ ಬಿಡುವದು, ಈ -೬-ಸ ಮಾನಾರ್ಥಕಗಳಾದ ಪರ್ಯಾಯ ಪದಗಳೆಂ ತಲೂ ಕೆಲವರನ್ನುವರು.

ಹಿಂಸಾ ಕರ್ಮಾಭಿ ಚಾರ (ಸ್ಸ್ಯಾ) — ಅಭಿಚಾರಃ-ಪು-೧-ಹಿಂಸಾದಿಕರ್ಮ-ಸಾ ಯುಕೊಲ್ಲುವದಕ್ಕೆ ಮಾಡಿದ ಮಂತ್ರತಂತ್ರ ಪ್ರಯೋಗ, ಮಾಟ, ಶೂನ್ಯ,

ಜಾಗರ್ಯಾಜಾಗರಾದ್ವಯೋಃ। — ಜಾಗರ್ಯಾ-ಸ್ತ್ರೀ-ಜಾಗರಾ-ಸ್ತ್ರೀ -೨- ಎ ಚ್ಚರಿಕೆ.

ವಿಘ್ನೋಂತರಾಯಃಪ್ರತ್ಯೂಹ — ವಿಘ್ನಃ-ಅಂತರಾಯಃ-ಪ್ರತ್ಯೂಹಃ-ಪು- ೩-ವಿಘ್ನದ ಹೆಸರುಗಳು, ಕೆಲಸದ ಮಧ್ಯೆ ಬಂದ ಅಡ್ಡಿ, ಅನಿಷ್ಟ.

(ಸ್ಸ್ಯಾ) ದುಪಘ್ನೋಂ (ತಿ ಕಾಶ್ರಯೆ) ॥೧೩೦॥ — ಉಪಘ್ನಃ-ಪು-೧-ಅಂತಿಕಾಶ್ರಯೆ-ಬಳ್ಳಿ ಗೆ ಮರದಹಾಗೆ ಸಮೀಪದಲ್ಲಿ ಅವಲಂಬವಾ ಗಿರುವ ಆಧಾರಕ್ಕೆ ಹೆಸರು.

ನಿರ್ವೇಶ ಉಪಭೋಗ(ಸ್ಸ್ಯಾ) — ನಿರ್ವೇಶಃ-ಉಪಭೋಗಃ-೨--ಪು -೨- ಭೋಗಿಸುವಿಕೆ, ಅನುಭವ.

ತ್ಪರಿಸರ್ಪಃ ಪರಿಕ್ರಿಯಾ। — ಪರಿಸರ್ಪಃ-ಪು-ಪರಿಕ್ರಿಯಾ-ಸ್ತ್ರೀ-೨-ಆ ಲ್ಲಿಯಲ್ಲಿ ತಿರುಗಿ ಬರುವಿಕೆ. ಸುತ್ತಿ ಬರುವಿಕೆ.

ವಿಧುರಂತು ಪ್ರವಿಶ್ಲೇಷೊ — ವಿಧುರಂ-ನ-ಪ್ರವಿಶ್ಲೇಷಃ-ಪು-೨- ಜೊ ತೆಯಾಗಿದ್ದದ್ದರಿಂದ ಬಿಡಲ್ಪಡುವಿಕೆ, ವಿ ಯೋಗ-ಬಿಡಲ್ಪಟ್ಟದ್ದು ಬಿಟ್ಟದ್ದು ಬಿಟ್ಟು ಹೋದವನು, ಬಿಡಲ್ಪಟ್ಟು ಪ್ರಿಯವಿಲ್ಲದೇ ಉಳಿದವನು, ವಿಧುರಂ - ವಿಧುರಃ - ವಿಧು ರಾ-ತ್ರಿ.

ಭಿಪ್ರಾಯಶ್ಛಂದಆಶಯಃ ॥ — ಅಭಿಪ್ರಾಯಃ-ಛಂದಃ-ಪು-ಛಂದಃ-ನ-ಆ ಶಯಃ-ಪು-೩-ಅಭಿಪ್ರಾಯದ ಹೆಸರುಗಳು, ಮನಸ್ಸಿನೊಳಗಿರುವ ಭಾವ.

ಸಂಕ್ಷೇಪಣಂ ಸಮ ಸನಂ — ಸಂಕ್ಷೇಪಣಂ- ಸಮಸನಂ-ನ -೨- ದೊ ಡ್ಡದಾಗಿರುವದನ್ನು ಚಿಕ್ಕದಾಗಿ ಮಾಡು ವ, ಸಂಗ್ರಹ ಮಾಡು.

ಸ್ಯಾದ್ವ್ಯತ್ಯಾಸೋ ವಿಪರ್ಯಾಸೋ ವ್ಯತ್ಯಯಶ್ಚ ವಿಪರ್ಯಯೇ ।

ವ್ಯತ್ಯಾಸಃ-ವಿಪರ್ಯಾಸಃ-ವ್ಯತ್ಯಯಃ-ವಿಪರ್ಯಯಃ-ಪು-೪-ಕ್ರಮತಪ್ಪುವಿಕೆ. ತಬದಿಲ್, ತಲ್ಲಕೆಳಕು.

ಪರ್ಯಯೋತಿಕ್ರಮ ಸ್ತಸ್ಮಿನ್ನತಿಪಾತಉಪಾತ್ಯಯಃ ॥

ಪರ್ಯಯಃ-ಅತಿಕ್ರಮಃ--ಅತಿಪಾತಃ-ಉಪಾತ್ಯಯಃ- ಪು- ೪- ಕಟ್ಟಳೆಯನ್ನು ಮೀರಿಹೋಗುವಿಕೆ.

(ಪ್ರೇಷಣಂಯ ತ್ಸಮಾಹೂಯತತ್ರಸ್ಯಾತ್ಪ್ರತಿಶಾಸನಂ ।

ಪ್ರತಿಶಾಸನಂ-೧-ಸಮಾಹೂಯಪ್ರೇಷಣಂಯತ್ತತ್ರಸ್ಯಾತ್ ಭೃತ್ಯರನ್ನು ಕರೆದು ಹೀಗೆಮಾಡು ಎಂಬದಾಗಿಅಜ್ಞಾಪಿಸುವದು. ರೂಬರೂಹುಕ್ಕುಂ ಜಬಾನೀ.

ಸ(ಸಂಸ್ಥಾನಃ) ಕ್ರತುಪ ಯಾಸ್ತುತಿಭೂಮಿ ರ್ದ್ವಿಜನ್ಮನಾಂ॥ ॥೧೯೭॥)

ಸಂಸ್ಥಾನಃ-ಪು-೧-ಕ್ರತುಪಶುರ್ದ್ವಿಜನ್ಮನಾಂ ಯಜ್ಞಭೂಮಿರ್ಯಾ- ಯಜ್ಞಗಳಲ್ಲಿ, ಉದ್ಗಾತೃಗಳಾದ ಬ್ರಾಹ್ಮಣರು, ಸಾಮಗಾನಮಾಡುವದಕ್ಕೆ ಕೂತುಕೊಳ್ಳುವ ಸ್ಥಳ, ಸಾಮಗಾನ ಮೆಸಿಪ ದೇವಸ್ತೋತ್ರಕ್ಕೂ ಹೆಸರಾಗುತ್ತೆ.

(ನಿಧಾಯತಕ್ಷ್ಯತೆಯತ್ರಕಾಷ್ಠೆ ಕಾಷ್ಠಂಸ್ಯಉದ್ಘನಃ।

ಉದ್ಘನಃ-ಪು-೧--ಯತ್ರಕಾಷ್ಠೆ ಕಾಷ್ಠಂ ನಿಧಾಯ ತಕ್ಷ್ಯತೆಸಃ ಯಾವಕಟ್ಟಿಗೆಯಮ್ಯಾಲೆಮತೊಂದು ಕಟ್ಟಿಗೆಯಿಟ್ಟು ಕೆತ್ತಲ್ಪಡುತ್ತೋ ಅಂಥಾ ಕೆಳಗಿನ ಕಟ್ಟಿಗೆಯಹೆಸರು. ಅಂದರೆ ಬಡಿಗಿಯವನು ಮರಕೆಲಸ ಮಾಡುವದಕ್ಕಾಗಿ ತನ್ನಮುಂದೆ ಯಿಟ್ಟುಕೊಂಡಿರುವ ಮರಪಟ್ಟಡಿಯೆಂಬ ಅಡಿತುಂಡು.

ಸ್ತಂಬಘ್ನಸ್ತು ಸ್ತಂಬಘನಸ್ತಂಬೋಯೇನನಿಹನ್ಯತೆ ॥೧೯೮॥)

ಸ್ತಂಬಘ್ನಃ-ಸ್ತಂಬಘನಃ-ಪು-೨- ಯೇನಸ್ತಂಬೋನಿಹನ್ಯತೆಸಃ-ಯಾವದರಿಂದಹುಲ್ಲು ಮುಂತಾದ ಗಂಟೆಗಳು ಆಗಿಯಲ್ಪಡುತ್ತೋ ಅಂಥಾಗುದ್ದಲಿ, ದೋಕಟಿ, ಪಿಕಾಸಿ.

ಆವಿಧೋ (ವಿಧ್ಯತೆಯೇನತತ್ರ

ಆವಿಧಃ-ಪು-೧-ಯೇನವಿಧ್ಯತೆತತ್ರ- ಯಾವದರಿಂದ ತೂತು ಕೊರೆಯಲ್ಪಡುತ್ತೋ, ಆದರ ಹೆಸರು ಅಂದರೆ ರತ್ನಾದಿಗಳಿಗೆ ಪ್ರಿರಿಗೇ ಹಿಡಿಯುವ ಪಡ್ಡ, ಸಲಾಕೀ ಮುಂ

ವಿಷ್ವಕ್ಸಮೆ) ನಿಘಃ।

ತಾದ್ದು.

ನಿಘಃ-ಪು-೧-ವಿಷ್ವಕ್ಸಮೆ-ಎಲ್ಲಕಡೆಯ ಲ್ಲಿಯೂ ಅಂದರೆ ಆಗಲ ಉದ್ದಗಳು ಸರಿಯಾಗಿ ಉಬ್ಬುತಗ್ಗುಗಳಿಲ್ಲದೇ ಯಿರುವಂಥಾದ್ದರ ಹೆಸರು.

ಉತ್ಕಾರಶ್ಚ ನಿಕಾರಶ್ಚ ದ್ವೌ ಧಾನ್ಯೋತ್ಕ್ಷೇಪಣಾರ್ಥಕೌ ॥

ಉತ್ಕಾರಃ-ನಿಕಾರಃ-ಪು-ಈ-೨-ನ್ನು ಧಾನ್ಯೋತ್ಕ್ಷೇಪಣಾರ್ಥಕೌ-ಧಾನ್ಯ, ತಿನ್ನುವ ಕಾಳಿನ, ಉತ್ಕ್ಷೇಪಣ-ಮೇಲಕ್ಕೆ ಹಾಕುವಿಕೆಯೇ ಅರ್ಥಕೌ-ಪ್ರಯೋಜನವಾಗಿ ಉಳ್ಳವುಗಳು, ಅಂದರೆ, ಧಾನ್ಯವನ್ನು ತೂರಿರಾಶಿ ಮಾಡುವಿಕೆ. ಕೆಳಕ್ಕೆ ಜಾರಿಬಂದ ಕಾಳನ್ನು ರಾಶಿಯ ಮೇಲಕ್ಕೆ ಎರಚುವಿಕೆ.

ನಿಗಾರೋದ್ಗಾರವಿಕ್ಷಾವೋದ್ಗ್ರಾಹಾ(ಸ್ತು ಗರಣಾದಿಷು ।)

ನಿಗಾರಃ-ಉದ್ಗಾರಃ-ವಿಕ್ಷಾವಃ-ಉದ್ಗ್ರಾಹಃ-ಪು-ಈ-೪- ಗರಣಾದಿಷು ಕ್ರಮಾತ್-ಅಂದರೆ-ನಿಗಾರಃ-ನುಂಗುವಿಕೆ, ಉದ್ಗಾರಃ-ವೋಕರಿಕೆ, ಉಗುಳುವಿಕೆ, ವಿಕ್ಷಾರಃ-ತೇಗುವಿಕೆ, ಉದ್ಗ್ರಾಹಃ-ಉಬ್ಬಳಿಕೆ, ಹಾರಿ, ಹಾಕಿ ಹಿಡಿಯುವಿಕೆ, ಕೆಮ್ಮು.

ಆರತ್ಯವರತಿವಿರತಯ ಉಪರಾಮೆ

ಆರತಿಃ-ಅವರತಿಃ-ಮಾ-ಉಪರತಿಃ-ವಿರತಿಃ-ಸ್ತ್ರೀ- ಉಪರಾಮಃ-ಪಾ-ಉಪರಮಃ-ಪು-೪-ಮುಗಿಯುವಿಕೆ. ಅವಸಾನ ವಿರಾಗ.

(ವಾಸ್ತ್ರಿಯಾಂತು)ನಿಷ್ಠೇವಃ। ನಿಷ್ಠ್ಯೂತಿರ್ನಿಷ್ಠೇವನನಿಷ್ಠವನ ಮಿತ್ಯಭಿನ್ನಾನಿ ।

ನಿಷ್ಠೇವಃ-ಪ್ಸ-ನಿಷ್ಠ್ಯೂತಿಃ-ಸ್ತ್ರೀ-ನಿಷ್ಠೇವನಂ- ನಿಷ್ಠವನಂ-ನ-೪-ಕೇಕರಿಕೆ, ಉಗುಳುವಿಕೆ, ಥೂಕರಿಸುವಿಕೆ.

ಜವನೇಜೂತಿ

ಜವನಃ- ಜೂತಿಃ- ಸ್ತ್ರೀ-೨- ಬೇಗಬೇಗ ಹೋಗುವಿಕೆ.

ಸ್ಸಾತಿಸ್ತ್ವವಸಾನೆ (ಸ್ಯಾ)

ಸಾತಿಃ-ಸ್ತ್ರೀ-ಅವಸಾನಂ-ನ-೨-ಕೆಲಸದ ತುದಿ.

ದಥಜ್ವಜ್ವರೆಜೂರ್ತಿಃ

ಜ್ವರಃ-ಪು-ಜೂರ್ತಿಃ-ಸ್ತ್ರೀ-೨-ಜ್ವರವು-ಅಜೀರ್ಣದಿಂದ ವ್ಯೆಬಿಸಿ ಯಾಗುವಿಕೆ.

ಉದಜ (ಸ್ತು ಪಶುಪ್ರೇರಣ)

ಉದಜಃ-ಪು-೧ ಪಶುಪ್ರೇರಣಂ-ದನಗ

ಕೆಸ್ನ ಗಮನಾದಿ ಕಾರ್ಯಗಳಲ್ಲಿ ಪ್ರೇರೇಪಿಸುವಿಕೆ.

ಅಕರಣಿರಿತ್ಯಾದಯಃಶ್ಶಾಪೇ।

ಅಕರಣಿಃ-ಅಜನಿಃ-ಅವಗ್ರಹಿಃ-ಇವುಮೊದಲಾದ ಶಬ್ದಗಳು ಶಾಪದಲ್ಲಿವರ್ತಿಸುವದು. ಅಂದರೆ ಬೊಯಿಗಳು ಹ್ಯಾಗಂದರೆ, ಅಕರಣಿಃ- ಕೆಲಸಕ್ಕೆ ಬಾರದ ವ್ಯೆಗಳ್ಳಿ; ಮುಕ್ತ, ಅಜನಿಃ- ತಬ್ಬಲಿಹುಟ್ಟು, ಅವಗ್ರಹಿಃ- ಬೇಋೂಸ.

ಗೋತ್ರಾಂತೇಭ್ಯಸ್ತಸ್ಯಬೃಂದಮಿತ್ಯೌಪಗವಕಾದಿಕಂ॥

ಗೋತ್ರಾಂತೇಭ್ಯಃ-ಅಪತ್ಯಪ್ರತ್ಯಯಾಂತಗಳಾದ ಔಪಗವಾದಿಶಬ್ದಗಳಮೇಲೆ,ತಸ್ಯ ಬೃಂದಮಿತಿ-ಅದರಗುಂಪುಎಂಬುವ ಅರ್ಥದಲ್ಲಿ, ಔಪಗವಕಾದಿಕಂ-ಔಪಗವಕಂ-ಗಾರ್ಗಕಂ-ದಾಕ್ಷಕಂ-ನ-ಇತ್ಯಾದಿ ಶಬ್ದರೂಪಗಳು ಹುಟ್ಟುತ್ತವೆ *ಉದಾಹರಣೆ* ಉಪಗೋರ್ಗೋತ್ರಾಪತ್ಯಾನಿಪುಮಾಂಸಃ ಔಪಗವಾಃ-ಔಪಗವಾನಾಂಬೃಂದಂ - ಔಪಗವಕಂ - ರಘೋರ್ಗೋತ್ರಾಪತ್ಯಾನಿ ಪುಮಾಂಸಃ-ರಾಘವಾಃ-ರಾಘವಾಣಾಂಬೃಂದಂ- ರಾಘವಕಂ.

ಅಪೂಪಿಕಂಶಾಷ್ಕುಲಿಕ( ಮೇವಮಾದ್ಯಮಚೇತಸಾಂ) ।

ಅಚೇತಸಾಂ-ಪ್ರಾಣಿವ್ಯತಿರಿಕ್ತಗಳಾದ, ಅಪೂಪಗಳು-ಶಷ್ಕುಲಿಗಳು ಮುಂತಾದವುಗಳ ಸಮೂಹದಲ್ಲಿ ಕ್ರಮವಾಗಿ, ಅಪೂಪಾನಾಂ ಬೃಂದಂ-ಆಪೂಪಿಕಂ-ಕಜ್ಜಾಯಗಳಗುಂಪು, ಶಷ್ಕುಲೀನಾಂಬೃಂದಂ - ಶಾಷ್ಕುಲಿಕಂ - ಚಕ್ಕುಲಿಗಳಗುಂಪು, ಇತ್ಯಾದಿ ರೂಪಭೇದಗಳು ಪುಟ್ಟುತ್ತವೆ, ಇವು ನ.

(ಮಾಣವಾನಾಂತು) ಮಾಣವ್ಯಂ

ಮಾಣವ್ಯಂ-ನ-೧-ಮಾಣವಾನಾಂಬೃಂದಂ-ಹುಡುಗರ ಗುಂಪು.

(ಸಹಾಯಾನಾಂ)ಸಹಾಯತಾ

ಸಹಾಯತಾ- ಸ್ತ್ರೀ-೧- ಸಹಾಯಾನಾಂ ಬೃಂದಂ- ಹಿಮ್ಮತ್ತಾಗಿ ಸಂಗಡ ಬಂದವರ ಗುಂಪು.

(ಹಲ್ಯಾಹಲಾನಾಂ)

ಹಲ್ಯಾ-ಸ್ತ್ರೀ-೧-ಹಲಾನಾಂಬೃಂದಂ-ನೇಗಲಗುಂಪು.

ಬ್ರಾಹ್ಮಣ್ಯಬಾಡಬ್ಯೇ(ತುದ್ವಿಜನ್ಮನಾಂ)

ಬ್ರಾಹ್ಮಣ್ಯಂ-ಬಾಡಬ್ಯಂ-ಪಾ-ಬಾಡವ್ಯಂ-ನ-ದ್ವಿಜನ್ಮನಾಂ ಬೃಂದಂ - ಬ್ರಾಹ್ಮಣರ ಗುಂಪು.

(ದ್ವೇಪರ್ಶುಕಾನಾಂಪೃಷ್ಠಾನಾಂ) ಪಾರ್ಶ್ವಂಪೃಷ್ಠ್ಯ(ಮನುಕ್ರಮಾತ ॥೧೨೪॥)

ಪಾರ್ಶ್ವಂ-ಪೃಷ್ಠ್ಯಂ-ಈ-೨-ನ್ನು, ಅನುಕ್ರಮಾತ್ಪಾರ್ಶುಕಾನಾಂ ಪೃಷ್ಠಾನಾಂ ಸಮೂಹಾ-ಪಕ್ಕೆಯೆಲುವುಗಳ ಗುಂಪು, ಪಾರ್ಶ್ವ-ಪೃಷ್ಠಗಳೆಂಬ ಯುಕ್ತ ಸಂಬಂಧಗಳಾದಸ್ತೋತ್ರ ವಿಶೇಷಗಳಸಮೂಹವು. ಪೃಷ್ಠ್ಯ.

(ಖಲಾನಾಂ)ಖಲಿನೀಽಖಲ್ಯಾಽಥಮಾನುಷ್ಯಕಂ (ನೃಣಾಂ)

ಖಲಿನೀ-ಖಲ್ಯಾ-ಸ್ತ್ರೀ-೨-ಖಲನಾಂ ಕಣಗಳಗುಂಪು. ಮಾನುಷ್ಯಕಂ--ನ-೧--ನೃಣಾಂ-ಮನುಷ್ಯರ ಗುಂಪು.

ಗ್ರಾಮತಾಜನತಾಧೂಮ್ಯಾ ಪಾಶ್ಯಾಗಲ್ಯಾ(ಪೃಥಕ್ಪೃಥಕ್)

ಗ್ರಾಮತಾ-ಜನತಾ-ಧೂಮ್ಯಾ-ಪಾಶ್ಯಾ-ಗಲ್ಯಾ-೪-ಸ್ತ್ರೀ-ಪೃಥಕ್ಪೃಥಕ್-ಬೃಂದಾನಿ-ಗ್ರಾಮತಾ-ಹಳ್ಳಿಗಳಗುಂಪು. ಜನತಾ-ಮನುಷ್ಯರಗುಂಪು,ಧೂಮ್ಯಾ-ಹೊಗೆಗಳಗುಂಪು,ಪಾಶ್ಯಾ-ಕಟ್ಟುಹಗ್ಗಗಳಗುಂಪು,ಗಲ್ಯಾ-ಜಂಬು ಹುಲ್ಲುಗಳ ಗುಂಪು, ಅಥವಾ ಕತ್ತೆಗಳಗುಂಪು.

ಅಪಿಸಾಹಸ್ರಕಾರೀಷವಾರ್ಮಣಾಥರ್ವಣಾದಿಕಂ।

ಸಹಸ್ರಾಣಾಂಬೃಂದಂ (ಸಾಹಸ್ರಂ) ಸಾವಿರಗಳಗುಂಪು, ಕರೀಷಾಣಾಂ ಬೃಂದಂ-(ಕಾರೀಷಂ) ಸಗಣಿತೊಪ್ಪೆ ಬೆರಣಿ ಮುಂತಾದವುಗಳಗುಂಪು. ವರ್ಮಣಾಂ ಬೃಂದಂ-(ವಾರ್ಮಣಂ) ಕೆರಮುಂತಾದ ಚರ್ಮಕವಚಗಳಗುಂಪು,ಅಥರ್ವಣಾಂ ಬೃಂದಂ (ಆಥರ್ವಣಂ)ಅಥರ್ವಣ ಮಂತ್ರಗಳಗುಂಪು, ೪ ಆದಿ ಶಬ್ದದಿಂದ ಅಂಗಾರಾಣಾಂ ಬೃದಂ (ಆಂಗಾರಂ) ಬೆಂಕಿಯುಕೆಂಡಗಳ ಗುಂಪು. ಚರ್ಮಣಾಂಬೃಂದಂ (ಚಾರ್ಮಣಂ) ತೊಗಲುಗಳ

-*ಇತಿಸಂಕೀರ್ಣವರ್ಗಃ*-

ಗುಂಪು. ಇತ್ಯಾದಿಗಳು. ನ.

ಸಂಕೀರ್ಣ-ಪ್ರಕೃತಿ ಪ್ರತ್ಯಯಾರ್ಥಾದಿಗಳಿಂದ ಲಿಂಗಭೇದವನ್ನು ಹೊಂದಿಯಿರುವ ನಾನಾವಿಧ ಶಬ್ದಗಳ, ವರ್ಗಃ-ಸಮೂಹವು. ಇತಿ-ಈಮೇರೆ ಮುಗಿದುದು.

—:*:—

## ಅಥ ನಾನಾರ್ಥವರ್ಗಃ.

ಅವತರಣಿಕೆ:—ಈ ಗ್ರಂಥಕರ್ತನು ಇದುವರಿವಿಗೂ ಹೇಳಲ್ಪಟ್ಟ ಪದಗಳಿಗೊಂದರ್ಥವನ್ನುಹೇಳಿ, ಮುಂದೆ ಯೊಂದೊಂದುಪದಗಳಿಗೆ ಅನೇಕಾರ್ಥಗಳನ್ನು ತಿಳಿಸುವದಕ್ಕಾಗಿ ನಾನಾರ್ಥವರ್ಗವನ್ನು ಆರಂಭಿಸಿ ಅದರೊಳಗೆ ಹೇಳಲ್ಪಡುವ ಶಬ್ದಗಳು ಪೂರ್ವೋಕ್ತಗಳಾದರೆ ಪೌನರುಕ್ತ್ಯವೆಂಬ ದೋಷ ಬರುತ್ತೆನ್ನುವಶಂಕೆಗೆ ಮೊದಲೇ ಸಮಾಧಾನ ಹೇಳುತ್ತಾನೆ. ಹ್ಯಾಗಂದರೆ,—

ಮೂ॥ ನಾನಾರ್ಥಾಃಕೇಪಿಕಾಂತಾದಿವರ್ಗೆಷ್ವೇವಾತ್ರಕೀರ್ತಿತಾಃ।
ಭೂರಿಪ್ರಯೋಗಾಯೆಯೇಷು ಪರ್ಯಾಯೇಷ್ವಪಿತೇಷುತೇ ॥

ಟೀ॥ ಅತ್ರ-ಈ ಗ್ರಂಥದಲ್ಲಿ, ನಾನಾರ್ಥಾಃ-ಅನೇಕಾರ್ಥಗಳುಳ್ಳ, ಕೇಪಿ-ಯಾವ ಅರ್ಥದಲ್ಲಿಯೂ, ಪ್ರಸಿದ್ಧ ಪ್ರಯೋಗವಿಲ್ಲದ ಕೆಲವು ಪದಗಳು, ಕಾಂತಾದಿವರ್ಗೆಷ್ವೇವ-ಕಾಂತ, ಖಾಂತ, ಗಾಂತ, ಘಾಂತ, ಮುಂತಾದ ಪದ ಸಮೂಹಗಳಲ್ಲಿಯೇ, ಕೀರ್ತಿತಾಃ-ಹೇಳಲ್ಪಟ್ಟವು;ಯೆ-ಯಾವ ಶಬ್ದಗಳು, ಯೆಷು-ಯಾವಅರ್ಥಗಳಲ್ಲಿ, ಭೂರಿಪ್ರಯೋಗಾಃ-ಪ್ರಚುರವಾದ ಪ್ರಯೋಗವುಳ್ಳವುಗಳೂ, ತೆ-ಅಂತಾ ಪ್ರಸಿದ್ಧ ಪ್ರಯೋಗವುಳ್ಳ ಶಬ್ದಗಳು. ತೆಷುಪರ್ಯಾಯೆಷ್ವಪಿ-ಅದರ ಅರ್ಥವುಳ್ಳ ಪರ್ಯಾಯ ಶಬ್ದಗಳು ಹೇಳಲ್ಪಟ್ಟ ಸ್ಥಳಗಳಲ್ಲಿಯೂ, ಅಪಿ-ಪ್ರಸಿದ್ಧವಾಗಿದ್ದ ಅರ್ಥವನ್ನು ಪ್ರಸಿದ್ಧವಾಗುವಂತೆ ತಿಳಿಯಪಡಿಸುವದಕ್ಕೋಸ್ಕರ ಹೇಳಲ್ಪಟ್ಟವೆ, ತಾತ್ಪರ್ಯ, ಇದುವರಿವಿಗೆ ಪರ್ಯಾಯ ಪದಗಳಲ್ಲಿ ಹೇಳಲ್ಪಡದೇ ಇರುವ ಪದಗಳು ಕೆಲವು, ಹೇಳಲ್ಪಟ್ಟಿರುವವು ಕೆಲವು, ಈ ೨ ಬಗೆಯಾದವುಗಳೂ ಸಹ ಅವುಗಳ ಅನೇಕಾರ್ಥಗಳು ಪ್ರಸಿದ್ಧಗಳಾಗಿ ತಿಳಿಯಬರುವಂತೆ ಹೇಳಲ್ಪಡುತ್ತೆಂದು ತಾತ್ಪರ್ಯವು. ಅಪ್ರಸಿದ್ಧಾರ್ಥಗಳನ್ನು ತಿಳಿಸುವದಕ್ಕೆ ಪೂರ್ವೋಕ್ತ ಪದಗಳೂ ಕೆಲವು, ಹೇಳಲ್ಪಡ ಬೇಕಾಯಿತು.

ಮುಂದೆ ಹೇಳಲ್ಪಡುವ ಪ್ರಥಮಾಂತಪದಗಳು, ಸಪ್ತಮ್ಯಂತ ಪದಾರ್ಥಗಳಿಗೆ ಹೆಸರಾಗುವವೆಂದು ಪ್ರಾಯಿಕವಾಗಿ ಮೂಲವನ್ನು ಕ್ರಮದಿಂದ ಅನ್ವಯಿಸಿ ತಿಳಿಯ[illegible] ಸಪ್ತ

ವ್ಯಂತ ಪದಗಳನ್ನು ಟೀಕೆಯಲ್ಲಿ ಹೇಳುವದಿಲ್ಲವು, ಆದರೆ, ಅಪ್ರಸಿದ್ಧಗಳಾದ್ದರಿಂದ ತಿಳಿದುಕೊಳ್ಳಬೇಕಾಗಿ ತೋರಿದ ಕೆಲವು ಪದಗಳನ್ನು ಅರ್ಥದೊಂದಿಗೂ ಬರೆಯುತ್ತೇವೆಂದಾಗಿ ಪ್ರತಿಪದ ಟೀಕೆಯನ್ನು ಅಪೇಕ್ಷಿಸುವವರ ಉದ್ದೇಶ್ಯವೂ ನೆರವೇರ ಬಹುದು.

ಆಕಾಶೇ ತ್ರಿದಿವೇ ನಾಕೋ

[ನಾಕಃ-ಪು-೧-ಆಕಾಶೇ-ಗಗನದಲ್ಲಿಯೂ, ತ್ರಿದಿವೇ- ಸ್ವರ್ಗದಲ್ಲಿಯೂ, ವರ್ತಿಸುವದು.

ಲೋಕಸ್ತು ಭುವನೇ ಜನೇ ‖

ಲೋಕಃ-ಪು-೧-ಭುವನೇ-ಸ್ವರ್ಗಾದಿ ಲೋಕದಲ್ಲಿಯೂ, ಜನೇ-ಮನುಷ್ಯಾದಿಪ್ರಾಣಿವರ್ಗದಲ್ಲಿಯೂ, ವರ್ತಿಸುವದು.

ಪದ್ಯೇ ಯಶಸಿ ಚ ಶ್ಲೋಕಃ

ಶ್ಲೋಕಃ-ಪು-೧-ಪದ್ಯೇ- ನಾಲ್ಕು ಪಾದಗಳುಳ್ಳ ಶ್ಲೋಕದಲ್ಲಿಯೂ, ಯಶಸಿಚ-ಕೀರ್ತಿಯಲ್ಲಿಯೂ, ವಾಚಕ ಸಂಬಂಧದಿಂದ ವರ್ತಿಸುವದು. ಈ ಮೇರೆ ಕಡೆಗೂ ಸಪ್ತಮ್ಯಂತಗಳನ್ನು ಅನ್ವಯಿಸಿಕೊಂಡು ಮೂಲಕ್ಕೆ ಅರ್ಥ ತಿಳಿಯಬಹುದು.

ಶರೇ ಖಡ್ಗೇ ಚ ಸಾಯಕಃ ।

ಸಾಯಕಃ-ಪು-೧-ಶರೇ-ಬಾಣಕ್ಕೂ, ಖಡ್ಗೇಚ- ಕತ್ತಿಗೂ [ಹೆಸರು.] ಚಕಾರದಿಂದ ಸಾಧಕ ಸಾಮಗ್ರಿಗೂ ಹೆಸರು.

ಜಂಬುಕೌ ಕ್ರೋಷ್ಟುವರುಣೌ

ಜಂಬುಕಃ-ಪು-೧-ಕ್ರೋಷ್ಟು-ನರಿಗೂ, ವರುಣೌ-ವರುಣನಿಗೂ ಹೆಸರಾಗುತ್ತೆ. ಈ ಮೇರೆ ತಾತ್ಪರ್ಯವು.

ಪೃಥುಕೌ ಚಿಪಿಟಾರ್ಭಕೌ

ಪೃಥುಕಃ-ಪು-ಅವಲಕ್ಕಿ, ಮಗುವು.

ಆಲೋಕೌ ದರ್ಶನೋದ್ದ್ಯೋತೌ ।

ಆಲೋಕಃ-ಪು -೧- ನೋಡುವಿಕೆ, ಬೆಳಕು, ೨.

ಭೇರೀಪಟಹಮಾನಕೌ

ಆನಕಃ-ಪು-೧-ಭೇರೀ, ತಮಟೆ, ೨.

ಉತ್ಸಂಗಚಿಹ್ನಯೋರಂಕಃ

ಅಂಕಃ-ಪು-೧-ತೊಡೆ, ಗುರ್ತು, ೨.

ಕಳಂಕೋಂಕಾಪವಾದಯೋಃ ‖

ಕಳಂಕಃ-ಪು-೧-ಗುರ್ತು, ಅಪವಾದ೨

ತಕ್ಷಕೋ ನಾಗವರ್ಧಕ್ಯೋಃ

ತಕ್ಷಕಃ-ಪು-೧-ತಕ್ಷಕನೆಂಬ ಹಾವು, ಬಡಿಗಿ, ೨.

ಅರ್ಕಃ ಸ್ಫಟಿಕಸೂರ್ಯಯೋಃ

ಅರ್ಕಃ-ಪು-೧-ಸ್ಫಟಿಕ, ಸೂರ್ಯ. ೨

ಮಾರುತೇ ವೇಧಸಿ ಬ್ರಧ್ನೇ ಪುಂಸಿ

ಕಃ-ಪು-೧-ಗಾಳಿ, ಬ್ರಹ್ಮನು, ಸೂರ್ಯ

ವನು, ೨.

ಉಪರ್ಯುದೀಚ್ಯಶ್ರೇಷ್ಠೆ ಪ್ವಪ್ಯುತ್ತರಸ್ತ್ವ

ಉತ್ತರಃ-ತ್ರಿ-೧- ಮೇಲಿನವನು, ಬಡಗಲದು, ಶ್ರೇಷ್ಠವಾದದ್ದು, ಪ್ರತ್ಯುತ್ತರಕ್ಕೆ ಹೆಸರಾದಾಗ, ಸ, ೪.

ದನುತ್ತರಃ।ಏಷಾಂವಿಪರ್ಯಯೆಶ್ರೇಷ್ಠೆ

ಅನುತ್ತರಃ- ತ್ರಿ-೧- ಉತ್ತರವಾಗದ್ದು, ಯಾವದಕ್ಕಿಂತಲೂ ಉತ್ತರವಾದ್ದಿಲ್ಲವೋ ಅದುಅಂದರೆ ಸರ್ವೋತ್ತರ.

ದೂರಾನಾತ್ಮೋತ್ತಮಾಃಪರಾಃ

ಪರಃ-ತ್ರಿ-೧-ದೂರ,ಇತರ, ಉತ್ತಮ, ೩.

ಸ್ವಾದುಪ್ರಿಯೌತುಮಧುರೌ

ಮಧುರಃ-ತ್ರಿ-೧-ಶೀಯಾದ್ದು, ಇಷ್ಟವಾದ್ದು, ೨.

ಕ್ರೂರೌಕಠಿಣನಿರ್ದಯೌ।

ಕ್ರೂರಃ-ತ್ರಿ-೧- ಕಠಿಣವಾದ, ಕರುಣೆಯಿಲ್ಲದ, ೨.

ಉದಾರೊದಾತೃಮಹತೊ

ಉದಾರಃ-ತ್ರಿ-೧-ಕೊಡುವವನು, ದೊಡ್ಡವನು, ೨.

ರಿತರಸ್ತ್ವನ್ಯನೀಚಯೊಃ।

ಇತರಃ-ತ್ರಿ-೧-ಬೇರ್ಪಟ್ಟವನು,ನೀಚನು,೨.

ಮಂದಸ್ವಚ್ಛಂದಯೊಃಸ್ವೈರ

ಸ್ವೈರಃ-ತ್ರಿ-೧-ಆಲಸ್ಯಗಾರ, ಸ್ವತಂತ್ರನು, ೨.

ಶುಭ್ರಮುದ್ದೀಪ್ತಶುಕ್ಲಯೊಃ।

ಶುಭ್ರಂ-ತ್ರಿ-೧-ಬೆಳಗುತ್ತಿರುವದು, ಬಿಳುಪಾದ್ದು, ೨.

***ಇತಿ ರಾಂತವರ್ಗಃ***

—*—

ರಾಂತವರ್ಗಃ-ರೇಫಾಂತನಾನಾರ್ಥಪದಸಮೂಹನು, ಇತಿ-ಈಮೇರೆ ಮುಗಿದುದು.

ಚೂಡಾಕಿರೀಟಂಕೇಶಾಶ್ಚ ಸಂಯತಾಮೌಳಯಸ್ತ್ರಯಃ।

ಮೌಳಿಃ-ಪ್ಸ-೧-ಜುಟ್ಟು, ಕಿರೀಟ, ಜಡೆ ಮುಡಿ, ೩.

ದ್ರುಮಪ್ರಭೇದಮಾತಂಗಕಾಂಡಪುಷ್ಪಾಣಿಪೀಲವಃ।

ಪೀಲುಃ-ಪು-೧-ಪುಂಡೀಗಿಡ, ಆನೇ, ಸರಳು, ಹುವ್ವು, ೪.

ಕೃತಾಂತಾನೆಹಸೊಃ ಕಾಲಶ್ಚತುರ್ಥೆಪಿಯುಗೆಕಲಿಃ ॥

ಕಾಲಃ-ಪು-೧-ಯಮ, ಹೊತ್ತು, ೨.

ಕಲಿಃ-ಪು-೧-ನಾಲ್ಕನೇಯುಗ,ಕಲಹ,೨.

ಸ್ಯಾತ್ಕುರಂಗೆಪಿಕಮಲಃ

ಕಮಲಃ-ಪು-೧-ಕಡಬ,ತಾವರೆ, ನೀರು, ನ-ಲಕ್ಷ್ಮೀ, ಸ್ತ್ರೀ.

ಪ್ರಾವಾರೆಪಿಚಕಂಬಳಃ।

ಕಂಬಳಃ-ಪು-೩-ಅಂಗೋಸ್ತ್ರ-ಕಂಬಳಿ, ಗಂಗೆದೊಗಲು, ೩.

ಕರೋಪಹಾರಯೋಃ ಪುಂಸಿ
ಬಲಿಃಪ್ರಾಣ್ಯಂಗಜೇಸ್ತ್ರಿಯಾಂ।

ಸ್ಥೌಲ್ಯಸಾಮರ್ಥ್ಯ ಸೈನ್ಯೇ
ಷುಬಲಂನಾಕಾಕಸೀರಿಣೋಃ।

ವಾತೂಲಃಪುಂಸಿವಾತ್ಯಾಯಾ
ಮಪಿವಾತಾಸಹೇತ್ರಿಷು ।

ಭೇದ್ಯಲಿಂಗಶ್ಶಠೇವ್ಯಾಳಃಪುಂ
ಸಿಶ್ವಾಪದಸರ್ಪಯೋಃ।
ಮಲೋಸ್ತ್ರೀಪಾಪವಿಟ್ಕಿಟ್ಟಾ
ನ್ಯಸ್ತ್ರೀಶೂಲಂರುಗಾಯುಧಂ।

ಶಂಕಾವಪಿದ್ವಯೋಃಕೀಲಃ

ಪಾಳಿಃಸ್ತ್ರ್ಯಶ್ರ್ಯಂಕಪಙ್ಕ್ತಿಷು।
ಕಲಾಶಿಲ್ಪೇಕಾಲಭೇದೇಪ್ಯಾ

ಲೀಃಸ್ವಸ್ಯಾವಳೀಅಪಿ।
ಅಬ್ಧ್ಯಂಬುವಿಕೃತೌ ವೇಲಾ
ಕಾಲಮರ್ಯಾದಯೋರಪಿ।

ಬಹುಳಾಃಕೃತ್ತಿಕಾ ಗಾವೋ
ಬಹುಳಾಚಾಸಿತೇತ್ರಿಷು ॥

ಲೀಲಾವಿಲಾಸಕ್ರಿಯಯೋ
ರುಪಲಾಶರ್ಕರಾಪಿಚ ।

ಬಲಿಃ-ಪು-೧-ಕಾಣಿಕೆ, ಪ್ರಾಣಿಗಳ ಅಂಗದಲ್ಲಿಹುಟ್ಟಿದ್ದು, ಅಂದರೆ, ತ್ರಿವಳಿಮುಂತಾದ್ದು, ಸ್ತ್ರೀ- ಬಲಿಚಕ್ರವರ್ತಿ, ಪು.

ಬಲಂ-ನ-೧-ಬಲಿತಿರುವಿಕೆ, ಸಾಮರ್ಥ್ಯ, ಸೇನೆ, ಕಾಗಿಗೂ ಬಲರಾಮನಿಗೂ ಹೆಸರಾದಾಗ, ಪು.

ವಾತೂಲಃ-ಪು-೧-ಗಾಳಿಗೆಹೆಸರಾದಾಗ, ಪು-ಗಾಳಿಯನ್ನು ಸಹಿಸಿಕೊಳ್ಳುವದಕ್ಕೆ ಅಶಕ್ಯವಾದ್ದು, ತ್ರಿ.

ವ್ಯಾಳಃ-ಪು-೧-ದುರ್ಜನನು, ಹುಲಿ,ಹಾವು, ೩.

ಮಲಃ-ಪ್ನ-೧-ಪಾಪ, ಅಮೇಧ್ಯ, ಕಿಟ್ಟ, ಕೊಳೆ, ೪.

ಶೂಲಂ-ಪ್ನ-೧-ಶೂಲರೋಗ, ಶೂಲಾಯುಧ, ೨.

ಕೀಲಃ-ಪ್ಸ-೧-ಗೂಟದಮೊಳೆ, ಮಣ್ಣಾಚೀಲ ಉರಿ, ೩.

ಪಾಳಿಃ-ಸ್ತ್ರೀ-೧-ಅಂಚು,ಗುರ್ತು, ಪಂಕ್ತಿ,೩.

ಕಲಾ- ಸ್ತ್ರೀ-೧-ಕೆಲಸದ ಚಮತ್ಕಾರ, ೫೪೦ ರೆಪ್ಪೆಪಾಟುಗಳ ಹೊತ್ತು, ಕಾಂತಿ, ಷೋಡಶಭಾಗ, ೪.

ಆಳಿಃ-ಸ್ತ್ರೀ-೧-ಸಖಿಯುಳು, ಪಂಕ್ತಿ, ೨.

ವೇಲಾ-ಸ್ತ್ರೀ-೧-ಕಡಲುಕ್ಕಿಮೇಲ್ಬಾಯುದತಡೆ, ದಡ, ಕೆಲಸಕ್ಕೆತಕ್ಕಸಮಯ,ಮರ್ಯಾದೆ, ನೀರಕಟ್ಟೆ, ೫.

ಬಹುಳಾಃ-ಸ್ತ್ರೀ-ಬ-೧- ಕೃತ್ತಿಕಾನಕ್ಷತ್ರ, ಗೋವುಗಳು, ಇಬ್ಬ,೩-ಕಪ್ಪನೇವಸ್ತುವಿಗೆ ಹೆಸರಾದಾಗ ತ್ರಿ, ೪.

ಲೀಲಾ-ಸ್ತ್ರೀ-ಶೃಂಗಾರಚೇಷ್ಟೆ, ಕ್ರಿಯೆ,೨

ಉಪಲಾ-ಸ್ತ್ರೀ-೧- ಮರಳು, ಕಲ್ಲು, ನೆರುಜುನೆಲ, ಪು.

ಶೋಣಿತೇಂಭಸಿಕೀಲಾಲಂ
ಮೂಲಮಾದ್ಯೇಶಿಫಾಭಯೋಃ।

ಜಾಲಂಸಮೂಹ ಆನಾಯೊ
ಗವಾಕ್ಷಕ್ಷಾರಕಾವಪಿ ॥
ಶೀಲಂಸ್ವಭಾವೇಸದ್ವೃತ್ತೌ
ಸಸ್ಯೇಹೇತುಕೃತೇಫಲಂ।

ಛದಿರ್ನೇತ್ರರುಜೋಃಕ್ಲೀಬಂ
ಸಮೂಹೇಪಟಲಂನನಾ।
ಅಧಸ್ಸ್ವರೂಪಯೋ ರಸ್ತ್ರೀ
ತಲಂ
ಸ್ಯಾಚ್ಚಾಮಿಷೇಪಲಂ।

ಔರ್ವಾನಲೇಪಿ ಪಾತಾಳಂ

ಚೇಲಂವಸ್ತ್ರೇಧಮೇತ್ರಿಷು।

ಕುಕೂಲಂಶಂಕುಭಿಃಕೀರ್ಣೇ
ಶ್ವಭ್ರೇನಾತುತುಷಾನಲೇ। ೨೨೪

ನಿರ್ಣೀತೇಕೇವಲಮಿತಿ ತ್ರಿಲಿಂ
ಗಂತ್ವೇಕಕೃತ್ಸ್ನಯೋಃ।

ಪರ್ಯಾಪ್ತಿಕ್ಷೇಮಪುಣ್ಯೇಷುಕು
ಶಲಂಶಿಕ್ಷಿತೇತ್ರಿಷು ॥೨೨೫॥

ಪ್ರವಾಳಮಂಕುರೇಪ್ಯಸ್ತ್ರೀ

ತ್ರಿಷುಸ್ಥೂಲಂಜಡೇಪಿಚ।

ಕೀಲಾಲಂ-ನ-೧-ರಕ್ತ, ನೀರು, ೨.
ಮೂಲಂ-ನ-೧-ಮೊದಲನೇದು, ಬೀಲು, ಮೂಲಾನಕ್ಷತ್ರ.
ಜಾಲಂ-ನ-೧-ಗುಂಪು, ಬಲೆ,ಗವಾಕ್ಷ,ಕಸರುಮುಗ್ಗು,ಡಂಭ,ಪಡುವಲಗಿಡ, ಸ್ತ್ರೀ-೬.
ಶೀಲಂ-ನ-೧-ಸ್ವಭಾವ, ಒಳ್ಳೇನಡತೆ,೨.
ಫಲಂ-ನ-೧-ಬೆಳೆದ ಧಾನ್ಯಾದಿಫಲ, ಪ್ರಯೋಜನ, ೨.
ಪಟಲಂ-ನ-೧-ಮನೇಹೊದಿಕೆ, ನೇತ್ರರೋಗ, ಗುಂಪು, ನ.
ತಲಂ-ಪ್ಮ-೧-ಕೆಳಗಡೆ, ಸ್ವರೂಪ, ಅಂಗೈಪೆಟ್ಟು, ೩.
ಪಲಂ-ನ-೧-ಮಾಂಸ, ೩೨೦ ಗುಲಗಂಜೀತೂಕ, ೨.
ಪಾತಾಳಂ-ನ-೧- ಬಡಬಾಗ್ನಿ, ನಾಗಲೋಕ, ೨.
ಚೇಲಂ-ನ-೧-ವಸ್ತ್ರ, ಅಧಮವಾದದ್ದು, ತ್ರಿ, ೨.
ಕುಕೂಲಂ-ನ-೧-ದನಗಳು ಬಾರದಂತೆ ಸುತ್ತಲೂ ಗೂಟಗಳು ನೆಟ್ಟಲ್ಪಟ್ಟಗುಳಿ, ಹೊಟ್ಟಿಕಿಚ್ಚು, ಪು-೨.
ಕೇವಲಂ-ನ-೧- ನಿರ್ಣಯಿಸಲ್ಪಟ್ಟದ್ದು. ಇದು ಅವ್ಯಯವೆಂದು ಕೆಲವರ ಪಕ್ಷವು, ಎಲ್ಲವೂ, ಒಬ್ಬ, ಪಂದೇ, ೨-ತ್ರಿ-೪.
ಕುಶಲಂ-ನ-೧-ಸಾಕಾದಷ್ಟುಗೆಬೇಕಾದದ್ದು ಉಂಟಾಗಿರುವಿಕೆ, ಸುರಕ್ಷಿತವಾಗಿರುವಿಕೆ, ಪುಣ್ಯ, ಶಿಕ್ಷಿಸಲ್ಪಟ್ಟ, ತ್ರಿ.
ಪ್ರವಾಳಂ-ನ-೧-ಮೊಳಕೆ, ಚಿಗುರು, ಪವಳ, ವೀಣೆಯದಂಡಿಗೆ, ೪.
ಸ್ಥೂಲಂ-ತ್ರಿ-೧-ಮಂಕನು, ಬಲಿತುದೊ
[illegible]

ಕರಾಳೋದಂತುರೇ ತುಂಗೇ

ಚಾರೌ ದಕ್ಷೇಚಪೇಶಲಃ।

ಮೂರ್ಖೇರ್ಭಕೇಪಿಬಾಲಸ್ಸ್ಯಾ

ಲ್ಲೋಲಶ್ಚಲಸತೃಷ್ಣಯೋಃ।

ಇತಿಲಾಂತವರ್ಗಃ.

—*—

ದವದಾವೌವನಾರಣ್ಯವಹ್ನೀ

ಜನ್ಮಹರೌಭವೌ ॥೩೬೧॥

ಮಂತ್ರೀಸಹಾಯಸ್ಸಚಿವೌ

ಪತಿಶಾಖಿನರಾಧವಾಃ।

ಅವಯಶ್ಶೈಲಮೇಷಾರ್ಕಾ

ಆಜ್ಞಾಹ್ವಾನಾಧ್ವರಾಹವಾಃ।

ಭಾವಸ್ಸತ್ತಾಸ್ವಭಾವಾಭಿ

ಪ್ರಾಯಚೇಷ್ಟಾತ್ಮಜನ್ಮಸು।

ಸ್ಯಾದುತ್ಪಾದೇಫಲೇಪುಷ್ಪೇಪ್ರ

ಸವೋಗರ್ಭವಿಮೋಚನೇ॥

ಅವಿಶ್ವಾಸೇಪಹ್ನವೇಪಿನಿಕೃತಾ

ವಪಿನಿಹ್ನವಃ।

ಉತ್ಸೇಕಾಮರ್ಷಯೋರಿಚ್ಛಾ

ಪ್ರಸರೇಮಹಉತ್ಸವಃ॥

ಕರಾಳಃ-ತ್ರಿ-೧-ಗಟ್ಟಿದಿಣ್ಣೆ, ಉದ್ದವಾದವನು, ೨.

ಪೇಶಲಃ-ತ್ರಿ-೧-ಮನೋಹರನು, ಚತುರನು, ಪನಿಕೆ, ೩.

ಬಾಲಃ-ತ್ರಿ-೧-ಮೂರ್ಖನು, ಹುಡುಗ, ಲಾಮಂಚಕ್ಕೆ ಹೆಸರಾದಾಗ-ನ-ಬಾಲದಕೂದಲಿಗೆ ಹೆಸರಾದಾಗ-ಪ್ರು, ೪.

ಲೋಲಃ-ತ್ರಿ-೧-ಚಂಚಲವಾದ್ದು, ಆಶೆಯುಳ್ಳದ್ದು, ೨.

ಲಾಂತವರ್ಗಃ- ಲಕಾರಾಂತ ನಾನಾರ್ಥಕ ಪದಗಳ ಸಮೂಹವು, ಇತಿ-ಈವರೆಗೆ ಮುಗಿದುದು.

ದವಃ-ದಾವಃ-ಪು-೨-ಕಾಡು, ಕಾಡುಕಿಚ್ಚು, ೨.

ಭವಃ-ಪು-೧-ಹುಟ್ಟುವಿಕೆ, ಶಿವನು, ೨.

ಸಚಿವಃ-ಪು- ೧-ಮಂತ್ರಿ, ಸಹಾಯವಾಗಿರುವವನು, ೨.

ಧವಃ-ಪು-೧-ಗಂಡನು, ಕಗ್ಗಲೀಮರ, ಮನುಷ್ಯ, ೩.

ಅವಿಃ-ಪು-೧-ಬೆಟ್ಟ, ಕುರಿ, ಸೂರ್ಯ, ೩.

ಹವಃ-ಪು-೧-ಅಜ್ಞೆ, ಕರೆಯುವಿಕೆ, ಯಜ್ಞ, ೩

ಭಾವಃ-ಪು-೧-ಪರಿಣಾಮದ ಆವಿರ್ಭಾವ, ಸ್ವಭಾವ, ತಾತ್ಪರ್ಯ, ಧಾತುವಾಚ್ಯಕ್ರಿಯೆ, ಆತ್ಮನು, ಉತ್ಪತ್ತಿ, ಮನೋವಿಕಾರ, ಆಗುವಿಕೆ, ಸದ್ಭಾವ, ೯.

ಪ್ರಸವಃ-ಪು-೧-ಹುಟ್ಟುಹಾಕುವಿಕೆ, ಹಣ್ಣು, ಹುವ್ವು, ಹೆರುವಿಕೆ, ೪.

ನಿಹ್ನವಃ-ಪು-೧-ಅವಿಶ್ವಾಸ, ಬಚ್ಚಿಡುವಿಕೆ, ತಿರಸ್ಕಾರ, ಅಪಲಾಪಗೊಳಿಸುವಿಕೆ, ೪.

ಉತ್ಸವಃ-ಪು-೧-ಉಕ್ಕುವಿಕೆ, ಕೋಪ, ಇಚ್ಛೆ, ಹೆರುವಿಕೆ, ಹಬ್ಬ, ೫.

ಅನುಭಾವಃಪ್ರಭಾವೇಚಸ ತಾಂಚಮತಿನಿಶ್ಚಯೇ।
ಸ್ಯಾಜ್ಜನ್ಮಹೇತುಃ ಪ್ರಭವಃ ಸ್ಥಾನಂಚಾದ್ಯೋಪಲಬ್ಧಯೇ॥

ಧ್ರುವೋಭಭೇದೇಕ್ಲೀಬಂತು ನಿಶ್ಚಿತೇಶಾಶ್ವತೇತ್ರಿಷು।

ಸ್ವೋಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇಸ್ವೋಸ್ತ್ರಿಯಾಂ ಧನೇ ॥೨೬೬॥
ಸ್ತ್ರೀಕಟೀವಸ್ತ್ರಬಂಧೇಪಿ ನೀವೀಪರಿಪಣೇಪಿಚ॥

ಶಿವಾಗೌರೀಫೇರವಯೋ

ದ್ವಂದ್ವಂಕಲಹ ಯುಗ್ಮಯೋಃ ॥೨೬೭॥
ದ್ರವ್ಯಾಸುವ್ಯವಸಾಯೇಷುಸತ್ವಮಸ್ತ್ರೀಷುಜಂತುಷು।
ಕ್ಲೀಬಂನಪುಂಸಕೇಷಂಡೇವಾಚ್ಯಲಿಂಗಮವಿಕ್ರಮೇ॥
✻ಇತಿವಾಂತವರ್ಗಃ✻
—:✻:—

ದ್ವೌವಿಶೌ ವೈಶ್ಯಮನುಜೌ ದ್ವೌಚಾರಾಭಿಮುರೌಸ್ಪಶೌ।

ದ್ವೌರಾಶೀಪುಂಜಮೇಷಾದ್ಯೌ ದ್ವೌವಂಶೌ ಕುಲಮಸ್ಕರೌ॥

ಅನುಭಾವಃ-ಪು-೧- ಪ್ರಭಾವ, ಹಿರಿಯರಬುದ್ಧಿ ನಿಶ್ಚಯ, ೨.

ಪ್ರಭವಃ-ಪು-೧-ಜನನ, ಕಾರಣ, ತಿಳಿವಳಿಕೆಗೆ, ಸ್ಥಳ, ಪ್ರಭವಸಂವತ್ಸರ. ಸಮರ್ಥ, ೫.

ಧ್ರುವಃ-ಪು-೧-ಧ್ರುವನಕ್ಷತ್ರ, ನಿಶ್ಚಯಿಸಲ್ಪಟ್ಟದ್ದಕ್ಕೂ, ಶಾಶ್ವತವಾದ್ದಕ್ಕೂಹೆಸರಾದಾಗ, ತ್ರಿ.

ಸ್ವಃ-೧-ಜ್ಞಾತಿ, ತನ್ನವನು, ೨-ಪು-ತಾನೇ, ಪ್ನ-ತನ್ನ ಸಂಬಂಧವಾದದ್ದು,ತ್ರಿ-ಧನ, ಪ್ನ, ೫.

ನೀವೀ-ಸ್ತ್ರೀ-೧-ಹೆಂಗಸಸೀರೆ, ನೆರಿಯಗಂಟು, ಬಂಡವಾಳದವಡಿವೆ, ಪಂದ್ಯಕಟ್ಟಿಕೊಂಡವಡಿವೆ, ೩.

ಶಿವಾ-ಸ್ತ್ರೀ-೧-ಗೌರೀದೇವಿ, ನರಿ, ಅಳಲೇಗಿಡ, ನೆಲ್ಲೀಗಿಡ. ಶಿವಂ-ನ-೧- ಶುಭವು, ಶಿವಃ, ಪು-೧-ಜಗದೀಶ್ವರ, ೬.

ದ್ವಂದ್ವಂ-ನ-೧-ಜಗಳ, ಜೋಡಿ, ಕೂಡಿದ್ದು, ರಹಸ್ಯ, ೪.

ಸತ್ವಂ-ನ-೧-ಭೂತವು, ಪ್ರಾಣ, ಉದ್ಯೋಗ, ಜಂತು,

ಕ್ಲೀಬಂ-ನ-೧-ನಪುಂಸಕ, ಹೇಡಿಗೆ ಹೆಸರಾದಾಗ, ತ್ರಿ.

ವಾಂತವರ್ಗಃ-ವಕಾರಾಂತ ನಾನಾರ್ಥಕಪದ ಸಮೂಹವು, ಇತಿ-ಈವರೆ ಮುಗಿದುದು.

ವಿಟ್-ಶ್-ಪು-೧-ವೈಶ್ಯನು,ಮನುಷ್ಯನು,೨.

ಸ್ಪಶಃ-ಪು-೧-ದೂತನು, ಯುದ್ಧ,ಹೋರುವವನು, ೩.

ರಾಶಿಃ-ಪು-೧-ಗುಡ್ಡೆ,ಮೇಷಾದಿ ರಾಶಿ,೨

ವಂಶಃ-ಪು-೧-ಕುಲ, ಬಿದುರು, ೨.

ರಹಃಪ್ರಕಾಶೌವೀಕಾಶೌ

ನಿರ್ವೇಶೋಭೃತಿಭೋಗಯೋಃ।
ಕೃತಾಂತೇಪುಂಸಿಕೀನಾಶಃಕ್ಷು
ದ್ರಕರ್ಷಕಯೋಸ್ತ್ರಿಷು ॥
ಪದೇಲಕ್ಷ್ಯೇನಿಮಿತ್ತೇಽಪದೇಶ

ಸ್ಸ್ಯಾತ್ಕುಶಮಪ್ಸುಚ ।
ದಶಾವಸ್ಥಾನೇಕವಿಧಾಪ್ಯಾ

ಶಾತೃಷ್ಣಾಪಿಚಾಯತಾ ॥
ವಶಾಸ್ತ್ರೀಕರಿಣೀವಂಧ್ಯಾ

ದೃಗ್ಜ್ಞಾನೇಜ್ಞಾತರಿತ್ರಿಷು ।

ಸ್ಸ್ಯಾತ್ಕರ್ಕಶಸ್ಸಾಹಸಿಕಃ ಕ
ಠೋರಮಸೃಣಾವಪಿ ॥
ಪ್ರಕಾಶೋಽತಿಪ್ರಸಿದ್ಧೇಪಿ

ಶಿಶಾವಜ್ಞೇಪಿಬಾಲಿಶಃ ।

ಕೋಶೋಸ್ತ್ರೀಕುಟ್ಮಲೇಖಡ್ಗ
ಪಿಧಾನೇರ್ಥೌಘದಿವ್ಯಯೋಃ॥
* ಇತಿಶಾಂತವರ್ಗಃ. *
—:*:—

ಸುರಮತ್ಸ್ಯಾವನಿಮಿಷಾ
ಪುರುಷಾವಾತ್ಮಮಾನವೌ ।

ಕಾಕಮತ್ಸ್ಯಾತ್ಪಗೌಧ್ವಾಂ
ಕ್ಷೌ

ವೀಕಾಶಃ-ಪು-೧-ಏಕಾಂತಸ್ಥಳ, ಸ್ಫುಟ
ವಾದ್ದು, ೨.

ನಿರ್ವೇಶಃ-ಪು-೧-ಕೂಲಿ, ಭೋಗ, ೨.

ಕೀನಾಶಃ-ಪು-೧-ಯಮನು, ದರಿದ್ರನು,
ಕರ್ಷಕನು, ತ್ರಿ-೩.

ಅಪದೇಶಃ-ಪು-೧-ಸ್ಥಾನ, ಗುರಿ, ನೆವ,
ನಿಮಿತ್ತ, ಪ್ರಸಿದ್ಧಿ, ೫.

ಕುಶಂ-ನ-೧-ನೀರು, ದರ್ಭೆ, ೨.

ದಶಾ-ಸ್ತ್ರೀ-೧-ನಾನಾಬಗೆಅವಸ್ಥೆಗಳು,
ಬತ್ತಿ, ಬದ್ದಿಗೆ.

ಆಶಾ-ಸ್ತ್ರೀ-೧-ಬಹಳ ಇಚ್ಛೆ,ದಿಕ್ಕು,೨.

ವಶಾ-ಸ್ತ್ರೀ-ಹೆಂಣು, ಹೆಣ್ಣಾನೆ, ಬಂಜೆ
ಹಸು,೩.

ದೃಕ್-ಶ್-ಸ್ತ್ರೀ-೧-ಜ್ಞಾನ, ತಿಳಿದವನಿಗೆ
ಹೆಸರಾದಾಗ, ಪು.

ಕರ್ಕಶಃ-ತ್ರಿ-೧-ಸಾಹಸಗಾರ, ಗಟ್ಟಿ,
ವ್ಯಾಪ್ತ.

ಪ್ರಕಾಶಃ-ತ್ರಿ-ಬಹಳ ಪ್ರಸಿದ್ಧವಾದ್ದು,
ಬೆಳಕು, ೨.

ಬಾಲಿಶಃ-ತ್ರಿ-೧-ಹುಡುಗ, ಮೂಢನು,
ಮೂರ್ಖನು, ೩.

ಕೋಶಃ-ಪು-೧-ಮೊಗ್ಗೆ,ಕತ್ತಿಯುಪರೆ,ಬ
ಕ್ಕಸಗುಂಪು, ಪ್ರಮಾಣಮಾಡಿಸುವಿಕೆ,೫.

ಶಾಂತವರ್ಗಃ-ಶಕಾರಾಂತ ನಾನಾರ್ಥಕ
ಪದಗಳಸಮೂಹವು, ಇತಿ-ಈಮೇರೆ ಮು
ಗಿದುದು.

ಅನಿಮಿಷಃ-ಪು-೧-ದೇವತೆ, ಮೀನು,೨.

ಪುರುಷಃ-ಪು-೧-ಆತ್ಮನು, ಮನುಷ್ಯ
ನು, ೨.

ಧ್ವಾಂಕ್ಷಃ- ಪು-೧-ಕಾಗೆ, ಮೀನು ತಿಂ
ನುವ ಹಕ್ಕಿ, ೨.

ಕಕ್ಷೌ ಚತೃಣವೀರುಧೌ ॥

ಅಭೀಷುಃ ಪ್ರಗ್ರಹೇ ರಶ್ಮೌ
ಪ್ರೈಷಃ ಪ್ರೇಷಣಮರ್ದನೇ

ಪಕ್ಷಸ್ಸಹಾಯೇಪ್ಯು

ಷ್ಣೀಷಶ್ಶಿರೋವೇಷ್ಟ ಕಿರೀಟಯೋಃ।
ಶುಕ್ಲಕೇಮೂಷಿಕೇಶ್ರೇಷ್ಠೇ ಸುಕೃತೇವೃಷಭೇವೃಷಃ।

ದ್ಯೂತೇಕ್ಷೇಶಾರಿಫಲಕೇಪ್ಯಾಕರ್ಷೋ
ಥಾಕ್ಷಮಿಂದ್ರಿಯೇ ॥೩೭೬॥
ನಾದ್ಯೂತಾಂಗೇಕರ್ಷಚಕ್ರೇ ವ್ಯವಹಾರೇಕಲಿದ್ರುಮೇ।

ಕರ್ಷೂ ರ್ದ್ವಾರ್ತ್ತಾ ಕರೀಷಾಗ್ನಿಃ ಕರ್ಷೂಃ ಕುಲ್ಯಾಭಿಧಾಯಿನೀ ॥

ಪುಂಭಾವೇತತ್ಕ್ರಿಯಾಯಾಂಚ ಪೌರುಷಂ

ವಿಷಮಪ್ಸುಚ।
ಉಪದಾನೇಪ್ಯಾಮಿಷಂ ಸ್ಯಾದಪರಾಧೇಪಿಕಿಲ್ಬಿಷಂ॥

ಸ್ಯಾದ್ವೃಷ್ಟೌ ಲೋಕಧಾತ್ವಂಶೇ ವತ್ಸರೇ ವರ್ಷಮಸ್ತ್ರಿಯಾಂ।
ಪ್ರೇಕ್ಷಾನೃತ್ಯೇಕ್ಷಣಪ್ರಜ್ಞಾ

ಕಕ್ಷಃ-ಪ್ರು-೧-ಹುಲ್ಲು, ಬಳ್ಳಿಗಳ ಹೊದೆ, ಕಂಕಳು, ಒಣಗಿದಕಾಡು,

ಅಭೀಷುಃ-ಪ್ರು-೧-ಹಗ್ಗ, ಕಿರಣ, ೨.

ಪ್ರೈಷಃ-ಪ್ರು-೧- ಕಳುಹಿಸುವಿಕೆ, ಪೀಡಿಸುವಿಕೆ, ೨.

ಪಕ್ಷಃ-ಪ್ರು-೧-ಸಹಾಯ,ಶುಕ್ಲಾದಿ ಪಕ್ಷ, ರೆಕ್ಕೆ, ಕಕ್ಕೆ, ೪.

ಉಷ್ಣೀಷಃ-ಪ್ರು-೧-ತಲೆವಸಗು, ಕಿರೀಟ, ಮುಂಡಾಸು, ೩.

ವೃಷಃ-ಪ್ರು-೧-ವೀರ್ಯವೃದ್ಧಿಯುಳ್ಳವನು, ಇಲಿ, ಶ್ರೇಷ್ಠನು, ಪುಣ್ಯ, ಎತ್ತು, ನಂದೀಶ್ವರ, ಅಡ್ಡಸರದಗಿಡ, ೭.

ಆಕರ್ಷಃ-ಪ್ರು-೧- ಜೂಜು, ಪಾಚಿಕೆಗಳೆತ್ತ, ಜೂಜಾಡುವಹಲಿಗೆ,ಎಳೆಕೊಳ್ಳುವಿಕೆ, ೪.

ಅಕ್ಷಂ-ನ-೧-ಇಂದ್ರಿಯವು ಪಗಡೆಯಲೆತ್ತಕ್ಕೂ, ೮೦ ಗುಲಗಂಜೀ ತೂಕಕ್ಕೂ, ಬಂಡೀಕಂಬಿಗೂ, ವ್ಯವಹಾರಕ್ಕೂ, ತಾರೇಸುರಕ್ಕೂ ಹೆಸರಾದಾಗ ಪು-೬.

ಕರ್ಷೂಃ-ಊ-ಸ್ತ್ರೀ-೧-ಕೃಷಿ, ಬೆರಣಿಯ ಬೆಂಕಿಗೆ ಹೆಸರಾದಾಗ, ಪ್ರು-ಕುಲ್ಯಾನದಿಗೆ ಹೆಸರಾದಾಗ, ಸ್ತ್ರೀ- ೩.

ಪೌರುಷಂ-ನ-೧-ಗಂಡುಸುತನ, ಗಂಡುಕೆಲಸ, ಆಳೋಚ್ಛ್ರಯುದ್ದದ ಅಳತೆಗೂ ಹೆಸರು, ೩.

ವಿಷಂ-ನ-೧-ನೀರು, ನಂಜು, ೨.

ಆಮಿಷಂ-ನ-೧-ಕಾಣಿಕೆ,ಮಾಂಸ, ೨.

ಕಿಲ್ಬಿಷಂ -ನ -೧-ತಪ್ಪು ಮಾಡುವಿಕೆ, ಪಾಪ, ೨.

ವರ್ಷಂ-ನ-೧-ಮಳೆ, ಭೂಖಂಡ, ಸಂವತ್ಸರ, ೩.

ಪ್ರೇಕ್ಷಾ-ಸ್ತ್ರೀ-೧-ನಾಟ್ಯ, ನೋಟ,

ಕುಶಲಬುದ್ಧಿ, ನಾಟ್ಯದೊಳಗೆಭಾವಾನುಸಾರವಾಗಿ ನೋಡುವಿಕೆ, ೪.

ಭಿಕ್ಷಾಸೇವಾರ್ಥನಾಭೃತಿಃ॥
ತ್ವಿಟ್ತ್ವಿಷೌಭಾಪಿ
(ತ್ವಿಷುಪರೆ)

ಭಿಕ್ಷಾ-ಸ್ತ್ರೀ-೧-ಸೇವೆ,ಬೇಡುವಿಕೆ,ಕೂಲಿ,೩
ತ್ವಿಟ-ಷ-ಸ್ತ್ರೀ-೧-ಕಾಂತಿ, ಕಿರಣ, ೨.

ಮುಂದೆ ಷಾಂತಗಳು ಮುಗಿಯುವವರಿಗೂ ಹೇಳಲ್ಪಡುವ ನಾನಾರ್ಥಕಪದಗಳು, ತ್ರಿಲಿಂಗಗಳು.

ನ್ಯಕ್ಷಂಕಾತ್ಸ್ನ್ಯೇನಿಕೃಷ್ಟಯೋಃ।
ಪ್ರತ್ಯಕ್ಷೇಧಿಕೃತೇಧ್ಯಕ್ಷೋ

ನ್ಯಕ್ಷಂ-ತ್ರಿ-೧-ಎಲ್ಲವೂಎಂಬಅರ್ಥ,ಕೀಳಾದದ್ದು, ೨.

ಅಧ್ಯಕ್ಷಃ-ತ್ರಿ-೧- ಸಾಕ್ಷಾತ್ತಾಗಿತಿಳಿಯಲ್ಪಟ್ಟದ್ದು, ಗ್ರಾಮಾಧಿಕಾರಿಮುಂತಾದಮುಖಂಡನಿಗೂಹೆಸರು, ೨.

ರೂಕ್ಷಸ್ತ್ವಪ್ರೇಮ್ಣ್ಯಚಿಕ್ಕಣೇ ॥೩೮೦॥
ಇತಿಷಾಂತವರ್ಗಃ

ರೂಕ್ಷಃ-ತ್ರಿ-೧-ಪ್ರೇಮವಿಲ್ಲದವನು, ಕಠಿನ, ೨.

ಷಾಂತವರ್ಗಃ- ಷಕಾರಾಂತ ನಾನಾರ್ಥಕಪದಗಳಸಮೂಹವು, ಇತಿ, ಈವರೆ ಮುಗಿದುದು.

—*—

ರವಿಶ್ವೇತಚ್ಛದೌಹಂಸೌ

ಹಂಸಃ-ಪು-೧-ಸೂರ್ಯ, ಅಂಚೆಹಕ್ಕಿ, ಲೋಭವಿಲ್ಲದಅರಸು, ಜ್ಞಾನಾಧಿಕನಾದವಿರಕ್ತನು, ಶ್ರೇಷ್ಠನಾದವನು, ಪರಮಾತ್ಮ, ಜೀವಾತ್ಮ, ಯೋಗಿ, ೮.

ಸೂರ್ಯವಹ್ನೀವಿಭಾವಸೂ।
ವತ್ಸೌತರ್ಣಕವರ್ಷೌದ್ವಾ
ಸಾರಂಗಾಶ್ಚದಿವೌಕಸಃ।

ವಿಭಾವಸುಃ-ಪು-೧-ಸೂರ್ಯ, ಅಗ್ನಿ, ೨.
ವತ್ಸಃ-ಪು-೧-ಕರುವು, ಸಂವತ್ಸರ, ೨.
ದಿವೌಕಾಃ-ಸ-ಪು-೧- ಚಕ್ಕಪಕ್ಕಿ, ದೇವತೆ, ೨.

ಶೃಂಗಾರಾದೌವಿಷೇವೀರ್ಯೆಗುಣೇರಾಗೆದ್ರವೇರಸಃ।

ರಸಃ-ಪು-೧-ಶೃಂಗಾರಾದಿರಸಗಳು, ನಂಜು, ವೀರತ್ವ,ಸುಗುಣ, ಅಭಿಲಾಷೆ,ತಾತ್ಸ್ವವ, ನೀರು, ನೀರಡಾಗೆಯಿರುವದು, ಪಾದರಸ, ರುಚಿ, ಪರಮಾತ್ಮನು, ೧೧.

ಪುಂಸ್ಯುತ್ತಂಸಾವತಂಸೌವಾ
ಕರ್ಣಪೂರೇಪಿಶೇಖರೇ॥೩೮೨॥

ಉತ್ತಂಸಃ-ಅವತಂಸಃ-ಪು-೨-ಕರ್ಣಭೂಷಣ, ಶಿರೋಭೂಷಣವಾದ ಪಾಗು

| | |
|---|---|
| | ಮುಂತಾದ್ದು, ೧. |
| ದೇವಭೇದೇನಲೇರಶ್ಮೌವಸೂರ ತ್ನೇಧನೇವಸು। | ವಸುಃ-ಪು-೧-ವಸುದೇವತೆಗಳು,ಅಗ್ನಿ, ಕಿರಣ, ೩, ರತ್ನಕ್ಕೂ, ಧನಕ್ಕೂ ಹೆಸರಾದಾಗ, ನ-೨. |
| ವಿಷ್ಣೌಚವೇಧಾಃ | ವೇಧಾಃ-ಸ-ಪು-೧-ವಿಷ್ಣು, ಬ್ರಹ್ಮ, ವಿದ್ವಾಂಸನು, ೩. |
| ಸ್ತ್ರೀತ್ವಾಶೀರ್ಹಿತಾಶಂಸಾಹಿ ದಂಷ್ಟ್ರಯೋಃ ॥೨೪೩॥ | ಆಶೀಃ-ಷ-ಸ್ತ್ರೀ-೧- ಹಿತವಾಗಲೆಂಬಹಾರೈಕೆ, ಹಾವಿನಕೋರೇದಾಡೆ, ಆಶೀರ್ವಾದದಮಂತ್ರಗಳು, ೩. |
| ಲಾಲಸೇಪ್ರಾರ್ಥನೌತ್ಸುಕ್ಯೆ | ಲಾಲಸಂ-ಪ್ನ-೧-ಪ್ರಾರ್ಥನೆ, ಇಷ್ಟಪ್ರಾಪ್ತಿಯೊಳು ತ್ವರೆಯೊಡಗೂಡಿದಆಶೆ, ವಿಷಯಾಸಕ್ತಿಯುಳ್ಳದ್ದು, ತ್ರಿ. |
| ಹಿಂಸಾಚೌರ್ಯಾದಿಕರ್ಮಚ। | ಹಿಂಸಾ-ಸ್ತ್ರೀ-೧-ಕೊಲೆ ಮುಂತಾದ್ದು, ಬೊಯಿಲು. |
| ಪ್ರಸೂರಶ್ವಾಪಿ | ಪ್ರಸೂಃ- ಸ್ತ್ರೀ-೧-ಹೆಣ್ಣುಕುದುರೆ, ತಾಯಿ, ೧. |
| ಭೂದ್ಯಾವೌರೋದಸ್ಯೌ | ರೋದಸೀ-ಸ್ತ್ರೀ-೧- ಆಕಾಶ, ಭೂಮಿ, ೧ಕ್ಕೂ ೧, ಹೆಸರು. |
| ರೋದಸೀಚತೇ। | ರೋದಃ-ಸ-ನ-೧-ಭೂಮಿ, ಆಕಾಶ,೧. |
| ಜ್ವಾಲಾಭಾಸೋರ್ನಪುಂಸ್ಯರ್ಚಿ | ಆರ್ಚಿಃ-ಸ್ನ-೧-ಉರಿ, ಬೆಳಕು, ೧. |
| ಜ್ಯೋತಿರ್ಭದ್ಯೋತ ದೃಷ್ಟಿಷು। | ಜ್ಯೋತಿಃ-ಸ-ನ-೧-ನಕ್ಷತ್ರ, ತೇಜಸ್ಸು, ದೃಷ್ಟಿ, ಸೂರ್ಯ, ಚಂದ್ರ, ಅಗ್ನಿ,ಜ್ಞಾನ,ಆತ್ಮ, ೮. |
| ಪಾಪಾಪರಾಧಯೋರಾಗಃ | ಅಗಃ-ಸ-ನ-೧-ಪಾಪವು, ಅಪರಾಧ,೧. |
| ಖಗಬಾಲ್ಯಾದಿನೋರ್ವಯಃ। | ವಯಃ-ಸ-ನ-೧-ಬಾಲ್ಯ ಮುಂತಾದ ವಯಸ್ಸು, ಹಕ್ಕಿ, ೧. |
| ತೇಜಃಪುರೀಷಯೋರ್ವರ್ಚೋ | ವರ್ಚಃ-ಸ-ನ-೧-ತೇಜಸ್ಸು,ಅಮೇಧ್ಯ,೧. |
| ಮಹಸ್ತೂತ್ಸವತೇಜಸೋಃ। | ಮಹಃ-ಸ-ನ-೧-ಹಬ್ಬ, ತೇಜಸ್ಸು, ೧. |
| ರಜೋಗುಣೇಪಿಸ್ತ್ರೀಪುಷ್ಪೆ | ರಜಃ-ಸ-ನ-೧-ರಜೋಗುಣ, ಹೆಂಗಳ ಹೊಲೆ, ಧೂಳು, ೩. |
| ರಾಹೌಧ್ವಾಂತೇಗುಣೇತಮಃ। | ತಮಃ-ಸ-ನ-೧-... ಕತ್ತಲೆ, ಅಜ್ಞಾನ, ೩. |

ಛಂದಃಪದ್ಯೇಭಿಲಾಷೇಚ
ತಪಃಕೃಚ್ಛ್ರಾದಿಕರ್ಮಚ।
ಸಹೋಬಲಂಸಹಾ ಮಾರ್ಗೋ
ನಭಃಖಂಶ್ರಾವಣೋನಭಾಃ॥
ಓಕಸ್ಸದ್ಮಾ ಶ್ರಯಶ್ಚೌಕಃ
ಪಯಃಕ್ಷೀರಂಪಯೋಂಬುಚ
ಓಜೋದೀಪ್ತೌಬಲೇ
ಸ್ರೋತಇಂದ್ರಿಯೇ ನಿಮ್ನಗಾ
ರಯೇ ॥೩೯೮
ತೇಜಃಪ್ರಭಾವೇ ದೀಪ್ತೌಚಬ
ಲೇಶುಕ್ರೇಪ್ಯ
(ಥತ್ರಿಷು।)
ವಿದ್ವಾನ್ವಿದಂಶ್ಚ
ಬೀಭತ್ಸೋಹಿಂಸ್ರೋಪ್ಯ
ತಿಶಯೇತ್ವಮೀ ॥೩೯೯॥
ವೃದ್ಧ ಪ್ರಶ ಸ್ಯಯೋರ್ಜ್ಯಾ
ಯಾನ್
ಕನೀಯಾಂಸ್ತು ಯುವಾ
ಲ್ಪಯೋಃ।
ವರೀಯಾಂಸ್ತೂರುವರಯೋ

ಛಂದಃ- ಸ-ನ-೧- ಉಕ್ತಾತ್ಯುಕ್ತಾ ಮಧ್ಯಾಪ್ರತಿಷ್ಠಾ ಗಾಯತ್ರ್ಯಾದಿ ಛಂದಸ್ಸುಗಳು, ಅಭಿಪ್ರಾಯ, ವೇದ, ಪ್ರು, ೩.

ತಪಃ-ಸ-ನ-೧-ವ್ರತ, ಧರ್ಮ, ಮಾಘಮಾಸ, ಪ್ರು, ೩.

ಸಹಃ- ಸ-ನ-೧-ಬಲ, ಮಾರ್ಗಶಿರಮಾಸ, ಪ್ರು,೨.

ನಭಃ-ಸ-ನ-೧- ಆಕಾಶ, ಶ್ರಾವಣಮಾಸ, ಪ್ರು,೨.

ಓಕಃ-ಸ-೧-ಮನೆ, ಸ್ಥಳ, ವೇಗ,೩.

ಪಯಃ-ಸ-ನ-೧-ಹಾಲು, ನೀರು, ೨.

ಓಜಃ-ಸ-ನ-೧-ತೇಜಸ್ಸು, ಬಲ, ೨.

ಸ್ರೋತಃ- ಸ-ನ-೧- ಇಂದ್ರಿಯಗಳು, ಹೊಳೆಯವೇಗ.

ತೇಜಃ-ಸ-ನ-೧-ಪ್ರಭಾವ, ಕಾಂತಿ, ಬಲ, ರೇತಸ್ಸು ೪.

ಇದುಮೊದಲು ಸಾಂತಗಳು ಮುಗಿಯುವವರಿಗೂ, ತ್ರಿ, ಸ್ತ್ರೀಲಿಂಗದಲ್ಲಿ ಬೀಭತ್ಸಶಬ್ದಹೊರ್ತು ಮಿಕ್ಕಾದ್ದು, ಈಕಾರಾಂತ.

ವಿದ್ವಾನ್-ಸ- ಸ್ತ್ರೀ-೧-ಶಾಸ್ತ್ರಜ್ಞಾನಿ, ಬ್ರಹ್ಮಜ್ಞಾನಿ.

ಬೀಭತ್ಸಃ-ತ್ರಿ-೧- ಕೊಲ್ಲುವವನು, ಅರ್ಜುನನು, ೨.

ಮುಂದೆ ನಾಲ್ಕುಶಬ್ದಗಳು ಸ್ವಾರ್ಥಾತಿಶಯವಾಚಕಗಳು.

ಜ್ಯಾಯಾನ್-ಸ-ತ್ರಿ-೧-ಬಹಳಮುದಕ, ಬಹಳಶ್ರೇಷ್ಠ.

ಕನೀಯಾನ್-ಸ-ತ್ರಿ-೧-ಬಹಳಪ್ರಾಯದವ, ಅತ್ಯಲ್ಪ.

ವರೀಯಾನ್-ಸ-ತ್ರಿ-೧- ಬಹಳಘನ, ಬಹಳಶ್ರೇಷ್ಠ

| | |
|---|---|
| ಸಾಧೀಯಾನ್ಸಾಧುಬಾಢ ಯೋಃ ॥೩೯೦॥ | ಸಾಧೀಯಾನ್-ಸ-ತ್ರಿ-೧-ಬಹಳ ಪಳ್ಳೇದು, ಬಹಳ ದೃಢ. |
| ✻ಇತಿ ಸಾಂತವರ್ಗಃ.✻ | ಸಾಂತವರ್ಗಃ--ಸಕಾರಾಂತ ನಾನಾರ್ಥಕಪದಗಳ ಸಮೂಹವು, ಇತಿ--ಈಮೇರೆ ಮುಗಿದುದು. |
| —✻— | |
| ದಳೇಪಿಬರ್ಹಂ | ಬರ್ಹಂ-ನ-೧-ಎಲೆ, ನವಿಲು, ಬಾಲ,೩. |
| ನಿರ್ಬಂಧೋಪರಾಗಾರ್ಕಾದಯೋಗ್ರಹಾಃ। | ಗ್ರಹಃ-ಪು-೧- ನಿರ್ಬಂಧ, ರಾಹುಕೇತುಗ್ರಹಣ, ಸೂರ್ಯಾದಿಗ್ರಹಗಳು, ವೈಷಯಿಕ ಜ್ಞಾನ, ೪. |
| ದ್ವಾರ್ಯಾಪೀಡೇ ಕಾಥರಸೇನಿರ್ವ್ಯೂಹೋನಾಗದಂತಕೇ | ನಿರ್ವ್ಯೂಹಃ-ಪು-೧-ಬಾಗಿಲು,ಮಂಡೆಯೊಳುಮುಡಿದಪೂಸರ,ಕಷಾಯ,ಗಜದಂತ,೪. |
| ತುಲಾಸೂತ್ರೇ ಶ್ವಾದಿರಶ್ಮೌ ಪ್ರಗ್ರಾಹಃಪ್ರಗ್ರಹೋಪಿಚ । | ಪ್ರಗ್ರಾಹಃ-ಪ್ರಗ್ರಹಃ-ಪು-೨- ತ್ರಾಸಿನ ದಾರ, ಕುದುರೆಮುಂತಾದವುಗಳನ್ನು ಕಟ್ಟುವ ಹಗ್ಗ, ೨. |
| ಪತ್ನೀಪರಿಜನಾದಾನ ಮೂಲಶಾಪಾಃಪರಿಗ್ರಹಾಃ ॥೩೯೨॥ | ಪರಿಗ್ರಹಃ-ಪು-೧-ಹೆಂಡತಿ, ಪರಿವಾರ,ತೆಗೆದುಕೊಳ್ಳುವಿಕೆ,ಮೊದಲು, ಬೊಯಿಲು, ಶಾಪ, ೬. |
| ದಾರೇಷ್ವಪಿಗೃಹಾಃ | ಗೃಹಾಃ-ಪು-ನಿತ್ಯ-ಬ-೧-ಹೆಂಡತಿ,ಮನೆ,೦. |
| ಶ್ರೋಣ್ಯಾ ಮಪ್ಯಾರೋಹೋ ವರಸ್ತ್ರಿಯಾಃ । | ಆರೋಹಃ-ಪು-೧-ಸ್ತ್ರೀನಿತಂಬಸ್ಥಳ,ಆನೇಮಾವಟಿಗ, ೨. |
| ವ್ಯೂಹೋಬೃಂದೇಪ್ಯ | ವ್ಯೂಹಃ-ಪು-೧-ಗುಂಪು,ಸೇನಾವಿನ್ಯಾಸ,೨. |
| ಹಿರ್ವೃತ್ರೇಪ್ಯ | ಅಹಿಃ-ಪು-೧-ವೃತ್ರಾಸುರ, ಹಾವು, ೨. |
| ಗ್ನೀಂದ್ವರ್ಕಾಸ್ತಮೋಪಹಾಃ॥ | ತಮೋಪಹಃ-ಪು-೧-ಅಗ್ನಿ,ಇಂದ್ರ,ಚಂದ್ರ, ಸೂರ್ಯ, ೪. |
| ಪರಿಚ್ಛದೇನೃಪಾರ್ಹಾರ್ಥೇಪರಿಬರ್ಹೇ | ಪರಿಬರ್ಹಃ- ಪು-೧- ಪರಿವಾರ, ರಾಜಯೋಗ್ಯ, ಬಿರುದು, ೩. |
| ಇತಿ ಹಾಂತವರ್ಗಃ. | ಹಾಂತವರ್ಗಃ- ಹಕಾರಾಂತನಾನಾರ್ಥಕಪದಗಳ ಸಮೂಹವು, ಇತಿ--ಈಮೇರೆ ಮುಗಿದುದು. |
| —✻— | |
| (ವ್ಯಯಾಃಪರೆ) | ಮುಂದಲಿಂಗಾದಿ ಸಂಗ್ರಹವರ್ಗಪ್ರಾರಂಭ [illegible] ಅವ್ಯಯಗಳ ಅರ್ಥಗ |

ಳೀ ಹೇಳಲ್ಪಡುತ್ತವೆ.

*ಇತಿ ನಾನಾರ್ಥವರ್ಗಃ.*

—ಃಂಃ—

ನಾನಾರ್ಥವರ್ಗಃ-ಅನೇಕಾರ್ಥಗಳುಳ್ಳ ಪದಗಳ ಸಮೂಹವು, ಇತಿ-ಈವರೆ ಮು ಗಿದುದು.

ಆಜೀಷದರ್ಥೆಭಿವ್ಯಾಪ್ತೌ ಸೀ ಮಾರ್ಥೆ ಧಾತುಯೋಗಜೇ ॥

ಆಙ್-೧-ಕೊಂಚ, ಈ ಕೆಲಸ ಇದು ಪರಿ ಗೂ ಎಂಬ ಹದ್ದು, ಇದರೊಂದಿಗೆ, ಕ್ರಿಯಾ ರ್ಥದ್ಯೋತಕತ್ವ, ೪.

ಆಪ್ರಗೃಹ್ಯಃ ಸ್ಮೃತೌ ವಾಕ್ಯೇ

ಆ-೧-ನೆನಹು, ವಾಕ್ಯಪೂರಣ,-೨-ಈ ಅವ್ಯಯವು ಸಂಧಿಯಲ್ಲಿ ಪ್ರಕೃತಿಭಾವವು-

ಪ್ಯಾಸ್ತು ಸ್ಯಾತ್ಕೋಪಪೀಡಯೋಃ

ಆಃ-೧-ಕೋಪ, ಪೀಡೆ, ೨.

ಪಾಪಕುತ್ಸೇಷದರ್ಥೇ ಕು

ಕು-೧-ಪಾಪವು, ನಿಂದೆ, ಕೊಂಚ, ೩.

ಧಿಙ್ನಿರ್ಭರ್ತ್ಸನನಿಂದಯೋಃ

ಧಿಕ್-೧-ಬೆದರಿಸುವಿಕೆ, ನಿಂದಿಸುವಿಕೆ,೨.

ಚಾನ್ವಾಚಯಸಮಾಹಾರೇತ ರೇತರಸಮುಚ್ಚಯೇ ।

ಚ-೧-ಎರಡರೊಳಗೊಂದರನ್ನು ಮು ಖ್ಯವಾಗಿ ಹೇಳುವ ಅನ್ವಾಚಯದಲ್ಲಿಯೂ, ಅವಯವತಾರತಮ್ಯವಿಲ್ಲದೆ ಸಮುದಾಯ ವೇ ಮುಖ್ಯವೆಂಬ ಸಮಾಹಾರದಲ್ಲಿಯೂ,ಪ ರಸ್ಪರಸಾಪೇಕ್ಷಗಳಾದ ಪದಗಳನ್ನು ಏಕ ಕ್ರಿಯಾನ್ವಯಕ್ಕೆ ತರುವ ಇತರೇತರಯೋ ಗದಲ್ಲಿಯೂ,ಪರಸ್ಪರನಿರಪೇಕ್ಷಗಳಾದಪದ ಗಳಿಗೆ, ಏಕಕ್ರಿಯಾನ್ವಯಿತ್ವವನ್ನು ಹೇಳು ವ ಸಮುಚ್ಚಯದಲ್ಲಿಯೂ ವರ್ತಿಸುವದು,೪.

ಸ್ವಸ್ತ್ಯಾಶೀಃಕ್ಷೇಮಪುಣ್ಯಾದೌ

ಸ್ವಸ್ತಿ-೧-ಆಶೀರ್ವಾದ, ಕ್ಷೇಮ,ಧರ್ಮ, ಶುಭ, ೪.

ಪ್ರಕರ್ಷೇಲಂಘನೇಪ್ಯತಿ ॥

ಅತಿ-೧-ಹೆಚ್ಚುಗೆ,ಹಾರುವಿಕೆ,ಪೂಜೆ,೩.

ಸ್ವಿತ್ಪ್ರಶ್ನೇ ಚ ವಿತರ್ಕೇ ಚ

ಸ್ವಿತ-೧-ಪ್ರಶ್ನೆ, ಊಹೆ, ೨.

ತುಸ್ಯಾದ್ಭೇದೇವಧಾರಣೇ ।

ತು-೧-ಭೇದ, ನಿಶ್ಚಯ ೨.

ಸಕೃತ್ಸಹೈಕವಾರೇಸ್ಯಾ

ಸಕೃತ-೧-ಸಂಗಡ, ಒಂದುಸಾರಿ, ೨.

ದಾರಾದ್ದೂರಸಮೀಪಯೋಃ ।

ಆರಾತ-೧-ದೂರ, ಹತ್ತಿರ, ೨.

ಪ್ರತೀಚ್ಯಾಂ ಚರಮೇ ಪಶ್ಚಾ

ಪಶ್ಚಾತ-೧-ಪಡುವಲಲ್ಲಿ, ಹಿಂದುಗಡೆ,೨

ದುತಾಪ್ಯರ್ಥ ವಿಕಲ್ಪಯೋಃ ।

ಉತ-೧-ಉನ್ನೂ,ಸಂಶಯ,ವಿಕಲ್ಪ,೩.

ಪುನಸ್ಸಹಾರ್ಥಯೋಶ್ಶಶ್ವ

ಶಶ್ವತ-೧-ಪುನಃಪುನಃ ಆಗಲೂ, ಬಾ

ತ್ಸಾಕ್ಷಾತ್ಪ್ರತ್ಯಕ್ಷ ತುಲ್ಯ
ಯೋಃ ॥೨೪೮॥
ಖೇದಾನುಕಂಪಾ ಸಂತೋಷ
ವಿಸ್ಮಯಾಮಂತ್ರಣೇಬತ।
ಹಂತಹರ್ಷೇನುಕಂಪಾಯಾಂ
ವಾಕ್ಯಾರಂಭವಿಷಾದಯೋಃ ॥
ಪ್ರತಿಪ್ರತಿನಿಧೌವೀಪ್ಸಾಲಕ್ಷ
ಣಾದೌಪ್ರಯೋಗತಃ।

ಇತಿಹೇತುಪ್ರಕರಣ ಪ್ರಕಾ
ಶಾದಿಸಮಾಪ್ತಿಷು ॥೨೦೦॥
ಪ್ರಾಚ್ಯಾಂಪುರಸ್ತಾತ್ಪ್ರಥಮೇ
ಪುರಾರ್ಥೇಗ್ರತ ಇತ್ಯಪಿ ।

ಯಾವತ್ತಾವಚ್ಚ ಸಾಕಲ್ಯೇವ
ಧೌಮಾನೇವಧಾರಣೇ॥
ಮಂಗಳಾನಂತರಾರಂಭಪ್ರ
ಶ್ನಕಾರ್ತ್ಸ್ನ್ಯೇಷ್ವಥೋಅಥ।
ವೃಥಾನಿರರ್ಥಕಾವಿಧ್ಯೋ
ರ್ನಾನಾನೇಕೋಭಯಾರ್ಥಯೋಃ॥
ನುಪೃಚ್ಛಾಯಾಂ ವಿಕಲ್ಪೇಚ
ಪಶ್ಚಾತ್ಸಾದೃಶ್ಯಯೋರನು।

ಪ್ರಶ್ನಾವಧಾರಣಾನುಜ್ಞಾನು
ನಯಾಮಂತ್ರಣೇನನು ॥

ಗರ್ಹಾಸಮುಚ್ಚಯ ಪ್ರಶ್ನ
ಶಂಕಾಸಂಭಾವನಾಸ್ವಪಿ।

ಉಪಮಾಯಾಂವಿಕಲ್ಪೇವಾ

ರಿಭಾಗಿಗೂ, ೩.
ಸಾಕ್ಷಾತ್-೧-ಪ್ರತ್ಯಕ್ಷವಾಗಿ, ಹೋಲಿ
ಕೆಯಾಗಿ, ೨.
ಬತ-೧-ದುಃಖ, ದಯೆ, ಸಂತೋಷ, ಆ
ಶ್ಚರ್ಯ, ಕರೆಯುವಿಕೆ, ೫.
ಹಂತ-೧-ಹರುಷ, ಕೃಪೆ, ವಾಕ್ಯಾರಂ
ಭ, ದುಃಖ, ೪.
ಪ್ರತಿ-೧-ಸಮಾನವಾಗಿರುವ ಮತ್ತೊಂ
ದು ವ್ಯಾಪಕತ್ವ, ಅಸಾಧಾರಣ ಧರ್ಮ,
ಮೂಬದಲೆ, ಎದುರಿಡಲ್ಪಡುವ, ೫.
ಇತಿ-೧-ಕಾರಣ, ಪ್ರಕರಣ, ಬಗ್ಗೆ, ವ
ಷ್ಟ್ಯವರ್ಣಣ,ಉಕ್ತಿ, ಆದಿಮುಗಿಯುವಿಕೆ,೭
ಪುರಸ್ತಾತ್ -೧- ಮೊದಲು ದೆಸೆಯಲ್ಲಿ,
ಮೊದಲು, ಮುಂಚೆ, ಪೂರ್ವಕಾಲದಲ್ಲಿ,
ಮುಂದೆ, ೫.
ಯಾವತ್-೧-ತಾವತ್-೧-ಈ ೨ ಎಲ್ಲವೂ,
ಪರಿಮಿತಿಗೂ, ಎಷ್ಟುಮಟ್ಟಿಗೂ, ನಿಶ್ಚಯ, ೪.
ಅಥೋ-೧-ಅಥ-೧-ಈ ೨ ಮಂಗಳವು,
ಬಳಿಕ,ಪ್ರಾರಂಭ,ಕೇಳುವಿಕೆ,ಎಲ್ಲವೂ ೫.
ವೃಥಾ-೧-ವ್ಯರ್ಥವಾಗಿ,ಗೊತ್ತಿಲ್ಲದೆ,೨.
ನಾನಾ-೧-ಬಹುವಾಗಿ, ಎರಡು, ೨.
ನು-೧-ಪ್ರಶ್ನೆ, ವಿಕಲ್ಪ,ಪೂರ್ವಪಕ್ಷ,೩.
ಅನು-೧-ಹಿಂದೆ, ಹೋಲಿಕೆ, ಲಕ್ಷಣೆ
ತ್ಥಂ-ಭೂತಾಖ್ಯಾನ ಭಾಗವೀಪ್ಸಾದಿಗಳು.
ನನು-೧-ಪ್ರಶ್ನೆ, ನಿಶ್ಚಯ, ಅಪ್ಪಣೆ,ಸ
ಮಾಧಾನಗೊಳಿಸುವಿಕೆ, ಕರೆಯುವ ಸಂ
ಬೋಧನೆ, ೫.
ಅಪಿ-೧-ನಿಂದೆ, ಅದುನ್ನೂ, ಇತ್ಯಾದಿಸ
ಮುಚ್ಚಯಾರ್ಥ ಪ್ರಶ್ನೆ, ಅನಿಷ್ಟವನ್ನೂಹಿ
ಸುವಿಕೆ, ನಿಶ್ಚಯವಾದ ಊಹೆ,
ವಾ-೧-ಹೋಲಿಕೆ, ಸಂಶಯ,೨.

ಸೌಮಿತ್ರ್ಯರ್ಥೆಜಿಗುಪ್ಸನೇ।
ಅಮಾಸಹಸಮೀಪೇಚ
ಕಂವಾರಿಣಿಚಮೂರ್ಧನಿಚ।
ಇವೇತ್ಥಮರ್ಥಯೋರೇವಂ
ನೂನಂತರ್ಕೇರ್ಥನಿಶ್ಚಯೇ।
ತೂಷ್ಣೀಮರ್ಥೆಸುಖೇಜೋಷಂ
ಕಿಂಪೃಚ್ಛಾಯಾಂಜುಗುಪ್ಸನೇ।
ನಾಮಪ್ರಕಾಶ್ಯ ಸಂಭಾವ್ಯ
ಕ್ರೋಧೋಪಗಮಕುತ್ಸನೇ।
ಅಲಂಭೂಷಣಪರ್ಯಾಪ್ತಿ ಶಕ್ತಿ
ವಾರಣವಾಚಕಂ।
ಹುಂವಿತರ್ಕೆಪರಿಪ್ರಶ್ನೆ
ಸಮಯಾಂತಿಕಮಧ್ಯಯೋಃ
ಪುನರಪ್ರಥಮೇಭೇದೇ
ನಿರ್ನಿಶ್ಚಯನಿಷೇಧಯೋಃ
ಸ್ಯಾತ್ಪ್ರಬಂಧೇ ಚಿರಾತೀತೇನಿ
ಕಟಾಗಾಮಿಕೇಪುರಾ ॥
ಊರರ್ರ್ಯುರೀ ಚೋರರೀಚವಿ
ಸ್ತಾರೇಂಗೀಕೃತೌತ್ರಯಂ।
ಸ್ವರ್ಗೇಚಪರಲೋಕೇಸ್ವ
ವಾರ್ತಾ ಸಂಭಾವ್ಯಯೋಃಕಿಲ॥

ಸೌಮಿ-೧-ಅರೆಪಾಲು, ನಿಂದೆ,೨.
ಅಮಾ-೧-ಒಂದಿಗೆ, ಹತ್ತಿರ, ೨.
ಕಂ-೧-ನೀರು, ತಲೆ, ಸುಖ, ೩.
ಇವಂ-೧-ಹೋಲ್ವಿಕೆ, ಹೀಗೆ,ಈ ಮೇರೆಯಾಗಿ, ೩.
ನೂನಂ-೧-ಸಕಾರಣವಾದಊಹೆ,ಇದು ಹೀಗೆ ಸರಿಯೆಂಬನಿಶ್ಚಯ, ಉತ್ಪ್ರೇಕ್ಷೆ,೩.
ಜೋಷಂ-೧-ಮೌನವಾಗಿ,ಸುಖವಾಗಿ, ಸುಮ್ಮನೆ, ೩.
ಕಿಂ-೧-ಪ್ರಶ್ನೆ,ನಿಂದೆ,-೨-ಯೇನು,ಹ್ಯಾಗೆ,
ನಾಮ -೧- ಪ್ರಕಟಪಡಿಸತಕ್ಕದ್ದಾಗಿ, ಹೀಗಾದೀತು, ಸಿಟ್ಟು, ಅಂಗೀಕಾರ, ಸಿಟ್ಟಿನಿಂದ ಅಂಗೀಕರಿಸುವಿಕೆ, ನಿದ್ದೆ, ೬.
ಅಲಂ-೧-ಅಲಂಕಾರವಾಗಿ, ಸಂಪೂರ್ಣವಾಗಿ, ಸಮರ್ಥ, ಸಾಕು, ನಾಲಿಸು.
ಹುಂ -೧- ಕಾರಣಬಲ ನಾಲದ ಊಹೆ, ಧಾಷ್ಟ್ಯದಿಂದ ಕೇಳ್ವಿಕೆ, ಬೆದರಣೆ, ೩, ವಿದ್ವೇಷಕ್ಕೂ ಪೆಸರು.
ಸಮಯಾ-೧-ಸಮೀಪ-ನಡಿವೆ, ೨.
ಪುನಃ-೧-ಮತ್ತೂ, ಮತ್ತೆಯೂ, ಬೇರೆಯಾಗಿ, ವಿಶೇಷ, ವಾಕ್ಯಾಲಂಕಾರ, ೫.
ನಿಃ-೧-ನಿಶ್ಚಯ,ಬ್ಯಾಡ, ವಲ್ಲೆ, ಸಾಕು, ಬಹಳ, ೫.
ಪುರಾ-೧-ವಾಕ್ಯರಚನೆ, ಕಳೆದಕಾಲ, ಬಹಳ, ಪೂರ್ವಕಾಲ, ಸಮೀಪ, ಮುಂಬರುವ ಆಗಾಮಿ, ೫.
ಊರರೀ-ಉರೀ-ಪಾ-ಊರೀ-ಉರರಿ, ೩ ವಿಸ್ತಾರವಾಗಿ, ಅಂಗೀಕಾರವಾಗಿ, ೨.
ಸ್ವಃ-ಸ್ವರ್-೨-ದೇವಲೋಕ,ಜನ್ಮಾಂತರದಲೋಕ,ಪರಂಧಾಮ,ಸುಖ,ಆಕಾಶ, ೫
ಕಿಲ-೧-ವರ್ತಮಾನ, ಹೀಗಾದೀತೆಂ

ಬಕಯಾಸ್, ಅಸತ್ಯ, ಹೀಗಷ್ಟೆ, ಹೀಗಲ್ಲ ವೇ, ೫.

ನಿಷೇಧವಾಕ್ಯಾ ಲಂಕಾರಜಿ ಜ್ಞಾಸಾನುನಯೇಖಲು ।

ಖಲು-೧-ವಲ್ಲೆ, ಬ್ಯಾಡ, ಕೊಡದು, ಆಗದು, ವಾಕ್ಯಾಲಂಕಾರ, ಹೀಗೆತಾನೆ,ಹ್ಯಾಗೆತಾನೆ, ಹ್ಯಾಗೆ, ಪಡಂಬಡಿಸುವಿಕೆ.

ಸಮೀಪೋಭಯತಃಶೀಘ್ರಸಾ ಕಲ್ಯಾಭಿಮುಖೇಭಿತಃ ॥

ಅಭಿತಃ-೧-ಹತ್ತಿರ, ಎರಡು ಕಡೆಯೂ, ಭ್ಯಾಗ, ಎಲ್ಲಕಡೆಯೂ, ಎಲ್ಲವೂ, ಎದುರಾಗಿ, ೬.

ನಾಮಪ್ರಾಕಾಶ್ಯಯೋಃಪ್ರಾದು

ಪ್ರಾದುಃ-೧-ಹೆಸರು, ಊಹೆ, ಚೇದಿರುವ, ೩.

ರ್ಮಿಥೋಽನ್ಯೋನ್ಯಂರಹಸ್ಯಪಿ

ಮಿಥಃ-೧-ಅನ್ಯೋನ್ಯವಾಗಿ, ಏಕಾಂತವಾಗಿ, ೨.

ತಿರೋಂತರ್ಧೌತಿರ್ಯಗರ್ಥೆ

ತಿರಃ-ತಿರಸ್-೨-ಮುಚ್ಚುವಿಕೆ,ಅಡ್ಡವಾಗಿ.೨

ಹಾವಿಷಾದಶುಗಾರ್ತಿಷು॥

ಹಾ-೧-ವಧೆ, ದುಃಖಃ,ಅಳುವು,ಪೀಡೆ,೪.

ಅಹಹೇತ್ಯದ್ಭುತೇಖೇದೆ

ಅಹಹ-೧-ಅತ್ಯಾಶ್ಚರ್ಯ,ಅತಿದುಃಖ, ೨.

ಹಿಹೇತಾವವಧಾರಣೆ ।

ಹಿ-೧-ಕಾರಣ, ನಿಶ್ಚಯ, ೨.

ಇತಿನಾನಾರ್ಥಾವ್ಯಯವರ್ಗಃ.

ನಾನಾರ್ಥಾವ್ಯಯವರ್ಗಃ-- ಅನೇಕಾರ್ಥಗಳುಳ್ಳ ಅವ್ಯಯಗಳ ಸಮೂಹವು ಇತಿ-ಈ ಮೇರೆ ಮುಗಿದುದು.

—ಃಃ—

ಚಿರಾಯಚಿರರಾತ್ರಾಯಚಿರಸ್ಯಾದ್ಯಾಶ್ಚಿರಾರ್ಥಕಾಃ ॥

ಚಿರಾಯ-ಚಿರರಾತ್ರಾಯ-ಚಿರಸ್ಯ-ಈ ೩ ಆದ್ಯಶಬ್ದದಿಂದ ಚಿರಂ, ಚಿರೇಣ,ಚಿರಾತ್, ೬ ಬಹುಕಾಲವೆಂಬ ಅರ್ಥದಲ್ಲಿ ವರ್ತಿಸುವವು.

ಮುಹುಃಪುನಃಪುನಶ್ಶಶ್ವದಭೀಕ್ಷ್ಣಮಸಕೃತ್ಸಮಾಃ

ಮುಹುಃ-ಪುನಃ-ಪುನರ್-ಶಶ್ವತ್- ಅಭೀಕ್ಷ್ಣಂ, ಅಸಕೃತ-ಈ-೫-ಸಮಾಃ - ಸಮಾನಾರ್ಥಕಗಳು, ಅಂದರೆ ಭಾರಿಭಾರಿಗೂ, ಮತ್ತೂ ಎಂಬರ್ಥದಲ್ಲಿ ವರ್ತಿಸುವವು.

ಸ್ರಾಗ್ಝಡಿತ್ಯಂ ಜಸಾಹ್ನಾಯದ್ರಾಕ್ಮಂಕ್ಷುಸಪದಿದ್ರುತೇ॥

ಸ್ರಾಕ್-ಝಡಿತಿ- ಪಾ-ಝುಟಿತಿ - ಅಜಂಸಾ-ಅಹ್ನಾಯ-ದ್ರಾಕ್-ಮಂಕ್ಷು-ಸಪದಿ-ಅ೭-ದ್ರುತೆ, ಶೀಘ್ರನೆಂಬ, ಅರ್ಥದಲ್ಲಿ ವರ್ತಿಸುವವು.

| | |
|---|---|
| ಬಲವತ್ಸುಷ್ಠು ಕಿಮುತಸ್ವತ್ಯ ತೀವಚ (ನಿರ್ಭರೆ। | ಬಲವತ್-ಸುಷ್ಠು-ಕಿಮುತ- ಸು-ಅತಿ-ಅತೀವ-೬-ಬಹಳ. |
| ಪೃಥ ಗ್ವಿನಾಂತರೇಣರ್ತೇಹಿ ರುಜ್ನಾನಾ (ಚವರ್ಜನೆ | ಪೃಥಕ್-ವಿನಾ-ಅಂತರೇಣ-ಋತೇ-ಹಿರುಕ್-ನಾನಾ-ಅ-೬-ವರ್ಜನೆ, ಅದನ್ನು ಬೇರೆ ತಪ್ಪಿಸಿ ಯೆಂದರ್ಥವು. |
| ಯತ್ತದ್ಯತಸ್ತತೊಹೇತಾ | ಯತ್-ತತ್-ಯತಃ-ತತಃ-ಅ-೪- ಕಾರಣಾರ್ಥವು. |
| ವಸಾಕಲ್ಯೆ.ತುಚಿಚ್ಚನ। | ಚಿತ್-ಚ-ನ-ಅ-೨-ಅಸಾಕಲ್ಯೆ ಕೆಲವುಎಂಬಅರ್ಥ. |
| ಕದಾಚಿಜ್ಜಾತು | ಕದಾಚಿತ್- ಜಾತು-ಅ-೨- ಒಂದಾನೊಂದುವೇಳೆ. |
| ಸಾರ್ಧಂತು ಸಾಕಂಸತ್ರಾಸಮಂಸಹ ॥೪೧೫॥ | ಸಾರ್ಧಂ-ಸಾಕಂ-ಸತ್ರಾ-ಸಮಂ-ಸಹ-ಅ-೫-ಕೂಡೆ. |
| ಆನುಕೂಲ್ಯಾರ್ಥಕಂ ಪ್ರಾಧ್ವಂ। | ಪ್ರಾಧ್ವಂ-ಅ-೧-ಬಂಧನ ಹೇತುವಾದ ಅನುಕೂಲತೆ. |
| ವ್ಯರ್ಥಕೆತುವೃಥಾಮುಧಾ | ವೃಥಾ-ಮುಧಾ -೨- ವ್ಯರ್ಥತೆ, ನಿಷ್ಪ್ರಯೋಜನ. |
| ಆಹೋಉತಾಹೊ ಕಿಮುತ ವಿಕಲ್ಪೆಕಿಂಕಿಮೂತಚ॥ | ಆಹೋ-ಪಾ-ಅಹೋ-ಉತಾಹೋ- ಕಿಮುತ-ಕಿಂ-ಕಿಮು - ಉತ-ಅ-೬-ವಿಕಲ್ಪ, ಹಾಗಲ್ಲದಿದ್ದರೆ ಹಾಗೋ, ಹೀಗೊ. |
| ತುಹಿಚಸ್ಮಹವೈ (ಪಾದಪೂರಣೆ | ತು-ಹಿ-ಚ-ಸ್ಮ-ಹ-ವೈ-ಅ-೬- ಪಾದಪೂರಣೆ-ಪಾದಪೂರಣಾರ್ಥದಲ್ಲಿ ವರ್ತಿಸುವವು. |
| ಪೂಜನೆ)ಸ್ವತಿ | ಸು-ಅತಿ-ಅ -೨- ಪೂಜನೆ-ಪೂಜಾರ್ಥ, ಚನ್ನಾಗಿ, |
| ದಿವಾ(ಹ್ನಿತ್ಯೆ | ದಿವಾ-ಅ-೧-ಅಹ್ನೀತಿ- ಹಗಲಿನಲ್ಲಿಎಂಬಅರ್ಥ, |
| ಥದೋಷಾಚನಕ್ತಂಚ (ರಜನಾವಿತಿ॥ | ದೋಷಾ-ನಕ್ತಂ-ಅ-೨-ರಜನೌ ಇತಿ-ರಾತ್ರಿಯೊಳು ಎಂಬಅರ್ಥದಲ್ಲಿ ವರ್ತಿಸುವವು. |
| (ತಿರ್ಯಗರ್ಥೆ) ಸಾಚಿತಿರೊಪ್ಯಥಸಂಭೊಧನಾರ್ಥಕಾಃ॥ಸ್ಯುಃ ಪ್ಯಾಟ್ಪಾಡಂಗ ಹೇಹೈಭೊ | ಸಾಚಿ-ತಿರಃ-ಅ-೨-ತಿರ್ಯಕ್- ಅಡ್ಡವಾಗಿ, ಅರ್ಥವಾಗಿ; ಪ್ಯಾಟ್-ಪಾಟ್-ಪಾ - ಫಾಟ್-ಅಂಗ-ಹೇ-ಹೈ-ಭೋಃ-ಅ-೬- ಸಂ |

ಬೋಧನಾರ್ಥಕಾಃ - ಸಂಬೋಧಿಸಿ ಕರೆಯುವದರಲ್ಲಿ ವರ್ತಿಸುವವು, ಓಯಿ,ಏ.

ಸ್ಸಮಯಾನಿಕಷಾಹಿರುಕ್॥

ಸಮಯಾ-ನಿಕಷಾ-ಹಿರುಕ್-ಅ- ೩ -ಸಮೀಪಾರ್ಥದಲ್ಲಿ ವರ್ತಿಸುವವು,ಸಮಯಾ-ನಿಕಷಾ, ೨, ಮಧ್ಯೆ ಎಂಬ ಅರ್ಥ.

(ಅತರ್ಕಿತೇತು) ಸಹಸಾ

ಸಹಸಾ-ಅ-೧-ಅತರ್ಕಿತೆ - ವಿಚಾರಿಸದೆ ತ್ವರೆಯಾಗಿ,

ಸ್ಯಾತ್ಪುರಃಪುರತೋಗ್ರತಃ।

ಪುರಃ-ಪುರತಃ-ಅಗ್ರತಃ-ಅ -೩- ಮುಂದೆ, ಮುಂದುಕಡೆ.

ಸ್ವಾಹಾ (ದೇವಹವಿರ್ದಾನೆ) ಶ್ರೌಷಡ್ವೌಷಡ್ವಷಟ್ಸ್ವಧಾ॥

ಸ್ವಾಹಾ-ಶ್ರೌಷಟ್--ವೌಷಟ್--ವಷಟ್-ಸ್ವಧಾ-ಅ-೫-ದೇವಹವಿರ್ದಾನೆ-ದೇವತೆಗಳಿಗೆ ಹವಿರ್ಭಾಗ ಕೊಡುವಿಕೆ.

ಕಿಂಚಿದೀಷನ್ಮನಾ(ಗಲ್ಪೆ

ಕಿಂಚಿತ್-ಈಷತ್-ಮನಾಕ್-ಅ-೩-ಅಲ್ಪೆ-ಕೊಂಚವು.

ಪ್ರೇತ್ಯಾಮುತ್ರ (ಭವಾಂತರೆ)

ಪ್ರೇತ್ಯ-ಅಮುತ್ರ-ಅ-೨-ಭವಾಂತರೆ, ಜನ್ಮಾಂತರದಲ್ಲಿ.

ವದ್ವಾಯಥಾ ತಥೈವೈವಂ (ಸಾಮ್ಯೇ)

ವತ್-ವಾ-ಯಥಾ-ತಥಾ-ಇವ- ಏವಂ-ಅ-೬-ಹಾಗೆ.

ಹೋಹಿ (ಚವಿಸ್ಮಯೆ)॥

ಅಹೋ-ಹಿ-ಅ-೨-ವಿಸ್ಮಯೆ, ಆಶ್ಚರ್ಯವು.

(ಮೌನೆತು) ತೂಷ್ಣೀಂತೂಷ್ಣೀಕಾಂ

ತೂಷ್ಣೀಂ-ತೂಷ್ಣೀಕಾಂ-ಅ-೨-ಮೌನದಲ್ಲಿವರ್ತಿಸುವವು.

ಸದ್ಯಸ್ಸಪದಿತತ್ಕ್ಷಣೆ॥ )

ಸದ್ಯಃ-ಸಪದಿ-ಅ-೨-ತತ್ಕ್ಷಣೆ, ಆಗಲೇ ಎಂಬರ್ಥವು.

ದಿಷ್ಟ್ಯಾಸಮುಪ ಜೋಷಂ (ಚೇತ್ಯಾನಂದೆ)

ದಿಷ್ಟ್ಯಾ-ಸಮುಪಜೋಷಂ-ಅ-೨-ಆನಂದೆ-ಸಂತೋಷವು.

ಥಾಂತರೆಂತರಾ॥ ಅಂತರೇಣ (ಚಮಧ್ಯೆಸ್ಯುಃ)

ಅಂತರೆ-ಅಂತರಾ-ಅಂತರೇಣ-ಅ-೩-ಮಧ್ಯೆಸ್ಯುಃ-ನಡುವೆ ಎಂಬರ್ಥದಲ್ಲಿ ವರ್ತಿಸುವವು.

ಪ್ರಸಹ್ಯ(ತುಹಠಾರ್ಥಕಂ।

ಪ್ರಸಹ್ಯ-ಅ -೧- ಹಠಾರ್ಥಕಂ- ಬಲಾತ್ಕಾರವು.

ಯುಕ್ತೆದ್ವೆಸಾಂಪ್ರತಂಸ್ಥಾನೆ

ಸಾಂಪ್ರತಂ - ಸ್ಥಾನೆ-ಅ-ದ್ವೆ-೨- ಯುಕ್ತೆ, ಉಚಿತವು.

| | |
|---|---|
| ಭೀಕ್ಷ್ಣಂಶಶ್ವ(ದನಾರತೆ) \| | ಅಭೀಕ್ಷ್ಣಂ-ಶಶ್ವತ್-ಅ-೨-ಅನಾರತೆ-ಎಡೆಬಿಡದೆ, ಬಹಳ. |
| (ಅಭಾವೆ)ನಹ್ಯನೊನಾಪಿ | ನ-ಹಿ-ನೋ-ನ-ಅ-ಈ೪ ಅವ್ಯಯಗಳೂ ಅಪಿಶಬ್ದದಿಂದ-ಅಪ-ಇದೂಸಹ- ಅಭಾವದಲ್ಲಿಯೂ ನಿಷೇಧದಲ್ಲಿಯೂಭೇದದಲ್ಲಿಯೂ ವರ್ತಿಸುವವು. ಇಲ್ಲ, ಅಲ್ಲ. |
| (ಮಾಸ್ಮ ಮಾಲಂಚವಾರಣೆ) | ಮಾಸ್ಮ-ಮಾ-ಅಲಂ-ಅ-೩-ವಾರಣೆ-ಬೇಡ, ಕೂಡದು. |
| (ಪಕ್ಷಾಂತರೆ) ಚೆದ್ಯದಿಚ | ಚೇತ್-ಯದಿ-ಅ-೨-ಪಕ್ಷಾಂತರೆ-ಈಪಕ್ಷದಲ್ಲಿ-ಆದರೆ. |
| ತತ್ವೇತ್ವದ್ಧಾಂಜಸಾದ್ವಯಂ॥ | ಅದ್ಧಾ-ಅಂಜಸಾ-ಅ-೨-ತತ್ವೆ- ಸತ್ಯವಾಗಿ, ಭ್ಯಾಗ. |
| ಪ್ರಕಾಶೆ ಪ್ರಾದುರಾವಿಸ್ಸ್ಯಾ | ಪ್ರಾದುಃ-ಆವಿಃ-ಅ-೨-ಪ್ರಕಾಶೆ-ಕಾಣಬರುವಂತೆ. |
| ದೊಮೆವಂಪರಮಂ (ಮತೆ | ಓಂ-ಎವಂ- ಪರಮಂ-ಅ-೩-ಮತೆ- ಅಂಗೀಕರಿಸುವಿಕೆ. |
| ಸಮಂತತಸ್ತು ಪರಿತಃಸರ್ವತೊವಿಷ್ವ(ಗಿತ್ಯಪಿ ॥೪೨೪॥ | ಸಮಂತತಃ-ಪರಿತಃ-ಸರ್ವತಃ· ವಿಷ್ವಕ್-ಈ೪-ಸಮಂತಾತ್-ಎಲ್ಲಕಡೆಯಲ್ಲಿಯೂ. |
| (ಅಕಾಮಾನುಮತೌ)ಕಾಮ | ಕಾಮಂ-ಅ-೧-ಅಕಾಮಾನುಮತೌ-ಮನಸ್ಸುಬಾರದೆಪರೇಚ್ಛೆಯಿಂದವಡಂಬಡುವಿಕೆ. |
| (ಮಸೂಯೊಪಗಮೆ)ಸ್ತುಚ। | ಅಸ್ತು-ಭವತು-೨-ಸಿಟ್ಟಿನಿಂದವಡಂಬಡುವಿಕೆ. |
| ನನುಚಸ್ಯಾದ್ವಿರೊಧೊಕ್ತೌ | ನನುಚ-ಅ-೧-ವಿರೋಧೋಕ್ತೌ-ವಿರುದ್ಧವಾಗಿ ಹೇಳುವಿಕೆ. |
| ಕಚ್ಚಿ(ತ್ಕಾಮಪ್ರವೆದನೆ॥ | ಕಚ್ಚಿತ್-ಅ- ೧- ಪ್ರವೇದನೆ-ಬೇಕಾದ್ದನ್ನು ತಿಳಿಯಪಡಿಸುವಿಕೆ. |
| ನಿಷ್ಷಮಂದುಷ್ಷಮಂಗರ್ಹ್ಯೆ | ನಿಷ್ಷಮಂ-ದುಷ್ಷಮಂ-ಅ- ೨-ಗರ್ಹ್ಯೆ-ನಿಂದಿಸತಕ್ಕದ್ದು. |
| ಯಥಾಸ್ವಂತುಯಥಾಯಥಂ। | ಯಥಾಸ್ವಂ- ಯಥಾಯಥಂ- ಅ-೨-ತೆ ವ್ಮಾತವ್ಮ ವಡಿವೆಗಳೆಂಬ ಅರ್ಥ, ತಾವ್ರತಾವೆಂಬ... |

| | |
|---|---|
| ಮೃಷಾಮಿಥ್ಯಾ (ಚವಿತಥೆ) | ಮೃಷಾ-ಮಿಥ್ಯಾ-ಅ-೨-ವಿತಥೆ, ಅಸತ್ಯವು-ಸುಳ್ಳು, ಭ್ರಾಂತಿಕಲ್ಪಿತ,ಪ್ರಾತಿಭಾಸಿಕ, ವ್ಯವಹಾರಿಕ,ಸಟೆ. |
| ಯಥಾರ್ಥಂತುಯಥಾತಥಂ ‖ | ಯಥಾರ್ಥಂ- ಯಥಾತಥಂ-ಅ-೨-ಸತ್ಯವು, ದಿಟ. |
| ಸ್ಯುರೇವಂತು ಪುನರ್ವೈವೇತ್ಯವಧಾರಣವಾಚಕಾಃ। | ಏವಂ-ತು-ಪುನಃ-ವೈ-ಎವ-ಅ- ಈ ೫ನ್ನು-ಅವಧಾರಣ ವಾಚಕಾಃಸ್ಯುಃ- ಹೀಗೆಯೇಸರಿಯೆಂಬುವಿಕೆ, ನಿಶ್ಚಯ. |
| ಪ್ರಾಗತೀತಾರ್ಥಕಂ | ಪ್ರಾಕ್-ಅ-೧-ಅತೀತಾರ್ಥಕಂ- ಕಳದುಹೋದದ್ದು. |
| ನೂನಮವಶ್ಯಂ ನಿಶ್ಚಯೆದ್ವಯಂ ‖೪೨೬‖ | ನೂನಂ-ಅವಶ್ಯಂ-ಅದ್ವಯಂ-ಈ೨-ನಿಶ್ಚಯೆ-ನಿಶ್ಚಯ, ನಿರ್ಣಯವಾದ ತಿಳುವಳಿಕೆ, ಎರಡಿಲ್ಲದ ನಿಜ. |
| ಸಂವ (ದ್ವರ್ಷೆ) | ಸಂವತ್-ಅ-೧-ವರ್ಷೆ-ಸಂವತ್ಸರದಲ್ಲಿ ವರ್ತಿಸುವದು. |
| ಪರೆತ್ವರ್ವಾ | ಅರ್ವಾಕ್- ಅ-೧-ಅಪರೆ- ಮೇರೆಯಾಗಿ ಹೇಳಲ್ಪಟ್ಟವಸ್ತುವಿಗೆ ಕೆಳಗಿನಕಾಲಕ್ಕೂ ದೇಶಕ್ಕೂಹೆಸರು. |
| ಗಾಮೇವಂ | ಆಂ-ಏವಂ-ಅ-೨-ಒಬ್ಬನು ಹೇಳಿದ್ದನ್ನು ಒಡಂಬಡುವಿಕೆ. |
| ಸ್ವಯ (ಮಾತ್ಮನಾ।) | ಸ್ವಯಂ-ಅ-೧-ಆತ್ಮನಾ-ತನ್ನಿಂದ, ತಾನಾಗಿ. |
| (ಅಲ್ಪೆ) ನೀಚೈ | ನೀಚೈಃ-ಅ-೧-ಅಲ್ಪೆ-ಕೊಂಚವಾದದ್ದು. |
| ರ್ಮಹ (ತ್ಯುಚ್ಚೈಃ) | ಉಚ್ಚೈಃ-ಅ-೧-ಮಹತಿ-ಅಧಿಕವಾಗಿ. |
| ಪ್ರಾಯೊಭೂಮ್ನ್ಯ | ಪ್ರಾಯಃ-ಅ-೧-ಭೂಮ್ನಿ- ಬಹುವಾಗಿ. |
| ದ್ರುತೆ (ಶನೈಃ ‖೪೨೭‖) | ಶನೈಃ-ಅ-೧-ಅದ್ರುತೆ-ಮೆಲ್ಲಗೆ. |
| ಸನಾ (ನಿತ್ಯೆ) | ಸನಾ-ಅ-೧-ನಿತ್ಯೆ-ನಿತ್ಯದಲ್ಲಿ,ಶಾಶ್ವತವಾಗಿ, ಸರ್ವದಾ. |
| ಬಹಿ (ರ್ಬಾಹ್ಯೆ) | ಬಹಿಃ-ಅ-೧-ಬಾಹ್ಯೆ, ಹೊರಗೆ. |
| ಸ್ಮಾ (ತೀತೆ, | ಸ್ಮ-ಅ-೧-ಅತೀತೆ-ಕಳದುಹೋದದ್ದು. |
| ಸ್ತ (ಮದರ್ಶನೆ ) | ಅಸ್ತಂ-ಅ-೧-ಅದರ್ಶನೆ-ಕಾಣಬಾರದೆ |

| | |
|---|---|
| | ಹೋಗುವಿಕೆ. |
| ಅಸ್ತಿ (ಸತ್ವೇ) | ಅಸ್ತಿ-ಅ-೧-ಸತ್ವೇ-ಉಂಟು ಎಂಬರ್ಥ. |
| ರುಷೋಕ್ತಾ (ವೂ) | ಊಂ-ಅ-೧-ರುಷೋಕ್ತೌ-ಕೋಪದಿಂದ ಹೇಳಲ್ಪಡುವದರಲ್ಲಿ ವರ್ತಿಸುವದು, (ಹುಂ)ಎಂತಲೂ ಪಾಠವಿದೆ. |
| ಮುಂಪ್ರಶ್ನೆ | ಉಂ-ಅ-೧-ಪ್ರಶ್ನೆ-ಕೇಳುವಿಕೆ. |
| ನುನಯೆ(ತ್ವಯಿ ॥४೯॥ | ಅಯಿ-ಅ-೧-ಅನುನಯೆ-ಸಮಾಧಾನಪಡಿಸುವಿಕೆ. |
| ತರ್ಕೆ) ನು (ಸ್ಯಾ) | ನು-ಅ-೧-ತರ್ಕೆ-ಊಹಿಸುವಿಕೆ, (ಸ್ಯಾತ್) ಅಂದರೆ ವೂಹೆ. |
| ದುಷಾ (ರಾತ್ರೆ) ರವಸಾನೆ | ಉಷಾ-ಅ-೧-ರಾತ್ರೆಃಅವಸಾನೆ- ಬೆಳಗಿನಝಾವು. |
| ನವೊ (ನತೌ) | ನಮಃ-ಅ-೧-ನತೌ-ನಮಸ್ಕಾರವು, |
| (ಪುನರರ್ಥೆಂ) ಗ | ಅಂಗ-ಅ-೧-ಪುನಃ-ಮತ್ತೂ-ಎಂಬರ್ಥ. |
| (ನಿಂದಾಯಾಂ) ದುಷ್ಠು | ದುಷ್ಠು-ಅ-೧-ನಿಂದಾಯಾಂ ದೂಷಣೆ. |
| (ಸುಷ್ಠು) ಪ್ರಶಂಸನೆ ॥ | ಸುಷ್ಠು-ಅ-೧-ಪ್ರಶಂಸನೆ-ಸ್ತೋತ್ರ. |
| (ಅವಾ) ನುಗುಣ್ಯೆ | ಆಮು-ಅ-೧-ಆನುಗುಣ್ಯೆ- ಅನುಕೂಲಾರ್ಥವು. |
| (ಸ್ಮರಣೆ) ಯೆ | ಅಯೆ-ಅ-೧-ಸ್ಮರಣೆ-ನೆನಸಿಕೊಳ್ಳುವಿಕೆ. |
| ಘ (ಡ್ವಿಘ್ನಸಿರಾಕೃತೌ।) | ಫಟ-ಅ-೧-ವಿಘ್ನನಿರಾಕೃತೌ- ಅಡ್ಡಿಯನ್ನು ಗೊಳಿಸುವಿಕೆ, ನಿರ್ವಿಘ್ನವಾಗಿ. |
| (ಅಂಗೀಕೃತೌಸ್ಯಾ) ದಥಕಿಂ | ಅಥಕಿಂ-ಅ-೧-ಅಂಗೀಕೃತೌ--ವಡಂಬಡಿಕೆ, ವಪ್ಪಂದ. |
| ಹೀ (ನಸಂಬೊಧನೆ) ತುರೆ॥ | ರೆ-ಅ-೧-ಹೀನಸಂಬೋಧನೆ--ಕೀಳಾದವನನ್ನು ಕಡಮೆಯಾಗಿ ಕರೆಯುವಿಕೆ. |
| ಸಾಯಂ (ಸಾಯೆ) | ಸಾಯಂ-ಅ-೧-ಸಾಯೆ-ಸಾಯಂಕಾಲವು, |
| ಪ್ರಗೆವ್ರಾತಃ (ಪ್ರಭಾತೆ) | ಪ್ರಗೆ-ಪ್ರಾತಃ-ಅ-೧-ಪ್ರಭಾತೆ-ಪ್ರಾತಃಕಾಲವು. |
| ನಿಕಷಾಂ (ತಿಕೆ) | ನಿಕಷಾ-ಅ-೧-ಅಂತಿಕೆ- ಸಮೀಪದಲ್ಲಿ, |
| ಪರುತ್ಸರಾರ್ಥ್ಯೈಷಮೊ (ಬ್ದೆ | ಪರುತ-ಪರಾರಿ-ಐಷಮಃ-ಅ- ಈ-೩-ಕಳೆದ ಪರುಷ |
| ಪೂರ್ವೆಪೂರ್ವತರೆ) ಯತಿ॥४३೦ | ಕ್ರಮವಾಗಿ, ಪೂರ್ವ ಅಬ್ದೆ |

ದಲ್ಲಿಯೂ, ಪೂರ್ವತರೆ ಅಬ್ದೆ- ಅದಕ್ಕಿಂತಲೂ ಹಿಂದಣ ಸಂವತ್ಸರದಲ್ಲಿಯೂ,ಯತಿ- ನಡಿಯುತ್ತಿರುವ ಸಂವತ್ಸರದಲ್ಲಿಯೂ, ವರ್ತಿಸುವವು.

ಅಹ್ನ್ಯ (ತ್ರ್ಯಹ್ಣ್ಯ)

ಅಹ್ನ್ಯ-ಅ-೧-ಅತ್ರ-ಅಹ್ನಿ-ನಡೆಯುವ ಹಗಲು.

(ಥಪೂರ್ವೇಹ್ನೀತ್ಯಾದೌ ಪೂರ್ವೋತ್ತರಾಪರಾತ್ । ತಥಾಧರಾನ್ಯಾನ್ಯತರೇತರಾತ್ಪೂರ್ವೇದ್ಯುರಾದಯಃ ॥೪೩೩॥

ಪೂರ್ವೋತ್ತರಾಪರಾತ್-ಅಧರಾನ್ಯಾನ್ಯತರೇತರಾತ್-ಪೂರ್ವ- ಉತ್ತರ-ಅಪರ- ಅಧರ-ಅನ್ಯ-ಅನ್ಯತರ-ಇತರ- ಎಂಬಶಬ್ದಗಳಿಂದಾದ ಅವ್ಯಯಗಳು ಕಾಲವಾಚಿಗಳುಹೇಗಂದರೆ, ಪೂರ್ವೇದ್ಯುಃ-ಹಿಂದಣ ದಿನ, ಉತ್ತರೇದ್ಯುಃ-ಮಾರನೆಯದಿನ,ಅಪರೇದ್ಯುಃ- ಮತ್ತೊಂದುದಿನ, ಅಧರೇದ್ಯುಃ- ಕೆಳಗಣದಿನ ಅನ್ಯೇದ್ಯುಃ-ಬೇರೆಯೊಂದುದಿನ,ಅನ್ಯತರೇದ್ಯುಃ-ಬೇರೆ ಯೆರಡು ದಿನಗಳಲ್ಲೊಂದುದಿನ, ಇತರೇದ್ಯುಃ- ಇನ್ನು ಬೇರೆಯೊಂದುದಿನ, ಎಂದು ಅರ್ಥವಾಗುತ್ತವೆ.

ಉಭಯದ್ಯುಶ್ಚೋಭಯೇದ್ಯುಃ

ಉಭಯದ್ಯುಃ-ಉಭಯೇದ್ಯುಃ-ಅ-೨ ಎರಡುದಿನಗಳು.

(ಪರೇತ್ವಹ್ನಿ) ಪರೇದ್ಯವಿ।

ಪರೇದ್ಯವಿ-ಅ-೧-ಅಹ್ನಿಪರೆ,-ಮರುದಿನ.

ಹ್ಯೋ (ಗತೆ)

ಹ್ಯಃ-ಅ-೧-ಗತೇಹ್ನಿ- ಹಿಂದಣದಿನ, ಕಳೆದದಿನ.

(ನಾಗತೇಹ್ನಿ) ಶ್ವಃ

ಶ್ವಃ-ಅ-೧-ಅನಾಗತೆ-ಬಾರದೇ ಇರುವ ದಿನ, ಮುಂದೆ ಬರುವದಿನ, ನಾಳೇದಿನ.

ಪರಶ್ವ (ಸ್ತತ್ಪರೇಹನಿ॥)

ಪರಶ್ವಃ-ಅ-೧-ತತ್ಪರೆ ಅಹನಿ-ಆಚೇದಿನ, ನಾಡಿದ್ದು.

ತದಾತದಾನೀಂ

ತದಾ-ತದಾನೀಂ-ಅ-೨-ಆಗ, ಆವಾಗ.

ಯುಗಪದೇಕದಾ

ಯುಗಪತ್-ಏಕದಾ-ಅ-೨- ಒಂದೇವೇಳೆಯಲ್ಲಿ.

ಸರ್ವದಾಸದಾ ।

ಸರ್ವದಾ-ಸದಾ-ಅ-೨-ಯಾವಾಗಲೂ,

ಏತರ್ಹಿ ಸಂಪ್ರತೀದಾನೀಮ

ಏತರ್ಹಿ- ಸಂಪ್ರತಿ-ಇದಾನೀಂ - ಅಧು

ಘುನಾಸಾಂಪ್ರತಂತಥಾ॥
ದಿಗ್ದೇಶಕಾಲೇಪೂರ್ವಾದೌಪ್ರಾ
ಗುದಕ್ಪ್ರತ್ಯಗಾದಯಃ ॥

ನಾ-ಸಾಂಪ್ರತಂ-ಅ-೫-ಈಗ,ಈವಾಗ,
ಪ್ರಾಗುದಕ್ಪ್ರತ್ಯಗಾದಯಃ-ಪೂರ್ವಾದೌ ದಿಗ್ದೇಶಕಾಲೇ- ಪ್ರಾಕ್-ಅ-೧-ಪೂರ್ವ ದಿಕ್ಕಿಗೂ ಪೂರ್ವ ದೇಶಕ್ಕೂ, ಪೂರ್ವ ಕಾಲಕ್ಕೂ ಹೆಸರು, ಉದಕ್ -ಅ-೧-ಬಡಗಲ ದೆಸೆಗೂ ಬಡಗಲ ಕಡೆಗೂ ಉತ್ತರ ಕಾಲಕ್ಕೂ ಹೆಸರು, ಪ್ರತ್ಯಕ್-ಅ-೧-ಪಡವಲ ದೆಸೆಗೂ, ಪಡವಲ ದೇಶಕ್ಕೂ, ಪಶ್ಚಾತ್ಕಾಲಕ್ಕೂ ಹೆಸರು. ಆದಿಪದದಿಂದ ಅವಾಕ್-ಅ-೧-ಟೆಂಕಲ ದೆಸೆಗೂ, ಟೆಂಕಲ ದೇಶಕ್ಕೂ, ದಕ್ಷಿಣಾಯನಕ್ಕೂ ಹೆಸರು.
ಅವ್ಯಯವರ್ಗಃ-ಅವ್ಯಯಗಳ ಸಮೂಹವು, ಇತಿ-ಈ ಮೇರೆ ಮುಗಿದುದು.

*ಇತ್ಯವ್ಯಯವರ್ಗಃ*
—:*:—

## ಅಥ ಲಿಂಗಾದಿಸಂಗ್ರಹವರ್ಗಃ.

ಅವತರಣಿಕೆ ॥ ಗ್ರಂಥಕರ್ತನು ತಾನು ಗ್ರಂಥಾದಿಯಲ್ಲಿ ಮಾಡಿದ (ಸಂಪೂರ್ಣಮುಚ್ಯತೆವರ್ಗೈರ್ನಾಮಲಿಂಗಾನುಶಾಸನಂ)ಎಂಬುವ ಪ್ರತಿಜ್ಞೆಯ ಪ್ರಕಾರ ಲಿಂಗಗಳ ಸಂಗಡ ನಾಮಗಳಿಗೆ ಶಾಸನವನ್ನು ಹೇಳಿದಾಗ್ಯೂ ಲಿಂಗಾನುಶಾಸನವು ಸಂಪೂರ್ಣ ವಾಗಲಿಲ್ಲವೆಂದು ನೆನದು ಆ ಲಿಂಗಾನುಶಾಸನಕ್ಕೂ ಸ್ಕರ ವರ್ಗಾಂತರವನ್ನು ಆರಂಭಿಸುತ್ತಾನೆ.

ಮೂ॥ ಸಲಿಂಗಶಾಸ್ತ್ರೈಃ ಸನ್ನಾದಿಕೃತ್ತದ್ಧಿತಸಮಾಸಜೈಃ ।
ಅನುಕ್ತಂಸಂಗ್ರಹೇಲಿಂಗಂಸಂಕೀರ್ಣವದಿಹೋನ್ನಯೇತ್ ॥

ಟೀ॥ಇಹಸಂಗ್ರಹೇ-ಈ ಲಿಂಗಸಂಗ್ರಹ ವರ್ಗದಲ್ಲಿ, ಸಲಿಂಗಶಾಸ್ತ್ರೈಃ-ಲಿಂಗಶಾಸ್ತ್ರಗಳೆಂದರೆ, ಪಾಣಿನಿ, ವರರುಚಿ, ಮೊದಲಾದವರಿಂದ ಹೇಳಲ್ಪಟ್ಟ ಲಿಂಗಲಕ್ಷಣಗಳೆಲ್ಲ (ಸ್ತ್ರಿಯಾಮೀದೂದ್ವಿರಾಮೈಕಾಚ್) ಎಂಬುವದು ಮೊದಲಾದವಾಕ್ಯಗಳು ಅವುಗಳ ಸಂಗಡ ಕೂಡಿದಂಥ ( ಸನ್ನಾದಿಕೃತ್ತದ್ಧಿತಸಮಾಸಜೈಃ) ಸನಾದ್ಯಂತ ಧಾತುವುಗಳ ಮೇಲಿನ ಅಪ್ರತ್ಯಯ ಮೊದಲಾದ ಕೃತ್ಪ್ರತ್ಯಯಗಳಿಂದಲೂ, ಕೇವಲ ಧಾತುಗಳ ಮೇಲಣ ಕೃತ್ಪ್ರತ್ಯಯಗಳಿಂದಲೂ, ತದ್ಧಿತಪ್ರತ್ಯಯಗಳಿಂದಲೂ, ಸಮಾಸಗಳಿಂದಲೂ, ಹುಟ್ಟಿದ ವಾಕ್ಯಗಳೆಂದರೆ (ಸ್ತ್ರೀಭಾವಾದಾವನಿಕ್ತಿನ್) ಇವು ಮೊದಲಾದ ಕೃತ್ಪ್ರತ್ಯಯಗಳ ಸಂಗಡ ಕೂಡಿದ ವಾಕ್ಯಗಳಿಂದಲೂ (ತಲ್ವೃಂದೇಣಿಕ್ಯಸ್ತ್ರಾ) ಇವು

ಮೊದಲಾದ ತದ್ಧಿತ ಪ್ರತ್ಯಯಗಳ ಸಂಗಡ ಕೂಡಿದ ವಾಕ್ಯಗಳಿಂದಲೂ (ಅ ದಂತೈರ್ದ್ವಿರ್ಗುರಕಾರ್ಥಃ) ಇವು ಮೊದಲಾದ ಸಮಾಸಗಳ ಸಂಗಡ ಕೂಡಿ ದ ವಾಕ್ಯಗಳಿಂದಲೂ ಎಂದರ್ಥವು. ಅನುಕ್ತಂ, ಪೂರ್ವವರ್ಗಗಳಲ್ಲಿ ಸಂಪೂ ರ್ಣವಾಗಿ ಹೇಳಲ್ಪಡದಂಥಾ, ಲಿಂಗಂ, ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕಲಿಂ ಗಗಳನ್ನು, ಉನ್ನಯೇತ-ತಿಳಕೊಳ್ಳತಕ್ಕದ್ದು, ಮತ್ತು ದೃಷ್ಟಾಂತದಿಂದಲೂ, ಲಿಂಗವನ್ನು ತಿಳಿಯುವ ಉಪಾಯವನ್ನು ಹೇಳುತ್ತಾನೆ. ಸಂಕೀರ್ಣವತ್ ಎಂದು ಸಂಕೀರ್ಣವರ್ಗದಲ್ಲಿಯೋಪಾದಿಯಾಗಿ ಪ್ರಕೃತಿ ಪ್ರತ್ಯಯಾರ್ಥಗ ಳಿಂದಲೂ ಲಿಂಗವನ್ನು ತಿಳಿಯತಕ್ಕದ್ದೆಂಬ ಅರ್ಥವು.

ಅವತರಣಿಕೆ ॥ ಈ ವರ್ಗದಲ್ಲಿ ಹೇಳಲ್ಪಡುವ ಲಿಂಗಲಕ್ಷಣಗಳಿಗೆ ಪೂ ರ್ವವರ್ಗಗಳಲ್ಲಿ ಹೇಳಿದ ವಿಶೇಷ ವಿಧಿಗಳ ಸಂಗಡ ವಿರೋಧವು ಬಂದರ ಆ ಗ ಯಾವಲಕ್ಷಣವು ಪ್ರವರ್ತಿಸುವದೆಂಬುವ ಶಂಕೆ ಬರಲಾಗಿ ಅದಕ್ಕೆ ಪ ರಿಹಾರವಂ ಹೇಳುತ್ತಿದ್ದಾನೆ, ಹೇಗಂದರೆ.

ಮೂ॥ ಲಿಂಗಶೇಷವಿಧಿರ್ವ್ಯಾಪೀವಿಶೇಷೈರ್ಯದ್ಯಬಾಧಿತಃ ॥೪೨೭॥

ಟೀ॥ ಲಿಂಗಶೇಷವಿಧಿಃ ಈ ವರ್ಗದಲ್ಲಿ ಹೇಳಲ್ಪಡುವ ಸಾಮಾನ್ಯವಾದ ಲಿಂಗಲಕ್ಷಣವು, ವಿಶೇಷೈಃ-ಈ ಶಾಸ್ತ್ರದೊಳಗಲ್ಲಲ್ಲಿ ಹೇಳಲ್ಪಟ್ಟ ವಿಶೇಷವಿಧಿ ಗಳಿಂದ, ಅಬಾಧಿತೋಯದಿ - ಬಾಧಿಸಲ್ಪಟ್ಟದ್ದಾದರೆ, ವ್ಯಾಪಿ-ತಾನು ವರ್ತಿ ಸುವಂಥಾದ್ದಾಗುವದು ಅಂದರೆ, ಈ ವರ್ಗದಲ್ಲಿ ಹೇಳುವ ಲಿಂಗ ಲಕ್ಷಣವು, ಪೂರ್ವವರ್ಗಗಳಲ್ಲಿ ಹೇಳಿದ ವಿಶೇಷವಿಧಿಯನ್ನು ಬಿಟ್ಟು ಮಿಕ್ಕಾದ ಕಡೆಗಳ ಲ್ಲಿಯೆ ವರ್ತಿಸುವದೆಂದು ತಾತ್ಪರ್ಯವು. ಅದು ಹೇಗಂದರೆ, ಈ ವರ್ಗದಸ್ವ ರ್ಗ ಪರ್ಯಾಯಪದಗಳು ಪುಲ್ಲಿಂಗಗಳಾಗುವವೆಂಬ ವಿಧಿಯು, ದ್ಯೋದಿವೌದ್ವೆ ಸ್ತ್ರಿಯಾಂ ಯೆಂಬುವ ವಿಶೇಷವಿಧಿಸ್ಥಳದಲ್ಲಿ ಬಾಧಿಸಲ್ಪಟ್ಟದ್ದರಿಂದ, ವ್ಯಾಪ್ತಿ ಯಿಲ್ಲದೆ ಪ್ರವರ್ತಿಸಲಾರದು.

ಮೂ॥ ಸ್ತ್ರಿಯಾ

ಟೀ॥ ಸ್ತ್ರಿಯಾಂ ಎಂಬುವ ಪದವು, ಪುಂಸ್ತ್ವಸಭೇದಾನುಚರಾ ಎಂಬು ವ ಪುಲ್ಲಿಂಗಾಧಿಕಾರ ಪರ್ಯಂತವೂ, ಅನುವರ್ತಿಸಿ ಬರುವದಾದ್ದರಿಂದ, ಆವರಿ ವಿಗು ಮುಂದೆ ಹೇಳಲ್ಪಡುವ ಶಬ್ದಗಳು ಸ್ತ್ರೀಲಿಂಗಗಳಾಗಿರುವವು.

ಮೂ॥ ಮಿಾದೂದ್ವಿರಾಮೈಕಾಚ್

ಟೀ॥ ಏಕಾಚ್, ಒಂದು ಅಚ್ಚುಳ್ಳ, ಈ ದೂದ್ವಿರಾಮಾ-ಈಕಾರಾಂತ ಊಕಾರಾಂತ ಶಬ್ದಗಳು ಸ್ತ್ರೀಲಿಂಗಗಳು. ಉದಾಹರಣ* ಶ್ರೀಃ, ಧೀಃ, ಭೂಃ, ಭ್ರೂಃ, ಇತ್ಯಾದಯಃ.

ಮೂ॥ ಸ್ಯೆ...

ಟೀ॥ ಯೋನಿಯುಳ್ಳ ಪ್ರಾಣಿಗಳಿಗೆ ಹೆಸರಾದ ಶಬ್ದಗಳು ಸ್ತ್ರೀಲಿಂಗದಲ್ಲಿ ವರ್ತಿಸುವವು. ಉದಾಹರಣಗಳು * ಮಾತಾ,ಯೋಷಿತ್, ಸುರಭಿಃ, ಕರೇಣುಃ, ಇತ್ಯಾದಯಃ.

ಮೂ॥ ನಾಮವಿದ್ಯುನ್ನಿಶಾವಲ್ಲೀವೀಣಾದಿಗ್ಭೂನದೀಹ್ರಿಯಾಂ॥೪೩೮॥

ಟೀ॥ ವಿದ್ಯುತ್-ಮಿಂಚು, ನಿಶಾ-ರಾತ್ರಿ, ವಲ್ಲಿ-ಹಂಬು, ವೀಣಾ-ವೀಣೆ,ದಿಕ್-ದೆಸೆ, ಭೂಃ-ಭೂಮಿ, ನದೀ-ಹೊಳೆ, ಹ್ರೀ-ನಾಚಿಕೆ, ಈ ೮ ವಸ್ತುವುಗಳ, ನಾಮ-ಹೆಸರುಗಳು, ವಿಶೇಷವಿಧಿ ಬಾಧೆ ಇಲ್ಲದಂಥಾವು, ಸ್ತ್ರೀ- ಈಬಳಿ ವೀಣಾ ಪರ್ಯಾಯಗಳಿಗೂ ಹ್ರೀಪರ್ಯಾಯಗಳಿಗೂ ಚಾಬೂಜಂತಂ- ಈ ದೂದ್ವಿರಾವೃಕಾಚ್ ಯೆಂಬುವವಿಧಿಗಳಿಂದ ಸ್ತ್ರೀಲಿಂಗವು ಸಿದ್ಧಿಸಿದರು ವಿಸ್ಪಷ್ಟಾರ್ಥವಾಗಿ ಹೇಳಿಇದ್ದಾನೆ, ಕೆಲವರು(ವಾಣೀದಿಗ್ಭೂನದೀಧಿಯಾಂ)ಯಂದು ಪಾಠವ್ಹಂಟೆಂದರು, ಮೊದಲು ಪಕ್ಷದಲ್ಲಿ ಹ್ರೀ ಪರ್ಯಾಯಗಳಾದ ಮಂದಾಕ್ಷ ವ್ರೀಳಾ ಶಬ್ದಗಳು ವಿಶೇಷವಿಧಿ ಬಾಧೆಯುಂಟಾದವುಗಳಾದ್ದರಿಂದ ಅಲ್ಲಿ ಈವಿಧಿಇಲ್ಲವು.

ಮೂ॥ಅದಂತೈರ್ದ್ವಿಗುರೇಕಾರ್ಥೋ

ಟೀ॥ ಅದಂತೈಃ-ಅಕಾರಾಂತಗಳಾದ ಉತ್ತರ ಪದಗಳ ಸಂಗಡ ಕೂಡಿಕೊಂಡಿದ್ದ ಏಕಾರ್ಥೋದ್ವಿಗುಃ-ಸಮಾಹಾರದಲ್ಲಿ ದ್ವಿಗುಸಮಾಸವು ಸ್ತ್ರೀ-ದ್ವಿಗುಸಮಾಸವಂದರೆ ಸಂಖ್ಯಾಪೂರ್ವ ಪದಸಮಾಸವು. ಉದಾಹರಣಗಳು* ಪಂಚಾನಾಪೂಲಾನಾಂ ಸಮಾಹಾರಃ ಪಂಚಪೂಲೀ, ದಶಪೂಲೀ, ಪಂಚವಟೀ ಇತ್ಯಾದಿಗಳು.

ಮೂ॥ ನಸಪಾತ್ರಯುಗಾದಿಭಿಃ।

ಟೀ॥ ಪಾತ್ರಯುಗಾದಿಭಿಃ-ಉತ್ತರಪದಗಳಾದ ಪಾತ್ರಯುಗಾದಿ ಶಬ್ದಗಳ ಸಂಗಡ ಕೂಡಿದ್ದ ಸಃ-ಆ ದ್ವಿಗುಸಮಾಸವು, ನ-ಸ್ತ್ರೀಲಿಂಗವಲ್ಲ. ಉದಾಹರಣಗಳು* ಪಂಚಪಾತ್ರಂ-ಚತುರ್ಯುಗಂ- ತ್ರಿಭುವನಂ - ಇತ್ಯಾದಿಗಳಂನು ತಿಳಿದುಕೊಳ್ಳತಕ್ಕದ್ದು.

ಮೂ॥ ತಲ್.

ಟೀ॥ ಭಾವಾರ್ಥದಲ್ಲಿಯೂ, ಸಮೂಹಾರ್ಥ ದಲ್ಲಿಯೂ, ಸ್ವಾರ್ಥದಲ್ಲಿಯೂ ವಿಧಿಸಲ್ಪಟ್ಟ ತಲ್‌ಪ್ರತ್ಯಯವು ಅಂತವಾಗಿವುಳ್ಳಶಬ್ದಗಳು ಸ್ತ್ರೀ-ಉದಾಹರಣಗಳು* ಭಾವಾರ್ಥದಲ್ಲಿ ಪುರುಷಸ್ಯಭಾವಃ-ಪುರುಷತಾ, ಅಶ್ವತಾ, ಸಮೂಹಾರ್ಥದಲ್ಲಿ ಗ್ರಾಮಾಣಾಂಸಮೂಹಃ-ಗ್ರಾಮತಾ,ಜನತಾ, ಬಂಧುತಾ, ಸಹಾಯತಾ, ಸ್ವಾರ್ಥದಲ್ಲಿ ದೇವಏವ ದೇವತಾ.

ಮೂ॥ ಬಂದೆಯನಿಕಿದ್ವ್ಯಚಾ್ರ)

ಟೀ॥ ಬ್ರಂದ-ಸಮೂಹಾರ್ಥದಲ್ಲಿ ವಿಧಿಸಲ್ಪಟ್ಟ, ಯ-ಇನಿ-ಕ್ಯಚ್-ಪಾ-ಕೆಟ್ಯಚ್-ತ್ರ-ಯೆಂಬುವ ಪ್ರತ್ಯಯಗಳು ಅಂತಗಳಾಗಿವುಳ್ಳ ಶಬ್ದಗಳು ಸ್ತ್ರೀ-

ಉದಾಹರಣಗಳು* ಯಪ್ರತ್ಯಯಾಂತಕ್ಕೆ ಪಾಶಾನಾಂ ಸಮೂಹಃ-ಪಾಶ್ಯಾ
ಈ ಪ್ರಕಾರವೆ ಇನಿಪ್ರತ್ಯಯಾಂತಕ್ಕೆ ಖಲಿನೀ, ಕಡ್ಯಚ್, ಪ್ರತ್ಯಯಾಂತಕ್ಕೆ
ರಥಕಡ್ಯಾ-ಪಾ-ರಥಕಟ್ಯಾ -ತ್ರಪ್ರತ್ಯಯಾಂತಕ್ಕೆ ಗೋತ್ರಾ.

ಮೂ॥ ವೈರಮೈಥುನಿಕಾದಿರ್ವುನ್ ॥೪೯೯॥

ಟೀ॥ ವೈರ-ವಿರೋಧದಲ್ಲೂ, ಮೈಥುನಿಕಾ-ವಿವಾಹದಲ್ಲೂ, ಆದಿಶಬ್ದದಿಂದ ವೀಪ್ಸೆಯಲ್ಲೂ, ದಂಡದಲ್ಲೂ, ದಾನದಲ್ಲೂ ವಿಧಿಸಲ್ಪಟ್ಟ ವುನ್ ಯೆಂಬುವ ಪ್ರತ್ಯಯವು ಅಂತವಾಗಿವುಳ್ಳ ಶಬ್ದಗಳು ಸ್ತ್ರೀ-*ಉದಾಹರಣಗಳು. ವಿರೋಧದಲ್ಲಿ ಅಶ್ವಮಹಿಷಯೋಃ ವಿರೋಧಃ-ಅಶ್ವಮಹಿಷಿಕಾ, ಕಾಕೋಲೂಕಿಕಾ- ವಿವಾಹದಲ್ಲಿ ಅತ್ರಿಭರದ್ವಾಜಯೋಃ ವಿವಾಹಃ-ಅತ್ರಿಭರದ್ವಾಜಿಕಾ, ವಸಿಷ್ಠ ಕುಶಿಕಿಕಾ ವೀಪ್ಸೆಯಲ್ಲಿ ದ್ವೌ ದ್ವೌ ಪಾದೌ ದದಾತಿ, ದ್ವಿಪದಿಕಾಂ ದದಾತಿ, ದ್ವಿಶತಿಕಾಂದದಾತಿ, ದಂಡದಲ್ಲಿ ದ್ವೌ ಪಾದೌ ದಂಡಿತಃ-ದ್ವಿಪದಿಕಾಂ ದಂಡಿತಃ, ದ್ವಿಶತಿಕಾಂದಂಡಿತಃ, ದಾನದಲ್ಲಿ ದ್ವೌ ಪಾದೌ ವ್ಯವಸೃಜತಿ, ದ್ವಿಪದಿಕಾಂವ್ಯವಸೃಜತಿ, ದ್ವಿಶತಿಕಾಂವ್ಯವಸೃಜತಿ, ವುನ್‌ಪ್ರತ್ಯಯವು ವುಞ್ ಪ್ರತ್ಯಯಕ್ಕೆ ಉಪಲಕ್ಷಕವಾದ್ದರಿಂದ ವುಞ್ ಪ್ರತ್ಯಯಾಂತಗಳು ಕೆಲವು ಸ್ಥಳಗಳಲ್ಲಿ ಸ್ತ್ರೀಲಿಂಗಗಳಾಗುವವು, ಅದಕ್ಕೆ *ಉದಾಹರಣಗಳು* ಶಿಷ್ಯೋಪಾಧ್ಯಾಯಯೋರ್ಭಾವಃ-ಶೈಷ್ಯೋಪಾಧ್ಯಾಯಿಕಾ-ಇತ್ಯಾದಿಗಳು.

ಮೂ॥ ಸ್ತ್ರೀಭಾವಾದಾವನಿಕ್ತಿಣ್ವುಲ್ಣಚ್ಣ್ವುಚ್ಕ್ಯಪ್ಯುಜಿಞ್ಶ್ಯಕಾಃ।

ಟೀ॥ ಸ್ತ್ರೀಭಾವಾದೌ-ಸ್ತ್ರ್ಯಾದಿಕಾರದೊಳಗೆ ಭಾವಾದ್ಯರ್ಥಗಳಲ್ಲಿ ವಿಧಿಸಲ್ಪಟ್ಟ-ಅನಿ-ಕ್ತಿನ್-ಣ್ವುಲ್-ಣಚ್-ಣ್ವುಚ್-ಕ್ಯಪ್-ಯುಚ್-ಇಞ್-ಅ-ಇಞ್-ನಿ-ಶ-ಎಂಬುವಪ್ರತ್ಯಯಗಳು ಅಂತವಾಗಿಉಳ್ಳ ಶಬ್ದಗಳು, ಸ್ತ್ರೀ*ಉದಾಹರಣಗಳು* ಅಜನನಿಃ-ಅಕರಣಿಃ-ಈಬಳಿಆಕ್ರೋಶದಲ್ಲಿ ಅನಿಪ್ರತ್ಯಯವು-ಕೃತಿಃ-ಭೃತಿಃ-ಇಲ್ಲಿಭಾವಾರ್ಥದೊಳಗೆ ಕ್ತಿನ್ ಪ್ರತ್ಯಯವು ಪ್ರವಾಹಿಕಾ, ಪ್ರಚ್ಛರ್ದಿಕಾ-ಇಲ್ಲಿರೋಗಾಖ್ಯದೊಳಗೆ, ಣ್ವುಲ್-ಕಾರಿಕಾ-ಜೀವಿಕಾ- ಇಲ್ಲಿಧಾತ್ವರ್ಥದಲ್ಲಿ-ಣ್ವುಲ್- ವ್ಯಾವಕ್ರೋಶೀ- ಒಬ್ಬರಿಗೊಬ್ಬರು ಬೋಯ್ಕೊಂಬುವದು, ವ್ಯಾತ್ಯುಕ್ಷೀ-ಒಬ್ಬರಮೇಲೆಯೊಬ್ಬರು ನೀರುಚಲ್ಲಿಕೊಂಬುವದು, ಇಲ್ಲಿಕರ್ಮವ್ಯತಿಹಾರದೊಳಗೆ-ಣಚ್‌ಪ್ರತ್ಯಯವು, ಭವತಃ ಶಾಯಿಕಾ-ಭವತಃ ಆಸಿಕಾ-ಇಲ್ಲಿಪರ್ಯಾಯಾರ್ಥದೊಳಗೆ ಣ್ವುಚ್‌ಪ್ರತ್ಯಯವು, ಭವಾನರ್ಹತಿ ಇಕ್ಷುಭಕ್ಷಿಕಾಂ-ಪಯಃಪಾಯಿಕಾಂ-ಈಸ್ಥಳದಲ್ಲಿ ಅರ್ಹಾರ್ಥದೊಳಗೆಣ್ವುಚ್-ಇಕ್ಷುಭಕ್ಷಿಕಾಂಮೆಧಾರಯಸಿ-ಓದನಭಕ್ಷಿಕಾಂ-ಇಲ್ಲಿ ಋಣಾರ್ಥದೊಳಗೆ ಣ್ವುಚ್-ಇಕ್ಷು ಭಕ್ಷಿಕಾಮೇ ಉದಪಾದಿ, ಓದನ ಭಕ್ಷಿಕಾ ಇಲ್ಲಿ ಉತ್ಪತ್ತಿಯೊಳಗೆ ಣ್ವುಚ್ ಪ್ರತ್ಯಯ, ಇಜ್ಯಾ, ಇಲ್ಲಿ ಭಾವಾರ್ಥದೊಳಗೆ ಕ್ಯಪ್-ಪ್ರತ್ಯಯವು

ಸನುಜ್ಯಾ-ನಿಷೆವ್ಯಾ-ಇಲ್ಲಿ ಸಂಜ್ಞೆಯೊಳಗೆಕ್ಯಪ್ ಮಂಡನಾ, ಆಸನಾ ಇಲ್ಲಿ ಭಾವಾರ್ಥದಲ್ಲಿ ಯುಚ್, ಪಚಾ, ಭಿದಾ,ವೃಜಾ,ಇಲ್ಲಿಭಾವಾರ್ಥದೊಳಗೆ, ಅ ಙ್-ಚಿಕೀರ್ಷಾ - ಜಿಹೀರ್ಷಾ-ಇಲ್ಲಿಸನ್ ಪ್ರತ್ಯಯದ ಮೇಲೆ ಭಾವಾರ್ಥದಲ್ಲಿ ಅಪ್ರತ್ಯಯವು- ಕಾಂಕಾರಿಮುಕಾರ್ಷಿಃ - ಇಮಾಂಕಾರಿಮುಕಾರ್ಷಂ - ಇಲ್ಲಿಪ್ರ ಶ್ನಾಖ್ಯಾನಗಳೊಳಗೆಇಞ್-ಜ್ಯಾನಿಃ-ಗ್ಲಾನಿಃ-ಮ್ಲಾನಿಃ-ಇಲ್ಲಿ ಭಾವಾರ್ಥದೊಳ ಗೆನಿಪ್ರತ್ಯಯವು ಶಪ್ರತ್ಯಯಸಂತಕ್ಕೆ-ಕ್ರಿಯಾ-ಇಚ್ಛಾ-ಇತ್ಯಾದಿಗಳು.

ಮೂ॥ ಉಣಾದಿಷುನಿರೂರೀಶ್ಚ.

ಟೀ॥ ಉಣಾದಿಗಳಲ್ಲಿ ನಿ -ಊ- ಈ ಎಂಬುವ ಈ ೩ ಪ್ರತ್ಯಯಗಳು ಅಂ ತವಾಗಿ ಉಳ್ಳಶಬ್ದಗಳು ಸ್ತ್ರೀಲಿಂಗದಲ್ಲಿವರ್ತಿಸುವವು*ಉದಾಹರಣಗಳು*ನಿ ಪ್ರತ್ಯಯಕ್ಕೆ-ಶ್ರೇಣಿಃ-ಶ್ರೋಣಿಃ-ಊಪ್ರತ್ಯಯಕ್ಕೆ, ಖರ್ಜೂಃ-ಕಂಡೂಃ-ಚ ಮೂಃ-ಈಪ್ರತ್ಯಯಕ್ಕೆ, ತಂದ್ರೀಃ-ಲಕ್ಷ್ಮೀಃ-ಇತ್ಯಾದಿಗಳು. ಅಗ್ನಿ- ವಹ್ನಿ- ಯೋನಿ-ಘೂರ್ಣಿ ಶಬ್ದಗಳು ನಿಪ್ರತ್ಯಯಾಂತಗಳಾದಾಗ್ಯೂ ಪುಂಸ್ಯಾ ಘೂರ್ಣಿ ಇತ್ಯಾದಿ ವಿಶೇಷ ವಿಧಿಯಿಂದ ಬಾಧಿಸಲ್ಪಟ್ಟು ಸ್ತ್ರೀಲಿಂಗವಲ್ಲ.

ಮೂ॥ ಟ್ಯಾಬಾಬಂತಂಚಲಂಸ್ಥಿರಂ॥೪೪೦॥

ಟೀ॥ ಟೀ ಅಂದರೆ-ಟೀಪ್-ಟೀಷ್-ಟೀನ್-ಎಂಬುವಪ್ರತ್ಯಯಗಳೂ ಆಪ್- ಅಂದರೆ-ಟಾಪ-ಡಾಪ-ಚಾಪ್- ಎಂಬುವಪ್ರತ್ಯಯಗಳೂ-ಈ-೬- ಊಜ್- ಎಂ ಬುವಪ್ರತ್ಯಯವು-ಅಂತವಾಗಿಉಳ್ಳಶಬ್ದಗಳುಚಲಂ-ವಿಶೇಷ್ಯನಿಘ್ನಗಳಾದವುಗ ಳು,ಸ್ಥಿರಂ-ನಿಯತಲಿಂಗಗಳಾದವುಗಳೂಸಹ ಸ್ತ್ರೀ*ಉದಾಹರಣ*ವಿಶೇಷ್ಯನಿ ಘ್ನಗಳಾದ-ಟ್ಯಂತಗಳಿಗೆ- ಪುಂಸಃ-ಇಯಂ-ಪಾಸ್ನೀ-ಉಪಗೋರಿಯಂ- ಔಪಗ ವೀ- ನಿಯತಲಿಂಗಗಳಾದ-ಟೀಬಂತಗಳಿಗೆಕರಿಣೀ-ಕರ್ತ್ರೀ-ಈಬಳಟೀಪ್-ದಾ ಕ್ಷಾಯಣೀ-ಗೌರೀಈಬಳ, ಟೀಷ್-ಶಾರ್ಙ್ಗರವೀ-ಬೈದೀ-ಈಬಳ-ಟೀನ್-ಆ ಜಾ-ಏಡಕಾ-ರಮಾ-ಈಬಳ-ಟಾಪ್-ಸುರಾಚಾ-ಬಹುಸೀಮಾ-ಈಬಳ-ಡಾಪ್ ಕಾರೀಷಗಂಧ್ಯಾ-ಪಾಲಾಡ್ಯಾ-ಈಬಳ-ಚಾಪ-ರಂಭೋರೂಃ-ಈಬಳ-ಊಙ್

ಮೂ॥ ತಕ್ರೀಡಾಯಾಂಪ್ರಹರಣಂಚೇನ್ಮೌಷ್ಟಾಪಾಲ್ಲವಾಣದಿಕ।

ಟೀ॥ ತತ-ಅನುಷ್ಟಿಪಲ್ಲವಾದಿಗಳು-ಕ್ರೀಡಾಯಾಂ-ಈಕ್ರೀಡೆಯಲ್ಲಿ,ಪ್ರಹ ರಣಂಚೇತ್-ಆಯುಧವಾಯಿತೆಂಬ ಅರ್ಥದಲ್ಲಿ ವಿಧಿಸಲ್ಪಟ್ಟ-ಣ-ಣಪ್ರತ್ಯಯಾಂ ತಶಬ್ದಗಳು- ಸ್ತ್ರೀಲಿಂಗದಲ್ಲಿವರ್ತಿಸುವವು*ಉದಾಹರಣಗಳು* ಮುಷ್ಟಿಃಪ್ರ ಹರಣಮಸ್ಯಾಂಕ್ರೀಡಾಯಾಂ-ಮೌಷ್ಟಾ-ಈಪ್ರಕಾರವೇಪಾಲ್ಲವಾ-ದಿಕ- ಅಂ ದದ್ದರಿಂದ ದಾಂಡಾದಿಗಳು ತಿಳಿಯತಕ್ಕದ್ದು

ಮೂ॥ ಘಞಾಲ್ಲಸ್ಯಾಕ್ರಿಯಾಯಾಂಚೇದಾಂಡಪಾತಾಹಿಪಾಲ್ಲುನೀ॥



ಶ್ಯೇನಂಪಾತಾಹಿಮ್ಯಾಗಯಾತ್ಕೈಲಂಪಾತಾಸ್ನಣದಿಕ।

ಟೀ॥ ಸಾಕ್ರಿಯಾ-ಆದಂಡಪಾತಾದಿಕ್ರಿಯೆಯು-ಅಸ್ಯಾಂಚೇತ್- ಈಫಾಲ್ಗುನ್ಯಾದಿಗಳಲ್ಲು ಉಂಟಾಯಿತೆಂಬುವ ಅರ್ಥದಲ್ಲಿ-ಘಞಃ-ಘಞಂತದಮೇಲೆವಿಧಿಸಲ್ಪಟ್ಟ-ಞಃ-ಞಪ್ರತ್ಯಯಾಂತಗಳು-ಸ್ತ್ರೀ-*ಉದಾಹರಣೆಗಳು*ದಂಡಪಾತೋಸ್ಯಾಂಫಾಲ್ಗುನ್ಯಾಮಿತಿದಾಂಡಪಾತಾಫಾಲ್ಗುನೀ-ಶ್ಯೇನಪಾತೋಸ್ಯಾಂಮೃಗಯಾಯಾಮಿತಿಶ್ಯೈನಂ-ಪಾತಾಮೃಗಯಾ-ತಿಲಪಾತೋಸ್ಯಾಂಸ್ವಧಾಯಾಮಿತಿತೈಲಂ, ಪಾತಾಸ್ವಧಾ-ದಿಕ್ಶಬ್ದದಿಂದ ಮೌಸಲಪಾತಾದಿಗಳೂ ಈ ಪ್ರಕಾರವೇ ತಿಳಿಯತಕ್ಕವಾಗಿವೆ.

ಮೂ॥ ಸ್ತ್ರೀಸ್ಯಾತ್ಕಾಚಿನ್ಮೃಣಾಳ್ಯಾದಿರ್ವಿವಕ್ಷಾಪಚಯೇಯದಿ॥೪೪೦॥

ಟೀ॥ ಅಲ್ಪಾರ್ಥದಲ್ಲಿ ವಿವಕ್ಷೆಯುಂಟಾದ ಹಾಗಾದರೆ ಮೃಣಾಳೀ ಶಬ್ದವು ಮೊದಲಾದಕೆಲವುಶಬ್ದಗಳು ಸ್ತ್ರೀಲಿಂಗಗಳಾಗುವವು*ಉದಾಹರಣೆ* ಅಲ್ಪಂ ಮೃಣಾಳಂ-ಮೃಣಾಳೀ, ಅಲ್ಪೋಘಟಃ-ಘಟೀ,ಈಪ್ರಕಾರವೆ,ಶಸ್ತ್ರೀ- ಪಿಪಾಣೀ-ಪೇಠೀ-ಖರ್ಜೂರೀ-ಎಂಬುವವು ಮೊದಲಾಗಿ ತಿಳಿಯತಕ್ಕದ್ದು, ಕೆಲವು ಎಂದದ್ದರಿಂದ, ಅಲ್ಪೋವೃಕ್ಷಃ-ವೃಕ್ಷಕಃ-ಇತ್ಯಾದಿಗಳುಸ್ತ್ರೀಲಿಂಗಗಳಲ್ಲ,;ಈಬಳಿ ಕೆಲವರು ಅಪಚಯವೆಂದರೆ ಸ್ತ್ರೀತ್ವವೆಂದುಹೇಳಿ ಸ್ತ್ರೀತ್ವ ವಿವಕ್ಷೆಯಲ್ಲಿ ಮೃಣಾಳ್ಯಾದಿ ಶಬ್ದಗಳು ಸ್ತ್ರೀಲಿಂಗಗಳೆಂಬುವರು.

ಅವತರಣಿಕೆ॥ಈಪ್ರಕಾರವಾಗಿ ಲಕ್ಷಣದಿಂದ ಲಿಂಗನಿರ್ಣಯವನ್ನ ಹೇಳಿ-ಇನ್ನುಮೇಲೆ ಕಕಾರಾಂತಾದಿ ಕ್ರಮದಿಂದ ಲಿಂಗನಿರ್ಣಯವನ್ನ ಹೇಳುತ್ತಾನೆ, ಹ್ಯಾಗೆಂದರೆ.

ಮೂ॥ ಲಂಕಾಶೇಫಾಲಿಕಾಟೀಕಾಧಾತಕೀಪಂಚಿಕಾಢಕೀ । ಸಿಧ್ರಕಾಶಾರಿಕಾಹಿಕ್ಕಾಪ್ರಾಚಿಕೋಲ್ಕಾಪಿಪೀಲಿಕಾ ॥೪೪೧॥ ತಿಂದುಕೀಕಣಿಕಾಭಂಗೀಸುರಂಗಾಸೂಚಿಮಾಚಯಃ। ಪಿಚ್ಛಾವಿತಂಡಾಕಾಕಣ್ಯಾಕ್ಷೂರ್ಣಾಕ್ಷ್ಣಾ ಸ್ಥೂಣಾದ್ರುಣೀವರತ ॥೪೪೨॥ ನಾತಿಃಶೇಫಾಕಥಾಸಂಧಿರ್ನಾಭೀರಾಜಸಭಾಪಿಕ । ಝಲ್ಲರೀಚರ್ಚರೀಪಾರೀಹೋರಾಲಟ್ವಾಚಸಿಧ್ಮಲಾ ॥೪೪೩॥ ಲಾಕ್ಷಾಲಿಕ್ಷಾಚಗಂಡೂಷಾಗೃಧ್ರಸೀಚಮಸೀಮಸೀ॥ ಇತಿ ಸ್ತ್ರೀಲಿಂಗಶೇಷಃ.

ಟೀ॥ ಲಂಕಾಶಬ್ದವುಮೊದಲು ಮಸೀಶಬ್ದದ ಪರಿಯಂತವೂ ೬೩ ಶಬ್ದಗಳು ಸ್ತ್ರೀಲಿಂಗಗಳು. ಈಶಬ್ದಗಳಿಗೆ ಅರ್ಥವು ಲಂಕಾ-ರಾವಣನಪಟ್ಟಣವು,ಶೆಫಾಲಿಕಾ-ಲಕ್ಕಿಗಿಡ,ಟೀಕಾ-ವ್ಯಾಖ್ಯಾನಗ್ರಂಥವು,ಧಾತಕೀ-ಅರೇಗಿಡ,ಪಂಚಿಕಾ-ವ್ಯಾಖ್ಯಾನ ಗ್ರಂಥವಿಶೇಷವು, ಆಢಕೀ - ತುವರಿಮುಂಣು, ಸಿಧ್ರಕಾ-ಬಿಲ್ವಮರ, ಶಾರಿಕಾ-ಗೊರವಂಕೇ ಹಕ್ಕಿ, ಹಿಕ್ಕಾ - ಬಿಕ್ಕಳಿಕೆ, ಪ್ರಾಚಿಕಾ-ಕಾಡುನೊಣ, ಉಲ್ಕಾ-ಕೊಳ್ಳಿ, ಪಿಪೀಲಿಕಾ-ಇರುವೆ, ತಿಂದುಕಿ - ತುಂಬರಿಗಿಡ,ಕಣಿಕಾ - ಧಾನ್ಯವಿಶೇಷವು, ವ್ರೀಹಿ ವಿಶೇಷವು,ಗೋಧುವೆ ಹಿಟ್ಟು.

ದು ಕೆಲವರು, ಭಂಗೀ-ರಚನಾ ಪ್ರಕಾರವು, ಸುರಂಗಾ-ಕನ್ನವು, ಸೂಚಿಃ-ಸೂಚಿ, ಮೋಚಿಃ-ದೇಶ ವಿಶೇಷವು, ಪಿಟ್ಠ-ಗಂಟೆ, ಬೂರಗಬಿಂಕೆ, ವಿತಂಡಾ-ಸ್ವಪಕ್ಷಸ್ಥಾಪನೆ ವಿಲ್ಲದವಾದವು, ಕಾಕಿಣೀ-ಕರ್ಷತೂಕದಲ್ಲಿ ನಾಲ್ಕನೇಪಾಲು, ಪಣದಲ್ಲಿ ನಾಲ್ಕನೇ ಪಾಲೆಂದು ಕೆಲವರು, ಚೂರ್ಣಿಃ - ಭಾಷ್ಯವು, ಶಾಣೀ-ಸಾಣೆ, ದ್ರೂಣೀ-ಕಿವೀ ಹೊಗುವ ಹಾವು, ಆವೆಯೆಂದುಕೆಲವರು, ದರತ್-ವಿಷಹುಟ್ಟುವ ದೇಶ, ಬರಿಯೆಂದು ಕೆಲವರು, ಸಾತಿಃ-ದಾನವು, ತೀವ್ರವೇದನೆಯೆಂದು ಕೆಲವರು. ಕಂಥಾ-ಬೊಂತೆ, ಕಥಾ-ಚರಿತ್ರೆ, ಆಸಂದೀ-ಹಸೆಯು ಮನೆ, ಶವವಾಹನವೆಂದು ಕೆಲವರು, ನಾಭೀ-ಹೊಕ್ಕುಳು, ರಾಜಸಭಾ-ಅರಸಿನ ಊಳಿಗದ ಸ್ಥಳ, ಝಲ್ಲರೀ-ವಾದ್ಯವಿಶೇಷವು, ಚರ್ಚರೀ-ನೃತ್ತವಿಶೇಷವು, ಪಾರಿ- ಪಾಲು ಕರಿಯುವ ಮಡಿಕೆ, ಹೋರಾ-ಲಗ್ನಾರ್ಧವು, ಲಟ್ವಾ- ಹಿಟ್ಟಿನ ಗುಬ್ಬಚ್ಚಿ, ಸಿಧ್ಮಲಾ-ಪೂತಿಮತ್ಸ್ಯಪ್ರಷ್ಠೋದನು, ಸಿಬ್ಬೆನ್ತುಂಟಾದ್ದು, ಲಾಕ್ಷಾ-ಅರಗು, ಲಿಕ್ಷಾ-ಹೇನು, ಗಂಡೂಷಾ-ಮುಕ್ಕಳಿಸುವಿಕೆ, ಗೃಧ್ರಸೀ-ನಡುವಿನವಾಯು ನೋವು, ಚಮಸೀ-ಸೋಮಪಾನಪಾತ್ರ, ಮಸೀ-ಮಸಿ, ಕಪ್ಪು.

ಅಥಪುಲ್ಲಿಂಗಶೇಷಃ.

ಮೂ॥ ಪುಂಸ್ತ್ವೇ

ಟೀ॥ ಮುಂದೆ ನಪುಂಸಕಲಿಂಗಗಳನ್ನು ಆರಂಭಿಸುವವರಿವಿಗೂ ಹೇಳಲ್ಪಡುವ ಶಬ್ದಗಳು ಪುಲ್ಲಿಂಗದಲ್ಲಿ ವರ್ತಿಸುವವೆಂದು ತಿಳಿಯತಕ್ಕದ್ದು ಹ್ಯಾಗೆಂದರೆ.

ಮೂ॥ ಸಭೇದಾನುಚರಾಸ್ಸಪರ್ಯಾಯಾಸ್ಸುರಾಸುರಾಃ॥೪೪೬॥

ಟೀ॥ ಸಪರ್ಯಾಯಾಃ-ಅಮರ ನಿರ್ಜರಾದಿ ಪರ್ಯಾಯಗಳ ಸಂಗಡಲೂ, ದೈತ್ಯದೈತೆಯಾದಿ ಪರ್ಯಾಯಗಳ ಸಂಗಡಲೂ ಕೂಡಿಕೊಂಡಿದ್ದ, ಸುರಾಸುರಾಃ-ಸುರಶಬ್ದವೂ, ಅಸುರಶಬ್ದವೂ, ಸಭೇದಾನುಚರಾಃ-ತಮ್ಮ ತಮ್ಮೊಳಗೆ ವಿಶೇಷಗಳಾದ ಇಂದ್ರಾಗ್ನ್ಯಾದಿದೇವತೆಗಳ ಹೆಸರುಗಳಿಂದಲೂ, ತಮ್ಮ ತಂ ಮನುಚರರಾದ ಹಾಹಾಹೂಹೂ-ಮಾತರ ಪಿಂಗಳಾದಿಗಳ ಹೆಸರುಗಳಿಂದಲೂ ಚಂಡ ಮುಂಡ ಪ್ರಹಸ್ತಾದಿಗಳ ಹೆಸರುಗಳಿಂದಲೂ ಕೂಡಾ ಪುಲ್ಲಿಂಗಗಳಾಗುವವು, ಈ ಶಬ್ದಗಳಲ್ಲಿ ಯಾವದಕ್ಕಾದರೂ ಲಿಂಗವು ವಿಶೇಷವಾಗಿ ವಿಧಿಸಿಯಿದ್ದ ಕಡೆ ಈ ವಿಧಿಯು ಪ್ರವರ್ತಿಸಲಾರದೆಂದು ತಿಳಿಯಬೇಕು.

ಉದಾಹರಣೆ* ದೇವತಾಯಾಂ ಎಂಬುವ ವಿಶೇಷವಿಧಿ ಇರುವದ್ದರಿಂದ ಸುರ ಪರ್ಯಾಯವಾದ ದೇವತಾಶಬ್ದವು ಪುಲ್ಲಿಂಗವಲ್ಲ.

ಮೂ॥ ಸ್ವರ್ಗಯಾಗಾದ್ರಿಮೇಘಾಬ್ಧಿದ್ರುಕಲಾಸಿಶರಾರಯಃ।



ಕರಗಂಡೌಷ್ಠದೋರ್ದಂತಕಂಠಕೇಶನಖಸ್ತನಾಃ ॥೪೪೭॥

ಟೀ॥ ಸ್ವರ್ಗಃ-ಸ್ವರ್ಗವು, ಯಾಗಃ-ಯಜ್ಞವು, ಅದ್ರಿಃ-ಪರ್ವತವು,ಮೇಘಃ-ಮೇಘವು, ಅಬ್ಧಿಃ-ಸಮುದ್ರವು, ದ್ರುಃ-ವೃಕ್ಷವು, ಕಾಲಃ-ಕಾಲವು, ಅಸಿಃ-ಖಡ್ಗವು, ಶರಃ-ಬಾಣವು, ಅರಿಃ-ಶತ್ರುವು, ಕರಃ-ಹಸ್ತವು, ಕಾಂತಿಯು, ಕಿರಣವು, ಗಂಡಃ-ಕಪೋಲವು, ಓಷ್ಠಃ-ಅಧರವು, ದೋಃ-ಬಾಹುವು, ದಂತಃ-ಹಲ್ಲು, ಕಂಠಃ-ಕೊರಳು, ಕೇಶಃ-ಕೇಶಗಳು, ನಖಃ-ಉಗುರುಗಳು, ಸ್ತನಃ-ಸ್ತನಗಳು, ಈ ೧೦ ವಸ್ತುವುಗಳ ಹೆಸರುಗಳು. ಸಂಭವಿಸಿದ ಸ್ಥಳದಲ್ಲಿ ಇವುಗಳ ವಿಶೇಷಗಳ ಹೆಸರು, ಪು-ಇವುಗಳಲ್ಲಿ ಯಾವದಕ್ಕೆ ವಿಶೇಷವುಂಟೊ ಆಬಳಿ ಈ ವಿಧಿಯು ಪ್ರವರ್ತಿಸುವದಿಲ್ಲ. ಅದು ಹೇಗೆಂದರೆ,—ಸ್ವರ್ಗವಾಚಕಗಳಾದ ದ್ಯೋದಿವ್ ಶಬ್ದಗಳು ವೃಕ್ಷವಿಶೇಷವಾಚಕಗಳಾದ ಹರಿಚಂದನ ಶಿಂಶುಪಾಶಬ್ದಗಳು, ಕಾಲವಿಶೇಷ ವಾಚಕಗಳಾದ ತಿಥಿ ಪ್ರತಿಪದಾದಿಗಳೂ, ಬಾಣವಾಚಕವಾದ ಇಷುಶಬ್ದವು,ಕಿರಣವಾಚಕಗಳಾದ ದೀಧಿತ್ಯಾದಿಗಳೂ, ಓಷ್ಠವಾಚಕ ದಶನವಾಸಶ್ಶಬ್ದವು,ಬಾಹುವಾಚಕಗಳಾದ ಭುಜ ಬಾಹುಶಬ್ದಗಳು ದಂತ ವಿಶೇಷವಾಚಕಗಳಾದ ದಂಷ್ಟ್ರಾಶೀರ್ಷಿಪಾಣ ಶಬ್ದಗಳೂ ಕೇಶ ವಿಶೇಷವಾಚಕಗಳಾದ ಜಟಾಸಟಾಶಬ್ದಗಳೂ ನಖವಾಚಕಗಳಾದ ನಖ ನಖರಶಬ್ದಗಳೂ ವಿಶೇಷವಿಧಿ ಯುಂಟಾಗಿವೆ ಯಾದ್ದರಿಂದ ಅಲ್ಲಿ ಈವಿಧಿ ಪ್ರವರ್ತಿಸುವದಿಲ್ಲ.

ಮೂ॥ ಅಹ್ನಾಹಾಂತಾಃ

ಟೀ॥ ಅಹ್ನಾಂತಗಳಾದ ಪೂರ್ವಾಹ್ಣಾ ಪರಾಹ್ಣಾದಿಶಬ್ದಗಳೂ, ಅಹಾಂತಗಳಾದ ದ್ವ್ಯಹತ್ರ್ಯಹಾದಿಶಬ್ದಗಳೂ, ಪು, ಅತ್ಯಹ್ನೆ ಭೋಜನಂ, ನಿರಹ್ನೋವೇಳಾಯಂಬುವ ಸ್ಥಳಗಳಲ್ಲಿ ಅನ್ಯಪದಾರ್ಥವು ನಪುಂಸಕವಾದರೂ, ಸ್ತ್ರೀಲಿಂಗವಾದರೂ ಅಹ್ನಾಂತ ಶಬ್ದಗಳು ಪುಲ್ಲಿಂಗಗಳೇಯೆಂದು ಕೆಲವರು ಹೇಳುವರು.

ಮೂ॥ ಕ್ಷ್ವೇಳಭಿದಾ

ಟೀ॥ ವಿಷವಿಶೇಷವಾಚಕಗಳಾದ ಸೌರಾಷ್ಟ್ರಿಕ, ಶೌಕ್ತಿಕೇಯಾದಿ ಶಬ್ದಗಳು, ಪು, ಕಾಕೋಲಕಾಲಕೂಟಾದಿ ಶಬ್ದಗಳಿಗೆ ವಿಶೇಷವಿಧಿ ಯಿಲ್ಲದ್ದರಿಂದ ಅಲ್ಲಿ ಈ ವಿಧಿ ಪ್ರವರ್ತಿಸುವದಿಲ್ಲ.

ಮೂ॥ ರಾತ್ರಾಂತಾಪ್ರಾಗಸಂಖ್ಯಕಾಃ।

ಟೀ॥ ಪ್ರಾಗಸಂಖ್ಯಕಾಃ- ಸಂಖ್ಯಾಪೂರ್ವಪದಗಳಾದರೂ,ರಾತ್ರಾಂತಾಃ-ರಾತ್ರಾಂತಗಳಾದ, ಪೂರ್ವರಾತ್ರ, ಅರ್ಧರಾತ್ರಾದಿ ಶಬ್ದಗಳು, ಪು- ರಾತ್ರಾಂತಗಳಾದರೂ ಸಮಾಹಾರದಲ್ಲಿ ಅಹೋರಾತ್ರಂ ಎಂದು ನಪುಂಸಕವೂ ಉಂಟು, ಅತಿರಾತ್ರಃ ಎಂಬುವಸ್ಥಳದಲ್ಲಿ ಅನ್ಯಪದಾರ್ಥ ಭಿನ್ನಲಿಂಗವಾದರು ಪು

ಲ್ಲಿಂಗವೆಂದು ಕೆಲವರು, ಸಂಖ್ಯಾಪೂರ್ವಪದವಾದರೆ ಗಣರಾತ್ರಂ ಪಂಚರಾತ್ರಂ ಎಂದು ನಪುಂಸಕಲಿಂಗ.

ಮೂ॥ ಶ್ರೀವೇಷ್ಟಾದ್ಯಾಶ್ಚ ನಿರ್ಯಾಸಾ

ಟೀ॥ ಶ್ರೀವೇಷ್ಟಃ-ಶ್ರೀವಾಸಃ-ಸರಳದ್ರವಃ - ಎಂಬುವೆವು ಮೊದಲಾದ, ನಿರ್ಯಾಸಾಃ-ಮರದ ಬೊಂಕೆಯು ಹೆಸರುಗಳು ಪುಲ್ಲಿಂಗಗಳು.

ಮೂ॥ ಅಸನ್ನಂತಾಅಬಾಧಿತಾಃ ॥೪೪೮॥

ಟೀ॥ ಅಬಾಧಿತಾಃ-ವಿಶೇಷ ವಿಧಿಗಳಿಂದ ಬಾಧಿಸಲ್ಪಡದ ಅಸನ್ನಂತಾಃ-ಅಂಗಿರಸ್-ಪುರೋಧಸ್-ಮೊದಲಾದ ಅಸಂತಗಳೂ, ಸುಪರ್ವನ್-ಪ್ಲೀಹನ್-ಮೊದಲಾದ ಅನ್ನಂತಗಳೂ, ಪು. ಅಬಾಧಿತಾಃ- ಎಂದದ್ದರಿಂದ, ಯಶಸ್-ಪಯಸ್-ನಾಮನ್-ಎಂಬುವ ಸ್ಥಳಗಳಲ್ಲಿ, ಈ ವಿಧಿಪ್ರವರ್ತಿಸುವದಿಲ್ಲ.

ಮೂ॥ ಕಶೇರುಜತುವಸ್ತೂನಿಹಿತ್ವಾತುರುವಿರಾಮಕಾಃ।

ಟೀ॥ ಕಶೇರು-ಜತು-ವಸ್ತು ಎಂಬುವಶಬ್ದಗಳನ್ನು, ಹಿತ್ವಾ-ಬಿಟ್ಟು ಬಿಟ್ಟು, ತುರುವಿರಾಮಕಾಃ-ತು ಎಂಬುವವರ್ಣವು ಅಂತವಾಗಿ ವುಳ್ಳ,ಹೇತುಃ-ಸೇತುಃ-ಮೊದಲಾದ ಶಬ್ದಗಳೂ, ರು-ಎಂಬುವ ವರ್ಣವು ಅಂತವಾಗಿವುಳ್ಳ, ಚರುಃ-ಗುರುಃ-ಮೊದಲಾದ ಶಬ್ದಗಳೂ -ಪು- ಕಶೇರುಜತುವಸ್ತು ಶಬ್ದಗಳಾದರೋ ನಪುಂಸಕಗಳು, ಇದು ಉಪಲಕ್ಷಣವಾದ್ದರಿಂದ ದಾರು ಶ್ಮಶ್ರು-ಅಶ್ರು-ಕುಸ್ತುಂಬರು- ಮಸ್ತು ಎಂಬುವ ಶಬ್ದಗಳೂ ನಪುಂಸಕಗಳೇ ಆಗಿವೆ.

ಮೂ॥ ಕಷಣಭಮರೋಪಾಂತಾಯದ್ಯದಂತಾಅಮಾಅಥ॥
ಪಥನಯಸಟೋಪಾಂತಾ

ಟೀ॥ ಕ, ಷ, ಣ, ಭ, ಮ, ರ, ಪ, ಥ, ನ, ಯ, ಸ, ಟ, ಈ ೧೨ ವರ್ಣಗಳು ಉಪಾಂತಗಳಾಗಿಯೂ, ಅಕಾರಾಂತವಾಗಿಯೂ, ಉಂಟಾದ ಶಬ್ದಗಳು-ಪು-ಕ್ರಮವಾಗಿ ಉದಾಹರಣೆಗಳು* ಅರ್ಕಃ-ಸ್ಫಟಿಕಃ-ವೃಷಃ-ನಿಕಷಃ-ಗಣಃ-ಗುಣಃ-ಕುಂಭಃ-ಕಲಭಃ-ವ್ಯಾಮಃ--ಗ್ರಾಮಃ-ಹಾರಃ - ಸಾರಃ-ಧೂಪಃ-ಸೂಪಃ-ಅರ್ಥಃ-ಶಪಥಃ-ಸ್ತನಃ-ಜನಃ-ಕುಲಾಯಃ-ತಂತುವಾಯಃ ರಸಃ-ದಾಸಃ-ಘಟಃ-ಪಟಃ - ಇತ್ಯಾದಿಗಳು -ಪು- ಭೂಷಣಾದಿಗಳಿಗೆ ವಿಶೇಷವಿಧಿಯಿಂದ ನಪುಂಸಕಲಿಂಗ.

ಮೂ॥ ಗೋತ್ರಾಖ್ಯಾಶ್ಚರಣಾಃ ಪ್ರಯಾಃ।

ಟೀ॥ ಗಾರ್ಗ್ಯಃ-ವಾಸಿಷ್ಠಃ ಎಂಬುವವು ಮೊದಲಾದ ಗೋತ್ರಾಪತ್ಯಗಳನ್ನು ಹೇಳುವ ಹೆಸರುಗಳೂ-ಕಠಃ-ಬಹ್ವೃಚಃ - ಛಂದೋಗಃ-ಎಂಬುವವು ಮೊದಲಾದವೇದಶಾಖಾಧ್ಯೇತೃಗಳ ಹೆಸರುಗಳು, ಪುಲ್ಲಿಂಗಗಳು.

 ॥೪೫೦॥

ಮೂ॥ ನಾಮ್ನ್ಯಕರ್ತರಿಭಾವೇತುಘಞಜಪ್ನಘಞಾಪಾ

ಟೀ॥ ನಾಮ್ನಿ-ಸಂಜ್ಞೆಯಲ್ಲಿಯೂ,ಅಕರ್ತರಿ-ಕರ್ತೃವ್ಯತಿರಿಕ್ತ ಕಾರಕದ ಲ್ಲಿಯೂ,ಭಾವೇಚ-ಧಾತ್ವರ್ಥಮಾತ್ರದಲ್ಲಿಯೂ, ಯಥಾಸಂಭವವಾಗಿವಿಧಿಸಲ್ಪ ಟ್ಟ-ಘಞ್-ಅಚ್-ಅಪ್-ನ್ಣ-ಣ-ಘ- ಅಥುಚ್-ಎಂಬುವ-ಈ೭-ಪ್ರತ್ಯಯಗಳು- ಅಂತವಾಗಿವುಳ್ಳಶಬ್ದಗಳೂ-ವಿಶೇಷವಿಧಿಯಿಲ್ಲದಕಡೆ- ಪು- *ಉದಾಹರಣ ಗಳು* ಸಂಜ್ಞೆಯಲ್ಲೆ ಘಞ್ಗೆ,ಪಾದಃ, ರೋಗಃ, ವೇಶಃ-ಕರ್ತೃವ್ಯತಿರಿಕ್ತ ಕಾ ರಕದಲ್ಲಿ ಘಞ್ಗೆ-ಪ ಕ್ರಿಯತಇತಿ ಪ್ರಕಾರಃ-ಪ್ರಸೀದಂತ್ಯಸ್ಮಿನ್ನಿತಿಪ್ರಸಾದಃ- ಶಕ್ಯತೆ ನೆನೇತಿರಾಗಃ-ಭಾವಾರ್ಥದಲ್ಲಿ ಘಞ್ಗೆ, ತ್ಯಾಗಃ - ಭೋಗಃ-ಅಚ್ಪ್ರ ತ್ಯಯಕ್ಕೆ ನಯಃ-ಜಯಃ-ಚಯಃ-ಅಪ್ಪ್ರತ್ಯಯಕ್ಕೆ ಕರಃ-ಗರಃ-ಲವಃ-ನಙ್ ಪ್ರತ್ಯಯಕೆ ಯಜ್ಞಃ-ಯತ್ನಃ-ಣಪ್ರತ್ಯಯಕ್ಕೆ ಸ್ಯಾದಃ-ಘ- ಪ್ರತ್ಯಯಕ್ಕೆ ಉರಚ್ಛದಃ-ದಂತಚ್ಛದಃ-ಅಥುಚ್ ಪ್ರತ್ಯಯಕ್ಕೆ ಶ್ವಯಥುಃ - ವೇಪಥುಃ, ಇ ತ್ಯಾದಿಗಳು.

ಮೂ॥ ಲ್ಯುಃಕರ್ತರೀ

ಟೀ॥ ಕರ್ತರಿ-ಕರ್ತ್ರರ್ಥದಲ್ಲಿ ವಿಧಿಸಲ್ಪಟ್ಟಲ್ಯುಃ--ಲ್ಯುಪ್ರತ್ಯಯಾಂತಗ ಳಾದ, ನಂದನಃ, ರಮಣಃ, ದಹನಃ, ಎಂಬುವು ಮೊದಲಾದ ಶಬ್ದಗಳು,ಪು.

ಮೂ॥ ಮನಿಜ್ಭಾವೆ

ಟೀ॥ ಭಾವೆ-ಭಾವಾರ್ಥದಲ್ಲಿ ವಿಧಿಸಲ್ಪಟ್ಟ ಇಮನಿಚ್ - ಇಮನಿಚ್ಪ್ರತ್ಯ ಯಾಂತಗಳಾದ ಪ ಥಿಮಾ, ಗರಿಮಾ, ಲಘಿಮಾ, ಎಂಬುವವು ಮೊದಲಾದ ಶಬ್ದಗಳು ಪುಲ್ಲಿಂಗಗಳು.

ಮೂ॥ ಕೋಘೋಃಕಿಃಪ್ರಾದಿತೋಸ್ಯತಃ।

ಟೀ॥ ಕಃ-ಭಾವಾರ್ಥದಲ್ಲಿ ವಿಧಿಲಸ್ಪಟ್ಟ ಕ ಪ್ರತ್ಯಯಾಂತಗಳಾದ, ಪ್ರ ಸ್ಥಃ, ವಿಘ್ನಃ, ಆಖೂತ್ಥಃ-ಶೈನೊತ್ಥಃ, ಎಂಬವವು ಮೊದಲಾದ ಶಬ್ದಗಳೂ, ಪ್ರಾದಿತಃ-ಪ್ರ, ಪರ, ಎಂಬವುಗಳು ಮೊದಲಾದ ಉಪಸರ್ಗ ಗಳಿಗಿಂತಲೂ, ಅನ್ಯತಃ-ಬೇರೆಯಾದ ಸುಬಂತವನ್ನ ಕರ್ಮಪದದರ್ಪಾಗವುಳ್ಳ, ಘೋಃ- ಘು ಸಂಜ್ಞಕ ಧಾತುವಿನ ಮೇಲೆ ಅಧಿಕಾರಣಾರ್ಥದಲ್ಲಿ ವಿಧಿಸಲ್ಪಟ್ಟ,ಕಿಃ-ಕಿಪ್ರತ್ಯ ಯಾಂತಗಳಾದ, ಅಂಬುಧಿಃ - ಇಷುಧಿಃ-ಎಂಬವವು ಮೊದಲಾದ ಶಬ್ದಗಳು ಪುಲ್ಲಿಂಗಗಳು.

ಮೂ॥ ದ್ವಂದ್ವೇಶ್ವಬಡಬಾವಶ್ವಬಡಬಾನಸಮಾಹೃತೆ॥೪೫೧॥

ಟೀ॥ ಸಮಾಹಾರವ್ಯತಿರಿಕ್ತವಾದ ಅಶ್ವಬಡಬಾ ಎಂಬುವದ್ವಂದ್ವ ಸಮಾ ಸರೂಪವಾದಶಬ್ದವು-ಪು-ಈ ಬಳಿ(ಪೂರ್ವವದಶ್ವಬಡಬೌ)ಎಂಬುವಸೂತ್ರ ದಲ್ಲಿದ್ವಿವಚನವು ವಿವಕ್ಷಿತ ವಲ್ಲವೆಂದು ತಿಳಿಯ ಮಾಡುವದಕ್ಕಾಗಿ ಅಶ್ವಬಡ ಬಾಃಎಂದು ಬಹುವಚನಾನ್ತ ಪ್ರಯೋಗಿಸಿದ್ದಾನೆ,ಸಮಾಹಾರದಲ್ಲಿ ನ-ಪು-

ಮೂ॥ ಕಾಂತಸ್ಸೂರ್ಯೇಂದುಪರ್ಯಾಯಪೂರ್ವೋಯಃಪೂರ್ವಕೋಪಿಚ।

ಟೀ॥ ಸೂರ್ಯಪರ್ಯಾಯಶಬ್ದಗಳೂ ಚಂದ್ರಪರ್ಯಾಯ ಶಬ್ದಗಳೂ ಅಯ ಶಬ್ದವೂ ಪೂರ್ವಗಳಾಗಿಉಂಟಾದರೆ ಕಾಂತ ಶಬ್ದವು-ಪು-ಉದಾಹರಣಗಳು* ಸೂರ್ಯಕಾಂತಃ, ರವಿಕಾಂತಃ, ಇಂದುಕಾಂತಃ, ಚಂದ್ರಕಾಂತಃ,ಅಯಸ್ಕಾಂತಃ, ಅಪಿಚ ಅಂದದ್ದರಿಂದ ಲೋಹಕಾಂತ ಶಬ್ದವೂ ಪುಲ್ಲಿಂಗವೆಂದು ಕೆಲವರು ಹೇಳಿದರು.

ಅವತರಣಿಕೆ॥ ಇನ್ನುಮೇಲೆ ಕೆಲವು ಪುಲ್ಲಿಂಗಗಳನ್ನು ಕಕಾರಾಂತಾದಿಕ್ರಮದಿಂದ ಹೇಳುತ್ತಾನೆ.

ಮೂ॥ ವಟಕಶ್ಚಾನುವಾಕಶ್ಚ ರಲ್ಲಕಶ್ಚ ಕುಡುಂಗಕಃ । ಪುಂಖೋನ್ಯೂಂಖಸಮುದ್ಗಶ್ಚ ವಿಟಪಟ್ಟಘಟಾಃಖಟಃ । ಕೊಟ್ಟಾರಘಟ್ಟಹಟ್ಟಾಶ್ಚ ಪಿಂಡಗೋಂಡಪಿಚಂಡವತ್ ॥ ಗಡುಃಕರಂಡೋಲಗುಡೋವರಂಡಶ್ಚ ಕಿಣೋಘೃಣಿಃ । ದೃತಿಸೀಮಂತಹರಿತಾರೋಮಂಥೋದ್ಗೀಥಬುದ್ಬುದಾಃ ॥ ಕಾಸಮರ್ದೋರ್ಬುದಃ ಕುಂದಃಫೇನಸ್ತೂಪಾಸಯೂಪಕಾ । ಆತಪಃಕ್ಷತ್ರಿಯೋನಾಭಿಃಕಣಯಃಪ್ರತರಕೇದರಾಃ ॥೪೬॥ಪೂರಕ್ಷುರಪ್ರಚುಕ್ಕಾಶ್ಚ ಗೋಲಹಿಂಗುಲಪುದ್ಗಲಾಃ। ವತಾಳಮಲ್ಲಭಲ್ಲಾಶ್ಚ ಪುರೋಡಾಶೋಪಿಪಟ್ಟಸಃ॥೪೬॥ಕುಲ್ಮಾಷೋರಭಸಶ್ಚೈವಸ ಕಟಾಹಃಪತದ್ಗ್ರಹಃ।

ಟೀ॥ ವಟಕಶಬ್ದವು ಮೊದಲುಗೊಂಡು ಪತದ್ಗ್ರಹಶಬ್ದದ ಪರಿಯಂತರವೂ ಆದಶಬ್ದಗಳು ಎಲ್ಲವೂ-ಪು-ಈ ಶಬ್ದಗಳಲ್ಲಿ ಕೆಲವಕ್ಕೆ ಅರ್ಥವು,ಕುಡುಂಗಕಃ-ಪೊದೆ, ನ್ಯೂಂಖಃ-ನಿರಂತರವಾಗಿ ಉಚ್ಚರಿಸಿದ ಆರು ಓಂಕಾರಗಳು, ಘಟಃ-ತಕ್ಕಡಿ, ಖಟಃ-ತೃಣವಿಶೇಷವು, ಕೊಟ್ಟಃ-ದುರ್ಗವು, ಆರಘಟ್ಟಃ-- ದೊಡ್ಡಭಾವಿ, ಹಟ್ಟಃ-ಅಂಗಡೀಬೀದಿ, ಗೋಂಡಃ-ದೇಶವಿಶೇಷವು, ವರಂಡಃ, ಮುಖಗೋಗವು, ಧೃತಿಃ-ತೊಗಲುಚೀಲ, ಉದ್ಗೀಥಃ-ಸಾಮವೇದ ಪ್ರಣವ ವು, ಕಾಸಮರ್ದಃ-ಸಸುಗುಂನಿ, ಸ್ತೂಪಃ-ಮಣ್ಣು ಮೊದಲಾದವುಗಳ ದಿಂಬೆ, ಕಣಯಃ-ಆಯುಧ ವಿಶೇಷವು, ಕೇದರಃ-ವೃಕ್ಷ ವಿಶೇಷವು, ಪಶುವಿಶೇಷವು, ಹಿಂಗುಳಃ-ಇಂಗಳೀಕವು, ಪುದ್ಗಲಃ-ಜೀವನು, ಪರಮಾಣುವು, ಕುಲ್ಮಾಸಃ-ಅರ್ಧಪಕ್ವಗಳಾದ ಮುದ್ಗಗೋಧೂಮಾದಿಗಳು.

ಇತಿಪುಲ್ಲಿಂಗಶೇಷಃ.

ಮೂ॥ ನಪುಂಸಕೇನ್ಯ

ಟೀ॥ ಅನ್ಯೇ-ಸ್ತ್ರೀಲಿಂಗ ಪುಲ್ಲಿಂಗಗಳಿಗಿಂತ ಪ್ರತ್ಯೇಕವಾದ ಮುಂದೆ ಹೇಳಲ್ಪಡುವ ಶಬ್ದರೂಪಗಳೆಲ್ಲವೂ ನಪುಂಸಕದಲ್ಲಿ ವರ್ತಿಸುವದು, ತೃತೀಯೈಕ್ಯ ಎಂಬುವ ಪಾಠದಲ್ಲಿಯು ಇದೇ ಅರ್ಥ ಹೇಳಲ್ಪಟ್ಟಿದ್ದಾಗಾಯಿತು. ಸ್ಯಾತ್ ಹಿ.

ಮೂ॥ ತ್ವಾಬ್ರಣ್ಯಪರ್ಣಶ್ವಭ್ರಹಿಮೋದಕಂ ॥೪೫೭॥ ಶೀತೋಷ್ಣಮಾಂಸರುಧಿರಮುಖಾಕ್ಷಿದ್ರವಿಣಂಬಲಂ। ಫಲಹೇಮಶುಲ್ಬಲೋಹಸುಖದುಃಖಶುಭಾಶುಭಂ ॥೪೫೮॥ ಜಲಪುಷ್ಪಾಣಿಲವಣಂವ್ಯಂಜನಾನ್ಯನುಲೇಪನಂ।

ಟೀ॥ ಖಂ-ಆಕಾಶವು, ಇಂದ್ರಿಯವು, ಈ ಆಕಾಶಾದಿ ವಸ್ತುಗಳ ಹೆಸರುಗಳು ಸಂಭವಿಸಿದ ಸ್ಥಳದಲ್ಲಿ ಇವುಗಳ ವಿಶೇಷಗಳ ಹೆಸರುಗಳೂ ವಿಶೇಷವಿಧಿಯಿಂದ ಬಾಧಿತಗಳಾಗದಂಥಾವಾಗಿದ್ದರೆ ನಪುಂಸಕಲಿಂಗವು.

ಮೂ॥ ಭಯಾಮೃತಶಕೃದ್ವಸ್ತ್ರಚಾಪಾಭರಣಲಾಂಛನಂ ॥೪೫೯॥ ದಾರ್ವ್ವೌಷಧಮೃಧಾಪತ್ಯಹೃದಯೋದರಕಾಕುದಂ । ಪತ್ತನಾಜಿರಶೃಂಗಾರ್ಮದ್ವಾರಬರ್ಹಿರ್ಡುಮಾನಸಂ ॥೪೬೦॥ ಧ್ವಾಂತಂಚಾ

ಟೀ॥ ಈ ಯೆರಡುಶ್ಲೋಕಗಳು ಅಧಿಕಗಳು ಆದರೆ ಇವುಗಳಿಗೆ ಕೆಲವರು ವ್ಯಾಖ್ಯಾನಮಾಡಿದರು, ಅದಕ್ಕೆ ಅರ್ಥವೇನಂದರೆ, ಭಯವು ಮೊದಲಾದ ಎಲ್ಲಾ ವಸ್ತುವುಗಳ ಹೆಸರುಗಳು ವಿಶೇಷವಿಧಿಯಿಂದ ಬಾಧಿಸಲ್ಪಡದೇಯಿದ್ದಗೆ ನಪುಂಸಕ ಲಿಂಗಗಳಾಗುತ್ತವೆ.

ಮೂ॥ ವ್ಯಕ್ತಲಿಂಗಸ್ಯಭಣಿತೌಯತ್ಪ್ರಯುಜ್ಯತೇ।

ಟೀ॥ ಅವ್ಯಕ್ತಲಿಂಗಸ್ಯ-ಸ್ತ್ರೀಯೆಂದಾಗಲೀ ಪುರುಷನೆಂದಾಗಲಿ ತಿಳಿಯಲ್ಪಡದ ವಸ್ತುವಿನ, ಭಣಿತೌ- ಹೇಳುವದರಲ್ಲಿ, ಯತ್ಪ್ರಯುಜ್ಯತೆ- ಯಾವಶಬ್ದವು ಪ್ರಯೋಗಿಸಲ್ಪಡುತ್ತೊ ಅದು ನ-ಉ*ಸ್ತ್ರೀವಾಪುಮಾನ್ವಾಕಿಂತಸ್ಯಜಾತಂತದ್ಬ್ರೂಹಿಪಂಡಿತ।

ಮೂ॥ ಕೋಟ್ಯಾಶ್ಶತಾದಿಸಂಖ್ಯಾನ್ಯಾ

ಟೀ॥ ಕೋಟಿಗಿಂತಲೂ ಇತರವಾದ ಶತಸಹಸ್ರದಿ ಸಂಖ್ಯಾ ವಾಚಕಶಬ್ದಗಳಲ್ಲಿ ವಿಶೇಷವಿಧಿ ಇಲ್ಲದ್ದು ನಪುಂಸಕಲಿಂಗವು, ಕೋಟಿಶಬ್ದವು ಸ್ತ್ರೀಲಿಂಗ

ಮೂ॥ ವಾಲಕ್ಷಾನಿಯುತಂಚತತ್ ॥೪೬೧॥

ಟೀ॥ ಲಕ್ಷಶಬ್ದವು ವಿಕಲ್ಪವಾಗಿ -ನ-ಪಕ್ಷದಲ್ಲಿ ಸ್ತ್ರೀ-ಆಲಕ್ಷವೇ ನಿಯುತವೆನ್ನಿಸಿಕೊಳ್ಳುವದು.

ಮೂ॥ ದ್ವ್ಯಚ್ಕಮಸಿಸುಸನ್ನಂತಂ

ಟೀ॥ ಎರಡು ಅಚ್ಚುಗಳುಳ್ಳ ಅಸ-ಇಸ-ಉಸ-ಅನ್-ಎಂಬವುಗಳು ಅಂತವಾಗಿ ಉಳ್ಳಶಬ್ದಗಳು -ನ- (ಉದಾಹರಣಗಳು) ಅಸಂತಕ್ಕೆ-ಸರ್ಪಿಸ- ಇಸಂತಕ್ಕೆ ಹವಿಸ-ಉಸಂತಕ್ಕೆ-ವಪುಸ-ಧನುಸ- ಅನ್ನಂತಕ್ಕೆ-ನಾಮನ್-ರೋಮನ್-ಇತ್ಯಾದಿಗಳು.

ಮೂ॥ ಯದನಾಂತಮಕರ್ತರಿ।



ಟೀ॥ ಕರ್ತ್ರರ್ಥವ್ಯತಿರಿಕ್ತಗಳಾದ ಕರಣಾಧಿಕರಣ ಭಾವಾದ್ಯರ್ಥಗಳ

ಲ್ಲಿ ವಿಧಿಸಲ್ಪಟ್ಟ-ಲ್ಯುಟ ಪ್ರತ್ಯಯವು ಮೊದಲಾದ ಪ್ರತ್ಯಯಗಳಿಗೆಆದೇಶವಾದ ಅನ ಎಂಬುವದು ಅಂತವಾಗಿವುಳ್ಳ ಶಬ್ದಗಳು -ನ-ಕರಣಾರ್ಥದಲ್ಲಿ ಸಾಧ್ಯತೇನೇನೇತಿ ಸಾಧನಂ, ಅಧಿಕರಣಾರ್ಥದಲ್ಲಿ ಆಧಿಕ್ರಿಯತೆಸ್ಮಿನ್ನಿತಿಅಧಿಕರಣಂ, ಭಾವಾರ್ಥದಲ್ಲಿ ಪಚನಂ ಇತ್ಯಾದಿಗಳು. (ಉದಾಹರಣಗಳು)

ಮೂ॥ ತ್ರಾಂತಂಸಲೋಪಧಂಶಿಷ್ಟಂ

ಟೀ॥ ತ್ರಾಂತಂ-ತ್ರ ಎಂಬುವ ಅಕ್ಷರವುಅಂತವಾಗಿವುಳ್ಳ ಪತ್ರ-ಗಾತ್ರಕಳತ್ರಾದಿಶಬ್ದಗಳು ಸಲೋಪಧಂ ಲಕಾರೋಪಧಗಳಾದಕುಲ-ಫಲ- ಜಲಾದಿ ಶಬ್ದಗಳು ಶಿಷ್ಟಂ-ವಿಶೇಷವಿಧಿಬಾಧಿತಗಳಲ್ಲದಂಥಾವು,ನ- ಕೆಲವರು, ಸಲೋಪಧ ಎಂಬುವಂಥಾದ್ದಕ್ಕೆ ಸಕಾರೋಪಧಗಳು ಲಕಾರೋಪಧಗಳು ಎಂದು ಅರ್ಥವಂ ಹೇಳಿ,ಯವಸ, ಬಿಸಾದಿಗಳು, ನ ಎಂಬುವರು, ಕೆಲವರು ತ್ರಾಂತಂ- ಸನೋಪಧಂ ಯೆಂದು ಪಾಠವಂ ಹೇಳಿ ಕೇವಲ ತ್ರಾಂತಗಳಾದ ಪಾತ್ರ, ಕಳತ್ರಾದಿಗಳು ಸಕಾರೋಪಧಗಳಾಗಿ ತ್ರಾಂತಗಳಾದ ವಸ್ತ್ರ ಶಸ್ತ್ರಾದಿಗಳು ನಕಾರೋಪಧಗಳಾಗಿ ತ್ರಾಂತಗಳಾದ ಆಂತ್ರ- ತಂತ್ರಾದಿಗಳು -ನ-ಈ ಮೇರೆ ಹೇಳುವರು.

ಮೂ॥ ರಾತ್ರಂಪ್ರಾಕ್ಸಂಖ್ಯಯಾನ್ವಿತಂ ॥೪೬೦॥

ಟೀ॥ ಸಂಖ್ಯಾವಾಚಕವಾದ ಪೂರ್ವಪದದೊಡನೆ ಕೂಡಿದ ರಾತ್ರಶಬ್ದವು-ನ- (ಉದಾಹರಣಗಳು) ಗಣರಾತ್ರಂ-ತ್ರಿರಾತ್ರಂ ಇತ್ಯಾದಿಗಳು.

ಮೂ॥ ಪಾತ್ರಾದ್ಯದಂತೈರೇಕಾರ್ಥೋದ್ವಿಗುರ್ಲಕ್ಷ್ಯಾನುಸಾರತಃ।

ಟೀ॥ ಪಾತ್ರಶಬ್ದವು ಮೊದಲಾಗಿವುಳ್ಳ ಅಕಾರಾಂತಗಳಾದ ಉತ್ತರಪದಗಳ ಸಂಗಡ ಕೂಡಿದ್ದಾಗಿ, ಏಕಾರ್ಥಃ-ಸಮಾಹಾರಾರ್ಥದಲ್ಲಿ ವರ್ತಿಸಿದ ದ್ವಿಗುಸಮಾಸವು, ಲಕ್ಷ್ಯಾನುಸಾರತಃ-ಪ್ರಯೋಗಾನುಸಾರದಿಂದ,ನ-(ಉದಾಹರ್ಯಾ)ಪಂಚಪಾತ್ರಂ-ತ್ರಿಭುವನಂ-ಚತುರ್ಯುಗಂ-ಇತ್ಯಾದಿಗಳು.

ಮೂ॥ ದ್ವಂದ್ವೈಕತ್ವಾವ್ಯಯೀಭಾವೌ

ಟೀ॥ ದ್ವಂದ್ವೈಕತ್ವ-ಸಮಾಹಾರಾರ್ಥದಲ್ಲಿ ವರ್ತಿಸಿದದ್ವಂದ್ವಸಮಾಸವು ಅವ್ಯಯೀಭಾವ ಸಮಾಸವೂ-ನ-(ಉದಾಹರಣಗಳು) ಸಮಾಹಾರ ದ್ವಂದ್ವಕ್ಕೆ, ಪಾಣಿಪಾದಂ-ಅಶ್ವಬಲೀವರ್ದಂ-ಅವ್ಯಯೀಭಾವಕ್ಕೆ ಉಪಕುಂಭಂ- ಯಥಾವಿಧಿ ಇತ್ಯಾದಿಗಳು.

ಮೂ॥ ಪಥಸ್ಸಂಖ್ಯಾವ್ಯಯಾತ್ಪರಃ ।

ಟೀ॥ ಸಂಖ್ಯಾ-ಸಂಖ್ಯೆಯನ್ನು ಹೇಳುವ ಶಬ್ದಗಳು,ಅವ್ಯಯ-ಅವ್ಯಯಪದಗಳು, ಇವುಗಳಿಗಿಂತಾ ಪ್ರತ್ಯೇಕವಾಗಿ, ಕೃತಸಮಾಸಾಂತವಾದ ಪಥ ಶಬ್ದವು ವಿಶೇಷವಿಧಿ ಬಾಧಿತವಲ್ಲದಂಥಾದ್ದು, ನ -(ಉ॥ ಸಂಖ್ಯಾಪೂರ್ವಕ್ಕೆ ತ್ರಿ

ಪಥಂ-ಚಕ್ರುಪ್ಪಥಂ-ಅನ್ಯಯ. ಪೂರ್ವಕ್ಕೆ ವಿಪಥಂ-ದುಷ್ಪಥಂ-ಇತ್ಯಾದಿಗಳು.

ಮೂ॥ ಷಷ್ಠ್ಯಾಃ ಛಾಯಾಬಹೂನಾಂಬಹೂನಾಂಚೆದ್ವಿಚ್ಛಾಯಂ

ಟೀ॥ ಷಷ್ಠ್ಯಾಃ-ಎಂಬುವ ಪದವು ಕಂಥೋಶೀನರನಾಮಸು ಎಂಬು ವಪರಿಯಂತವೂ, ಅನುವರ್ತಿಸುವದು,ಷಷ್ಠ್ಯಂತಕ್ಕಿಂತಲೂ ಪರವಾದ ಛಾಯಾಶಬ್ದವು ಅಂತವಾಗಿವುಳ್ಳ ತತ್ಪುರುಷ ಸಮಾಸವು, ಆಛಾಯೆಯು ಬಹು ವಸ್ತುವುಗಳ ಸಂಬಂಧಿಯಾದರೆ -ನ-ವಿಚ್ಛಾಯಂ ಎಂಬುವದು(ಉದಾಹರಣ) ವೀನಾಂಪಕ್ಷಿಣಾಂಛಾಯಾ-ವಿಚ್ಛಾಯಂ ಎಂದು ವಿಗ್ರಹವು.

ಮೂ॥ ಸಂಹತೌ ಸಭಾ। ಶಾಲಾರ್ಥಾಪಿಪರಾರಾಜಾಮನುಷ್ಯಾರ್ಥಾ ದರಾಜಕಾತ ॥೪೬೪॥ ದಾಸೀಸಭಂನೃಪಸಭಂರಕ್ಷಸ್ಸಭಮಿಮಾದಿಶಃ ।

ಟೀ॥ಷಷ್ಠ್ಯಂತಕ್ಕಿಂತಲೂ ಪರವಾಗಿ, ಸಂಹತೌಗಭಾ-ಸಮೂಹಾರ್ಥದಲ್ಲಿ ವರ್ತಿಸಿದ ಸಭಾಶಬ್ದವು ಅಂತವಾಗಿವುಳ್ಳ ತತ್ಪುರುಷ ಸಮಾಸವು -ನ- ಷಷ್ಠ್ಯಂತಗಳಾಗಿ ರಾಜಶಬ್ದ ವ್ಯತಿರಿಕ್ತಗಳಾದ ರಾಜ ಪರ್ಯಾಯಗಳಿಗಿಂತಲೂ, ಅಮನುಷ್ಯಾರ್ಥವೆಂದರೆ ರಕ್ಷಃಪಿಶಾಚಾದಿವಾಚಕಗಳು ಅವುಗಳಿಗಿಂತಲೂ ಪರವಾಗಿ ಶಾಲಾರ್ಥಕವಾದಸಭಾಶಬ್ದವು ಅಂತವಾಗಿವುಳ್ಳ ತತ್ಪುರುಷಸಮಾಸವು-ನ-ದಾಸೀಸಭವೆಂಬುವದು ಮೊದಲು-೩-ಕ್ರಮವಾಗಿ(ಉದಾಹರಣಗಳು) ಇಮಾದಿಶಃ-ಅಂದದ್ದರಿಂದ ಈ ಪ್ರಕಾರವೇ ಉದಾಹರಣಾಂತರಗಳನ್ನೂ ತಿಳಿಯಬೇಕು.

ಮೂ॥ ಉಪಜ್ಞೋಪಕ್ರಮಾಂತಶ್ಚ ತದಾದಿತ್ವಪ್ರಕಾಶನೆ ॥೪೬೫॥ ಕೋಪಜ್ಞಕೋಪಕ್ರಮಾದಿ

ಟೀ॥ ಒಬ್ಬರು ಹೇಳದೆ ತನ್ನಿಂದಲೇ ತಿಳಿಯಲ್ಪಟ್ಟವಸ್ತುವು ಉಪಜ್ಞಾ ಎನ್ನಲ್ಪಡುವದು, ಒಬ್ಬರೂ ಹೇಳದೇ ತನ್ನಿಂದಲೇ ಆರಂಭಿಸಲ್ಪಟ್ಟ ವಸ್ತುವು ಉಪಕ್ರಮ ವೆನ್ನಲ್ಪಡುವದು, ಇಂಥಾ-ಉಪಜ್ಞೋಪ ಕ್ರಮಶಬ್ದಗಳು ಅಂತಗಳಾಗಿವುಳ್ಳ ಷಷ್ಠೀತತ್ಪುರುಷಸಮಾಸಗಳು,ತದಾದಿತ್ವಪ್ರಕಾಶನೆ- ಆ ಉಪಜ್ಞೋಪಕ್ರಮಗಳಿಗೆ ಮೊದಲು ತೋರುವಾಗ-ನ-ಇದಕ್ಕೆ ( ಉದಾಹರಣಗಳು) ಕೋಪಜ್ಞಂ-ಕೋಪಕ್ರಮಂ-ಈಬಳ ಕಸ್ಯಉಪಜ್ಞಾ ಕೋಪಜ್ಞಂ-ಕಸ್ಯಉಪಕ್ರಮಃ-ಕೋಪಕ್ರಮಂ, ಎಂದು ವಿಗ್ರಹಗಳು,ಇದಕ್ಕೆ-ಕ- ಅಂದರೆ ಬ್ರಹ್ಮ, ಆತನಿಂದ ಒಬ್ಬರೂ ಹೇಳದೆ ಮೊದಲು ತಿಳಿಯಲ್ಪಟ್ಟದ್ದು ಅಂದುನ್ನೂ ಆತನಿಂದ ಒಬ್ಬರೂ ಹೇಳದೆ ಮೊದಲೇ ಆರಂಭಿಸಲ್ಪಟ್ಟದ್ದು ಎಂತಲೂ ಅರ್ಥವು, ಆ ಎಕ್ಕ ಕ್ರಮವಾಗಿ ವೇದವೂ ಸರ್ಗವೂ ವಿಶೇಷ್ಯಗಳು ಆದಿ ಶಬ್ದದಿಂದ ಪ್ರಾಚೇತಸೋಪಜ್ಞಂ ರಾಮಾಯಣಂ-ಇತ್ಯಾದಿಗಳನ್ನೂ ತಿಳಿಯಬೇಕು.

ಅಂದದ್ದಂ ॥೪೭೩॥ ತನ್ನೊಕ್ತಮಿಹಲ್ಪಸು।

ಟೀ॥ ಅರ್ಥರ್ಚಾದಿಗಣದಲ್ಲಿ ಪ್ರೃತ್ಯುಪಯುಕವಾದಾಗ, ಕಂಥಾ ಶಪ್ರಿ ಹೇಳಲ್ಪಡುವದೂ ಅದುಸಿಕ್ಷ ಯ ಸಮಾಸವ್ಯಾಸ-(ಉದಾಹರಣಗಳು). ಳಲ್ಪಡಲಿಲ್ಲ. ಲೋಕದಲ್ಲಿಯೂ ಆಷ್ಪರಕಂಥಂ ಇತ್ಯಾದಿಗಳು. ರ ಶೇಷದಹಾಗೆ ಆಗಲಿ ಅಬ್ಬ್ಯಸ್ಯೆ ಸಮೂಹ ಭಾವಕರ್ಮಣೋಃ। ದು ಮುಂದೆ ಹೇಳುಕ್ತಿಯಾಃ

ಟ್ಟು ಹೇಳಿದ ನಾಬ್ಯಃ-ನಪ್ರತ್ಯಯ, ಣಪ್ರತ್ಯಯ, ಕಪ್ರತ್ಯಯ, ಚಕಾರತ್ಪ್ರತ್ಯಯಂಗಿಂತಲೂ, ಅನ್ಯೆ-ಇತರಗಳಾದ ಭಾವೆ-ಧಾತ್ವರ್ಥದಲ್ಲಿ ವಿಧಿಸಲ್ಪಟ್ಟ ಕೃತ್ಪ್ರತ್ಯಯಗಳು ಸಮೂಹಾರ್ಥದಲ್ಲಿಯೂಭಾವಕರ್ಮಾರ್ಥದಲ್ಲಿಯೂ ವಿಧಿಸಲ್ಪಟ್ಟ ಅದಂತಪ್ರತ್ಯಯಾಃ-ಅಕಾರಾಂತತದ್ಧಿತ ಪ್ರತ್ಯಯಗಳೂ ಅಂತವಾಗಿವುಳ್ಳ ಶಬ್ದಗಳು-ನ-( ಉದಾಹರಣಗಳು) ಕೃತ್ಪ್ರತ್ಯಯಗಳಿಗೆ ಭಾವಾರ್ಥದಲ್ಲಿ ವಸ್ತವ್ಯಂ-ಈ ಬಳಿ ತವ್ಯಪ್ರತ್ಯಯವು ಚೆಯಂ-ಈಬಳಿ ಯತ- ಬ್ರಹ್ಮಭೂಯಂ-ಈಬಳಿ-ಕ್ಯಪ್-ಸಾಂರಾವಿಣಂವರ್ತತೆ ಈಬಳಿ-ಇನುಣ್- ಅಕಾರಾಂತ ತದ್ಧಿತಗಳಿಗೆ -ಸಮೂಹಾರ್ಥದಲ್ಲಿಭಿಕ್ಷಾಣಾಂ ಸಮೂಹೋಭೈಕ್ಷಂ-ಗಾರ್ಭಿಣ್ಯಂ-ಯೌವತಂ, ಈಬಳಿ-ಅಣ ಭಾವಕರ್ಮಾರ್ಥಗಳಲ್ಲಿ ಶುಕ್ಲಸ್ಯಭಾವಃ ಕರ್ಮವಾಶೌಕ್ಲ್ಯಂ, ಬ್ರಾಹ್ಮಣ್ಯಂ-ಈಬಳಿ ಷ್ಯಞ್-ಯತ್ನಃ- ಸ್ಥಾದಃ-ಅಖಾತ್ಥಃ-ಜಯಃ- ಇವುಮೊದಲಾದ ನಣಕಚಿಪ್ರ್ಯಯಾಂತಗಳಾದರೆ, ಪು-

ಮೂ॥ ಪುಣ್ಯಸುದಿನಾಭ್ಯಾಂತ್ವಹಃಪರಂ।

ಟೀ॥ ಪುಣ್ಯಸುದಿನ ಶಬ್ದಗಳಿಗಿಂತಲೂ ಪರವಾಗಿರುವ ಕೃತಸಮಾಸಾಂತವಾದ ಅಹಶ್ಶಬ್ದವು ನ-ಉದಾಹರಣಗಳು). ಪುಣ್ಯಾಹಂ-ಸುದಿನಾಹಂ-ಈಬಳಿ ಸುದಿನಶಬ್ದವು ಶೋಭನಮಾತ್ರವಾಚಕವು,

ಮೂ॥ ಕ್ರಿಯಾವ್ಯಯಾನಾಂಭೆದಕಾನ್ಯೆಕತ್ವೆಪ್ಯ

ಟೀ॥ ಕ್ರಿಯಾವ್ಯಯಾನಾಂ-ಕ್ರಿಯೆಗಳಿಗೂ ಅವ್ಯಯಗಳಿಗೂ ಭೇದಕಾನಿ-ವಿಶೇಷಣಗಳಾದ ಶಬ್ದಗಳು -ನ-ಅವು ಏಕತ್ವೇಪಿ ಅಂದದ್ದರಿಂದ ಏಕವಚನಾಂತಗಳು (ಉದಾಹರಣಗಳು) ಕ್ರಿಯಾವಿಶೇಷಣಗಳಿಗೆ ಮಂದಂ ಪಚತಿ, ಮೃದುಪಚತಿ-ಅವ್ಯಯವಿಶೇಷಣಗಳಿಗೆ ಸ್ವಶ್ಶೋಭನಂ-ಶ್ವೋ ರಮಣೀಯಂ, ಇತ್ಯಾದಿಗಳು.

ಅವತರಣಿಕೆ॥ ಇನ್ನು ನಪುಂಸಕಗಳನ್ನ ಸರ್ವ ರೂಪಗಳಿಂದಲೂ ತೋರಿಸುತ್ತಾನೆ.

ಮೂ॥ ಕೃತೇೋಟಕೆ ॥೪೭೭॥ ಕೋಕಂಬರ್ಸಂಗ್ರಹಸ್ಥಾಣಂತಿರೀಟಂ ಮರ್ಮಯೋಜನಂ । ರಾಜಸೂಯಾದಿಮನಾಸೂಕ ಸ್ಯಾಷ್ಟಾದ್ಯನೀಕಕಾ॥

ಮಾಣಿಕ್ಯಭಾಷ್ಯಸಿಂಧೂಯು ಪೂರ್ವಕ್ಕೆ ವಿಪಥಂ-ದುಷ್ಪಥಂ-ಇತ್ಯಾದಿಗಳು.
ಲಂವಿದಲಂಸ್ಥಲಬಾಹ್ಲೀಕಂ॥ಶಿರಾಯಾಬಹೂನಾಂಚೆದ್ವಿಜಿಜ್ಞಾಯಂ

ಟೀ॥ ಉಕ್ತಶಬ್ದನುವೊದಲಾದನು ಕಂಥೋಶೀನರನಾಮಸು ಎಂಬು ಬ್ದಗಳು-ನ-ಇವುಗಳಲ್ಲಿ ಕೆಲವಕ್ಕೆ ಅಥವಸ್ತ್ವಂತಕ್ಕಿಂತಲೂ ಪರವಾದ ಛಾ ತೋಟಕಂ-ವೃತ್ತವಿಶೇಷವು, ತಿರೀಟಂ-ತಿರಸ್ಕಾಸನು, ಅಭಾಯೆಯು ಬಹು ರ್ವ್ವಕಶಾಸ್ತ್ರ, ದಳಂ-ದಾಳಿಂಬೆಬೀಜ, ಕೆಲವರು ಎಂಬುವದು(ಉದಾಹರಣ ಬೇಳೆ ಯೆಂಬುವರು, ಸ್ಥಾಲಂ-ಭೋಜನಪಾತ್ರ. ನನು.

ಇತಿ ನಪುಂಸಕಲಿಂಗಶೇಷಃ. ಕಾಮನ

ಮೂ॥ ಪುನ್ನಪುಂಸಕಯೋಃ

ಟೀ॥ ಈಪದನು ಸ್ತ್ರೀಪುಂಸಾಧಿಕಾರದ ಪರಿವಿಗೂ ಅನುವರ್ತಿಸುವದು.

ಮೂ॥ ಶೇಷೊ

ಟೀ॥ ಶೇಷಃ-ಪುನ್ನಪುಂಸಕ ವಿವರಣಗಳಲ್ಲಿ ಹೇಳಲ್ಪಡುವ ಅರ್ಧರ್ಚಾ ದಿಶಬ್ದಗಳು ಪ್ನ.

ಮೂ॥ ರ್ಧರ್ಚಪಿಣ್ಯಾಕಕಂಟಕಾಃ । ಮೊದಕಸ್ತಂಡಕಷ್ಟಂಕಶ್ಶಾ ಟಕಃಖರ್ವಟೊರ್ಬ್ಬುದಃ ॥ ಪಾತಕೊದ್ಯೋಗಚರಕತಮೂಲಾಮುಲಕಾನಷಃ। ಕುಷ್ಣಂಮುಂಡಂಶೀಥುಪುಸ್ತಂಕ್ಷ್ವೇಡಿತಂಕ್ಷೇಮಕುಟ್ಟಿಮಂ॥೪೭॥ ಸಂಗಮಂ ಶತಮಾನಾರ್ಮಶಂಬಲಾವ್ಯಯತಾಂಡವಂ । ಕವಿಕಂಕಂದಕಾರ್ಪಾಸಂಪಾರಾ ವಾರಂಯುಗಂಧರಂ॥ ಪೂಯಂಪ್ರಗ್ರೀವಪಾತ್ರೀದಯೂಷಂ ಚಮಸಿಚಿಕ್ಕಸೆ।

ಟೀ॥ ಇದರಲ್ಲಿ ಕೆಲವಕ್ಕೆ ಅರ್ಥವು, ತಂಡಕಃ-ಭೂಷಣವು, ಪಾ-ದಂಡ ಕಃ-ಶಾಟಕಃ-ಅಲ್ಪವಸ್ತ್ರವು, ಖರ್ವಟಃ-ಗ್ರಾಮಶತಮಧ್ಯದಲ್ಲಿರುವ ಪ್ರಧಾನ ಗ್ರಾಮವು, ಪಾ-ಉಪಗ್ರಾಮ, ಪಾ-ಕಂಟಕಾವೃತಗ್ರಾಮವು;ಪಾ-ಕರ್ಪಟಃ- ಚಿಕ್ಕಪಂಚೆ, ಚರಕಂ-ವೈದ್ಯಗ್ರಂಥ, ಪುಸ್ತಂ-ಪೂಸುವದು ಮೊದಲಾದ ಕ್ರಿ ಯೆ, ಪುಸ್ತಕವು ಪಾ-ಬುಸ್ತಂ-ಮಾಂಸವಿಶೇಷವು, ಶತಮಾನಂ-ಹಲತೂಕ ಬೆ ಳ್ಳಿ ಕೊಳಗದ ಧಾನ್ಯಮೊದಲಾದವುಗಳೆಂದು ಕೆಲವರು, ಅರ್ಮ-ನೇತ್ರರೋ ಗವು, ನಕಾರಾಂತವು;ಅಕಾರಾಂತವೆಂದು ಕೆಲವರು, ಶಂಬಲಂ-ಶಂಬಳವು, ಅ ವ್ಯಯಂ-ಅವ್ಯಯಶಬ್ದಗಳು, ಕವಿಕಂ-ಪಾ-ಕವಿಯಂ,ಪಾ-ಕಲೀಯ್ಯಂ- ಕಡಿ ವಾಣ, ಯುಗಂಧರಂ ರಥದನೊಗ, ಪರ್ವತ ವಿಶೇಷವೆಂದು ಕೆಲವರು, ಪೂ ಯಂ - ಕೀವು, ಪ್ರಗ್ರೀವಂ-ಗವಾಕ್ಷ, ಮದನ ಕೈಗಳೆಂದು ಕೆಲವರು ಪಾತ್ರೀ ವಂ- ಯಜ್ಞೋಪಕರಣವು, ಯೂಷಂ-ಹೆಸರು ಮೊದಲಾದವುಗಳ ಕಟ್ಟು, ಚಮಸಂ-ಯಜ್ಞಪಾತ್ರ, ಚಿಕ್ಕಸಂ-ಯವಾದಿಗಳ ಪಿಷ್ಟವು.

ಮೂ॥ ಅರ್ಧರ್ಚಾದಿಷ್ಟುತಾದೀನಾಂಪುಂಸ್ತ್ವೇಯುದ್ವ್ಯದಿಕಂಧ್ರು

ಅಂದದ್ವಂ ॥೪೬೩॥ ತನ್ನೊಕ್ತ್ಮಿಹಲೋಕೇಪಿತಚ್ಛೇದಸ್ತ್ಯಸ್ತುಶೇಷವತ॥

ಟೀ॥ ಅರ್ಧರ್ಚಾದಿಗಣದಲ್ಲಿ ಘೃತ ಕ್ಷೀರಾದಿಶಬ್ದಗಳಿಗೆ ಯಾವಪುಲ್ಲಿಂಗವು ಹೇಳಲ್ಪಡುವದೊ ಅದುಶಿಷ್ಟಯವಾಗಿ ವೇದಸಿದ್ಧವಾದದ್ದರಿಂದ ಇಲ್ಲಿ ಹೇಳಲ್ಪಡಲಿಲ್ಲ. ಲೋಕದಲ್ಲಿಯೂ ಆ ಪುಲ್ಲಿಂಗಪ್ರಯೋಗವು ಉಂಟಾದದ್ದಾದರೆ ಶೇಷದಹಾಗೆ ಆಗಲಿ ಅಂದರೆ ಶೇಷಂತುಜ್ಞೇಯಂ ಶಿಷ್ಟಪ್ರಯೋಗತಃ ಎಂದು ಮುಂದೆ ಹೇಳುತಿದ್ದಾನೆಯಾಗಿ ಅಲ್ಲಿ ಶೇಷವೆಂದರೆ ಈ ಶಾಸ್ತ್ರದಲ್ಲಿ ತಾನು ಹೇಳಿದ ನಾಮಲಿಂಗ ನಿರ್ಣಯಗಳು ಅದು ಯಾವಪ್ರಕಾರ ಶಿಷ್ಟ ಪ್ರಯೋಗದಿಂದ ತಿಳಿಯತಕ್ಕದ್ದೊ ಆ ಪ್ರಕಾರವೇ ಇಲ್ಲಿಯೂ ತಿಳಿಯ ತಕ್ಕದ್ದೆಂದು ಅರ್ಥವು.

ಇತಿ ಪುನ್ನಪುಂಸಕಲಿಂಗಶೇಷಃ.

ಮೂ॥ ಸ್ತ್ರೀಪುಂಸಯೊ

ಟೀ॥ ಸ್ತ್ರೀಪುಂಸಯೋಃ- ಎಂಬುವ ಪದವು ಸ್ತ್ರೀನಪುಂಸಕಾಧಿಕಾರದ ವರಿವಿಗೂ ಅನುವರ್ತಿಸುವದು,

ಮೂ॥ ರಪತ್ಯಾಂತಾಃ

ಟೀ॥ ಅಪತ್ಯಾರ್ಥದಲ್ಲಿ ವಿಧಿಸಲ್ಪಟ್ಟ ಅಣ್ ಇಞ್-ಯಞ್‌ವೊದಲಾದಪ್ರತ್ಯಯಗಳು ಅಂತವಾಗಿ ವುಳ್ಳಶಬ್ದಗಳು ಪ್ಸ (ಉದಾಹರಣಗಳು)ಔಪಗವಃ-ಔಪಗವೀ, ದಾಕ್ಷಿಃ-ದಾಕ್ಷಿ, ಗಾರ್ಗ್ಯಃ-ಗಾರ್ಗೀ,

ಮೂ॥ ದ್ವಿಚತುಃಷಟ್ಪದೋರಗಾಃ॥೪೬೪॥ ಜಾತಿಭೇದಾಃ

ಟೀ॥ ದ್ವಿಚತುಷ್ಷಟ್ಪದ ಜಾತಿಗಳನ್ನು ಹೇಳುವ ಶಬ್ದಗಳು ಸರ್ಪ ವಾಚಕಶಬ್ದಗಳೂ ಪುಂಸ್ತ್ರೀ- (ಉದಾಹರಣಗಳು) ದ್ವಿಪದಜಾತಿಗೆ ಪುರುಷಃ-ಪುರುಷೀ, ಕುಕ್ಕುಟಃ-ಕುಕ್ಕುಟೀ, ಚತುಷ್ಪದಜಾತಿಗೆ-ಮೃಗಃ-ಮೃಗೀ, ಷಟ್ಪದಜಾತಿಗೆ, ಭ್ರಮರಃ-ಭ್ರಮರೀ, ಸರ್ಪವಾಚಕಗಳಿಗೆ, ಉರಗಃ-ಉರಗೀ, ದ್ವಿಪದಜಾತಿಗಳಿಗೆ,ಉಪಲಕ್ಷಣವಾದ್ದರಿಂದ ಮತ್ಸ್ಯಃ-ಮತ್ಸೀ,ಇತ್ಯಾದಿ,ಪ್ಸ,

ಮೂ॥ ಪುನಾಮಾಖ್ಯಾಶ್ಚಸ್ತ್ರೀಯೋಗೈಸ್ಸಹ

ಟೀ॥ ಪುನಾಮಾಖ್ಯಾಃ-ಪುರುಷವಾಚಕಗಳಾದ, ಪ್ರಷ್ಠ ಗೋಪಾಲ ಗಣಕಾದಿಶಬ್ದಗಳು ಸ್ತ್ರೀಯೋಗೈಸ್ಸಹ-ಪುರುಷ ಸಂಬಂಧದಿಂದ ಸ್ತ್ರೀಯರನ್ನು ಹೇಳುವ ಪ್ರಷ್ಠೀ, ಗೋಪಾಲೀ, ಗಣಕೀ, ಇತ್ಯಾದಿಶಬ್ದಗಳ ಸಂಗಡ -ಪ್ಸ- ಈಬಳಿ ಮತ್ತೊಂದುವ್ಯಾಖ್ಯಾನವುಸ್ತ್ರೀ-ಸ್ತ್ರೀವ್ಯಕ್ತಿಯೋಗೈಃ- ಪುರುಷಸಂಬಂಧಗಳಿಂದ ಪುನಾಮಾಖ್ಯಾಃ-ಪ್ರಷ್ಠ ಗೋಪಾಲಾದಿ ಪುರುಷ ನಾಮಗಳನ್ನು ಹೊಂದುವದೆಂದು ಈ [illegible] ಪ್ರಷ್ಠ ಗೋಪಾಲಾದಿ ಪ್ರಾತಿಪದಿಕಗಳು, ಪುರುಷರನ್ನೂ ಸ್ತ್ರೀಯರನ್ನೂ ಹೇಳಿ, ದ್ವಿಲಿಂಗಗಳಾ

ಳಿಗೆ, ಅತಿಕ್ರಾಂತಃ-ಖಟ್ವಾಂ-ಅತಿಖಟ್ವಃ-ಪುರುಷಃ-ಅತಿಖಟ್ವಾ-ಸ್ತ್ರೀ- ಅತಿಖಟ್ವಂ-ಕುಲಂ ಇತ್ಯಾದಿಗಳು, ಅಲಂ-ಪೂರ್ವಕ್ಕೆ ಅಲಂಜೀವಿಕಾಯೈ-ಅಲಂಜೀವಿಕಃ- ಅಲಂಜೀವಿಕಾ-ಅಲಂಜೀವಿಕಂ- ಈ ಪ್ರಕಾರವೇ, ಪ್ರಾಪ್ತ ಜೀವಿಕಃ-ಆಪನ್ನಜೀವಿಕಃ ಎಂಬವುಗಳು.

ಮೂ॥ ತದ್ಧಿತಾರ್ಥೇದ್ವಿಗು

ಟೀ॥ ತದ್ಧಿತಾರ್ಥದಲ್ಲಿ ವಿಧಿಸಲ್ಪಟ್ಟ ದ್ವಿಗುಸಮಾಸವು ವಿಶೇಷ್ಯಲಿಂಗವುಳ್ಳಂಥಾದ್ದು (ಉದಾಹರಣೆ) ಪಂಚಸುಕಪಾಲೇಷು ಸಂಸ್ಕೃತಃ-ಪಂಚಕಪಾಲಃ-ಪುರೋಡಾಶಃ-ಪಂಚಕಪಾಲ್ಯಾಯವಾಗೂಃ, ಪಂಚಕಪಾಲಂ ಹವಿಃ.

ಮೂ॥ ಸಂಖ್ಯಾಸರ್ವನಾಮಸುತದಂತಕಾಃ।

ಟೀ॥ ಸಂಖ್ಯಾವಾಚಕಶಬ್ದಗಳು ಸರ್ವನಾಮ ಶಬ್ದಗಳು ಇವು ಅಂತಗಳಾಗಿರುವಶಬ್ದಗಳು ವಿಶೇಷವಿಧಿ ಇಲ್ಲದಂಥಾವು, ವಿಶೇಷ್ಯಲಿಂಗವುಳ್ಳಂಥಾವಾಗುತ್ತವೆ, (ಉದಾಹರಣೆ) ಸಂಖ್ಯಾವಾಚಕಗಳಿಗೆ ಏಕಃ-ಪುರುಷಃ-ಏಕಾ-ಸ್ತ್ರೀ-ಏಕಂ-ಕುಲಂ ಇತ್ಯಾದಿಗಳು. ಸರ್ವನಾಮ ಶಬ್ದಗಳಿಗೆ ಸಃ-ಪುರುಷಃ-ಸಾ-ಸ್ತ್ರೀ-ತತ-ಕುಲಂ-ಇತ್ಯಾದಿಗಳು, ಸಂಖ್ಯಾಂತಗಳಿಗೆ ಪರಮೈಕಃ- ಪರಮೈಕಾ-ಪರಮೈಕಂ-ಇತ್ಯಾದಿಗಳು ಸರ್ವನಾಮಾಂತಗಳಿಗೆ, ಪರಮಸರ್ವಃ-ಪರಮಸರ್ವಾ-ಪರಮಸರ್ವಂ-ಇತ್ಯಾದಿಗಳು.

ಮೂ॥ ಬಹುವ್ರೀಹಿರದಿಙ್ನಾಮ್ನಾಮುನ್ನೇಯಂತದುದಾಹೃತಂ।

ಟೀ॥ ದಿಗ್ವಾಚಕ ಶಬ್ದಗಳಿಗಿಂತಲೂ ಬೇರೆಯಾದ ಶಬ್ದಗಳಿಗೆ ಬಂದಬಹುವ್ರೀಹಿಸಮಾಸವು ವಿಶೇಷ್ಯಲಿಂಗವುಳ್ಳದ್ದಾಗುವದು, ತದುದಾಹೃತಂ- ಅದಕ್ಕೆ (ಉದಾಹರಣವು) ಉನ್ನೇಯಂ-ಊಹಿಸ ತಕ್ಕದ್ದು ಹೇಗೆಂದರೆ, ಚಿತ್ರಾಃಪಟಾ-ಯಸ್ಯ-ಚಿತ್ರಪಟಃ-ಪುರುಷಃ-ಚಿತ್ರಪಟಾ-ಸ್ತ್ರೀ-ಚಿತ್ರಪಟಂ ಕುಲಂ-ಇತ್ಯಾದಿಗಳು.

ಮೂ॥ ಗುಣದ್ರವ್ಯಕ್ರಿಯಾಯೋಗೋಪಾಧಯಃಪರಗಾಮಿನಃ।

ಟೀ॥ ಗುಣವೂ, ದ್ರವ್ಯವೂ, ಕ್ರಿಯೆಯೂ, ಪ್ರವೃತ್ತಿನಿಮಿತ್ತವಾಗಿವುಳ್ಳಶಬ್ದಗಳು, ಪರಗಾಮಿನಃ-ವಿಶೇಷ್ಯಲಿಂಗಗಳು ವುಂಟಾದವುಗಳು(ಉದಾಹರಣೆ) ಗುಣೋಪಾಧಿಗಳಿಗೆ ಶುಕ್ಲಾ-ಶಾಟಿಃ-ಶುಕ್ಲಃ-ಪಟಃ-ಶುಕ್ಲಂ-ವಸ್ತ್ರ-ದ್ರವ್ಯೋಪಾಧಿಗಳಿಗೆ, ದಂಡೀಪುರುಷಃ- ದಂಡಿನೀ-ಸ್ತ್ರೀ-ದಂಡಿ-ಕುಲಂ-ಕ್ರಿಯೋಪಾಧಿಗಳಿಗೆ-ಪಾಚಕಃ-ಪುರುಷಃ-ಪಾಚಿಕಾ- ಸ್ತ್ರೀ-ಪಾಚಕಂ-ಕುಲಂ.

ಮೂ॥ ಕೃತಃಕರ್ತರ್ಯಸಂಜ್ಞಾಯಾಂ

ಟೀ॥ ಸಂಜ್ಞಾವ್ಯತಿರಿಕ್ತವಾದ ಕರ್ತ್ರರ್ಥದಲ್ಲಿ ವಿಧಿಸಲ್ಪಟ್ಟ ಕೃತ್ಪ್ರತ್ಯಯಾಂತ ಶಬ್ದಗಳು ವಿಶೇಷ್ಯಲಿಂಗಗಳುಂಟಾದವುಗಳು (ಉದಾಹರಣೆ) ಕರ್ತಾ-

ಕರ್ತ್ರೀನ-ಕರ್ತೃನ-ಕುಂಭಕಾರಃ-ಕುಂಭಕಾರೀ, ಕುಂಭಕಾರಂ ಇತ್ಯಾದಿಗ. ಸಂಜ್ಞೆಯಲ್ಲಿ ಸಿದ್ಧಾಃ, ವ್ಯಾಘ್ರಃ ಎಂದು ಪು.

ಮೂ॥ ಕೃತ್ಯಾಃಕರ್ತರಿಕರ್ಮಣಿ॥೪೮೧॥

ಟೀ॥ ಕರ್ತ್ರರ್ಥದಲ್ಲಿಯೂ, ಕರ್ಮಾರ್ಥದಲ್ಲಿಯೂ, ವಿಧಿಸಲ್ಪಟ್ಟ ಕೃತ್ಯಾಃ-ಕೃತ್ಯಪ್ರತ್ಯಯಗಳು, ಅಂತವಾಗಿವುಳ್ಳ ಶಬ್ದಗಳು ವಿಶೇಷ್ಯಲಿಂಗಗಳುಳ್ಳಂಥವು, (ಉದಾಹರಣ) ಕರ್ತ್ರರ್ಥದಲ್ಲಿ ಭವ್ಯಃ-ತರುಃ-ಭವ್ಯಾ-ಲತಾ-ಭವ್ಯಂ-ಫಲಂ-ಕರ್ಮಾರ್ಥದಲ್ಲಿ ವಕ್ತವ್ಯಃ-ವಕ್ತವ್ಯಾ-ವಕ್ತವ್ಯಂ- ಭಾವಾರ್ಥದಲ್ಲಿ, ಸ್ಥಾತವ್ಯಂ-ಎಂದು ನ.

ಮೂ॥ ಅಣಾದ್ಯಂತಾಸ್ತೇನರಕ್ತಾದ್ಯರ್ಥೇನಾನಾರ್ಥಭೇದಕಾಃ॥

ಟೀ॥ ತೇನರಕ್ತಾದ್ಯರ್ಥೇ-ಅದರಿಂದ ಇದು ಬಣ್ಣಹಾಕಲ್ಪಟ್ಟದ್ದು ಎಂಬುವದು ಮೊದಲಾದ ಅರ್ಥಗಳಲ್ಲಿ ವಿಧಿಸಲ್ಪಟ್ಟ ಅಣಾದ್ಯಂತಾಃ-ಅಣ್ಪ್ರತ್ಯಯ ಮೊದಲಾದ ತದ್ಧಿತ ಪ್ರತ್ಯಯಗಳು ಅಂತವಾಗಿವುಳ್ಳ ಶಬ್ದಗಳು—ನಾನಾರ್ಥಭೇದಕಾಃ-ನಾನಾರ್ಥಗಳಿಗೆ ವಿಶೇಷಣಗಳಾಗಿ, ವಿಶೇಷ್ಯ ಲಿಂಗಗಳುಳ್ಳವುಗಳಾಗುವವು, (ಉದಾಹರಣ) ಕುಸುಂಭೇನರಕ್ತಃ-ಕೌಸುಂಭಃ-ಪಟಃ - ಕೌಸುಂಭೀ-ಶಾಟೀ-ಕೌಸುಂಭಂ-ವಸ್ತ್ರಂ-ಇಂದ್ರೋದೇವತಾಸ್ಯ ಐಂದ್ರಃ - ಪುರೋಡಾಶಃ - ಐಂದ್ರೀ-ಋಕ್-ಐಂದ್ರಂ-ಹವಿಃ-ಕೆಲವರು ನಾನಾರ್ಥ ಭೇದಕಾಃ ಎಂಬುವದು ಪ್ರತ್ಯೇಕವಾದಿ, ನಾನಾರ್ಥವಾಚಕಗಳಾದ ಶಬ್ದಗಳು, ವಿಶೇಷ್ಯ ಲಿಂಗಗಳುಳ್ಳವಾಗುವವೆಂದು ಅರ್ಥವಂ ಹೇಳಿದರು ಅದಕ್ಕೆ (ಉದಾಹರಣ) ಶಿವೋರುದ್ರಃ, ಶಿವಾಗೌರೀ, ಶಿವಂಭದ್ರಂ.

ಇತಿ ವಾಚ್ಯಲಿಂಗ ಶೇಷಃ.

ಮೂ॥ ಷಟ್ಸಂಜ್ಞಕಾಸ್ತ್ರಿಷುಸಮಾಯುಷ್ಮದಸ್ಮತ್ತಿಙವ್ಯಯಂ॥೪೮೩॥

ಟೀ॥ ಷಟ್ಸಂಜ್ಞಕ ಶಬ್ದಗಳೂ ಯುಷ್ಮಚ್ಛಬ್ದವೂ ಅಸ್ಮಚ್ಛಬ್ದವೂ ತಿಙಂತಗಳೂ ಅವ್ಯಯಗಳೂ (ತ್ರಿಷುಸಮಾಃ) ಮೂರುಲಿಂಗಗಳಲ್ಲಿಯೂ ಏಕರೂಪಗಳಾಗಿರುವವು, ಷಟ್ಸಂಜ್ಞಕಗಳೆಂದರೆ - ಷಕಾರಾಂತ, ನಕಾರಾಂತ ಸಂಖ್ಯಾವಾಚಕಗಳೂ, ಕತಿಶಬ್ದವು ಉದಾಹರಣೆ* ಷಕಾರಾಂತ ಸಂಖ್ಯೆಗೆ ಷಟ್ಪುರುಷಾಃ-ಷಟ್ಸ್ತ್ರಿಯಃ-ಷಟ್ಕುಲಾನಿ, ನಕಾರಾಂತಸಂಖ್ಯೆಗೆ - ಪಂಚಪುರುಷಾಃ-ಪಂಚಸ್ತ್ರಿಯಃ - ಪಂಚ ಇಂದ್ರಿಯಾಣಿ - ಕತಿ ಶಬ್ದಕ್ಕೆ, ಕತಿ ಪುರುಷಾಃ-ಕತಿಸ್ತ್ರಿಯಃ-ಕತಿಕುಲಾನಿ-ಯುಷ್ಮಚ್ಛಬ್ದಕ್ಕೆ, ತ್ವಂ-ಪುಮಾನ್- ತ್ವಂ-ಸ್ತ್ರೀ-ತ್ವಂ-ನಪುಂಸಕಂ, ತಿಙಂತಕ್ಕೆ, ಪಚತಿಪುಮಾನ್-ಪಚತಿ-ಸ್ತ್ರೀ- ಪಚತಿ ನಪುಂಸಕಂ, ಅವ್ಯಯಕ್ಕೆ ಉಚ್ಚೈರ್ಗಿರಿಃ-ಉಚ್ಚೈಃಶಾಲಾ- ಉಚ್ಚೈರ್ಗೃಹಂ-೨ ಇತಲಿಂಗಪ್ರಕರಣಂ.

